ನೆಮ್ಮದಿಯ ನಾಳೆ ನಮ್ಮದು

# ಹೊಸತು




ಏಪ್ರಿಲ್ ೨೦೦೮
ಬೆಲೆ : ರೂ. ೧೨



'ಶಾಂತಿಗಾಗಿ ಪರಮಾಣು ಶಕ್ತಿ – ಹುರುಳಿಲ್ಲದ ಮಾತು'

– ಪ್ರೊ|| ಜೆ. ಆರ್. ಲಕ್ಷ್ಮಣರಾವ್







# ಜನನಿ ಸುರಕ್ಷಾ ಯೋಜನೆ

ಜನನಿ ಸುರಕ್ಷಾ ಯೋಜನೆಯಡಿಯಲ್ಲಿ ಬಡತನ ರೇಖೆ ಒಳಗಿನ (BPL ಕುಟುಂಬದ ಆದಾಯ ರೂ. 17,000/- ಕ್ಕೂ ಕಡಿಮೆ ಇದ್ದಲ್ಲಿ) ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಗರ್ಭಿಣಿ ಮಹಿಳೆಯರಿಗೆ ಹೆರಿಗೆ ಸಮಯದಲ್ಲಿ ಧನ ಸಹಾಯ ಮಾಡಲಾಗುವುದು.

## ಗ್ರಾಮ ವಾಸಿಗಳಿಗೆ

- ಮನೆಯಲ್ಲಿಯೇ ಹೆರಿಗೆಯಾದರೆ, ರೂ. 500/-ಗಳನ್ನು ನೀಡಲಾಗುವುದು.
- ಆಸ್ಪತ್ರೆಯಲ್ಲಿ ಹೆರಿಗೆಯಾದರೆ ರೂ. 500 + 200 ಒಟ್ಟು ರೂ. 700/- ನೀಡಲಾಗುವುದು.

## ನಗರ ವಾಸಿಗಳಿಗೆ

- ಮನೆಯಲ್ಲಿಯೇ ಹೆರಿಗೆಯಾದರೆ, ರೂ. 500/-ಗಳನ್ನು ನೀಡಲಾಗುವುದು.
- ಆಸ್ಪತ್ರೆಯಲ್ಲಿ ಹೆರಿಗೆಯಾದರೆ ರೂ. 500 + 100 ಒಟ್ಟು ರೂ. 600/- ನೀಡಲಾಗುವುದು.
- ಸಿಸೇರಿಯನ್ ಆದಲ್ಲಿ:
  - ಖಾಸಗಿ ಆಸ್ಪತ್ರೆಯಲ್ಲಿ ಆದರೆ ರೂ. 1500/-
  - ಸರ್ಕಾರಿ ಆಸ್ಪತ್ರೆಯಲ್ಲಿ ರೂ. 700/- ನೀಡಲಾಗುವುದು.

## ಈ ಸೌಲಭ್ಯ ಪಡೆಯಲು ಈ ಕೆಳಕಂಡ ಷರತ್ತುಗಳಿರುತ್ತವೆ

- ಗರ್ಭಿಣಿಯು ಆರೋಗ್ಯ ಸಹಾಯಕಿ/ಆರೋಗ್ಯ ಕೇಂದ್ರದಲ್ಲಿ ಹೆಸರನ್ನು ನೋಂದಾಯಿಸಿಕೊಂಡಿರಬೇಕು.
- 3 ಬಾರಿ ವೈದ್ಯರಿಂದ ತಪಾಸಣೆ ಮಾಡಿಸಿಕೊಂಡಿರಬೇಕು.
- 100 ಕಬ್ಬಿಣಾಂಶ ಮಾತ್ರೆಗಳನ್ನು ಹಾಗೂ 2 ಟಿ. ಟಿ. ಚುಚ್ಚು ಮದ್ದು ತೆಗೆದುಕೊಂಡಿರಬೇಕು.
- ಈ ಯೋಜನೆಯ ಲಾಭ ಪಡೆಯಲು (ಇದಕ್ಕೆ ಸಂಬಂಧಿಸಿದ) BPL Card ಅನ್ನು ನಿಮ್ಮ ವ್ಯಾಪ್ತಿಗೆ ಬರುವ ತಹಸೀಲ್ದಾರ್ ಅಥವಾ ನಿಮ್ಮ ಗ್ರಾಮ ಪಂಚಾಯಿತಿ ಅಧ್ಯಕ್ಷರಿಂದ ಪಡೆಯಬಹುದು.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವರು ಜಾತಿ ಪ್ರಮಾಣ ಪತ್ರ ಮಾತ್ರ ಸಲ್ಲಿಸುವುದು.

ಜನನಿ ಸುರಕ್ಷಾ ಯೋಜನೆ ಬಗ್ಗೆ ದೂರು ಸಲ್ಲಿಸುವವರು
ಜಿಲ್ಲಾ ಆರೋಗ್ಯ ಅಧಿಕಾರಿಗಳ ಕಛೇರಿಯಲ್ಲಿರುವ ಅಧಿಕಾರಿಗಳ ಬಳಿ ದೂರು ನೀಡಿ.

**ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ**

ಪ್ರಕಟಣೆ : ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್.),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಆಚಾರ್ಯ, ಕೆದಿಲಾಯ, ಶ್ರೀಹರಿ, ಎನ್. ಆರ್. ಬೊಮ್ನಳ್ಳಿ

ಮುಖಚಿತ್ರ : ಪ್ರೊ|| ಜೆ. ಆರ್. ಲಕ್ಷ್ಮಣರಾವ್

ವರ್ಣಚಿತ್ರ : ಕೆ. ಪಿ. ಸ್ವಾಮಿ, ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಕ್ಯೂ**ಬಾದ ಅಧ್ಯಕ್ಷ ಡಾ|| ಫಿಡೆಲ್ ಕ್ಯಾಸ್ಟ್ರೋ ನಿವೃತ್ತರಾಗಿದ್ದಾರೆ. ಇನ್ನು ಮುಂದೆ 'ವಿಚಾರಗಳ ಸಂಘರ್ಷ'ದಲ್ಲಷ್ಟೇ ಪಾಲ್ಗೊಳ್ಳುವುದಾಗಿ ಜನತೆಗೆ ತಿಳಿಸಿ ಅಧಿಕಾರದಿಂದ ದೂರಸರಿದಿದ್ದಾರೆ. ಎಂಭತ್ತರ ವಯಸ್ಸಿನವರೆಗೂ ಅವರು ಜೀವಂತವಾಗಿ ಉಳಿದಿರುವುದೇ ಒಂದು ಅದ್ಭುತ. ಏಕೆಂದರೆ ಅವರನ್ನು ಕೊಲ್ಲಲು ಅಮೆರಿಕಾದ ಸರ್ಕಾರವು ಕಳೆದ ಐವತ್ತು ವರ್ಷಗಳಿಂದ ಏನಿಲ್ಲವೆಂದರೂ ನೂರು ಪ್ರಯತ್ನಗಳನ್ನು ಮಾಡಿದೆ. ಸ್ವತಂತ್ರ ರಾಜ್ಯಗಳ ಜನಪ್ರತಿನಿಧಿಗಳಾಗಿ ನಾಯಕರಾಗಿರುವವರನ್ನು ಕೊಲ್ಲುವುದು ತನ್ನ ಹಕ್ಕೆಂದು ಅಮೆರಿಕಾ ಪ್ರತಿಪಾದಿಸುತ್ತದೆ. ಪ್ರಜಾಪ್ರಭುತ್ವದ ಅಮೆರಿಕಾ ಶೈಲಿ ಎಂದು ಇದನ್ನು ಬಣ್ಣಿಸಬೇಕು.

ಅಮೆರಿಕಾ ಬೆಂಬಲದಿಂದ ಬಟಿಸ್ಟಾ ಎಂಬುವನು ಕ್ಯೂಬಾದಲ್ಲಿ ಸರ್ವಾಧಿಕಾರಿಯಾಗಿ ಹಲವು ವರ್ಷಗಳ ಕಾಲ ಅಧ್ಯಕ್ಷನಾಗಿದ್ದ. ಅವನ ವಿರುದ್ಧ ಹೋರಾಟ ನಡೆಸುವಾಗ ಕೈದಿಯಾಗಿ ಕ್ಯಾಸ್ಟ್ರೋ ಸಿಕ್ಕಿಬಿದ್ದಿದ್ದರು. ಅವರ ವಿಚಾರಣೆಯನ್ನು ಗುಟ್ಟಾಗಿ ಆಸ್ಪತ್ರೆಯೊಂದರಲ್ಲಿ ನಡೆಸಲಾಗಿತ್ತು. ''ಇತಿಹಾಸವು ನನ್ನನ್ನು ಖುಲಾಸೆ ಮಾಡುತ್ತದೆ'' ಎಂದು ವಾದಿಸಿದ ಕ್ಯಾಸ್ಟ್ರೋ ಹೇಳಿಕೆ ಇಂದು ಜಗತ್ಪ್ರಸಿದ್ಧ. ಮನ್ನಿಸಲ್ಪಟ್ಟದ್ದಷ್ಟೇ ಅಲ್ಲ, ಕ್ಯಾಸ್ಟ್ರೋ ಇತಿಹಾಸದ ನಿರ್ಮಾಪಕರೂ ಆದರು.

ಅರ್ಧ ಶತಮಾನದ ಕಾಲ ಕ್ಯೂಬಾವನ್ನು ಮುನ್ನಡೆಸಿ ವಿಶ್ವದಲ್ಲೇ ಶಿಕ್ಷಣ ಮತ್ತು ಆರೋಗ್ಯದ ಕ್ಷೇತ್ರಗಳಲ್ಲಿ ತಮ್ಮ ದೇಶವನ್ನು ಅಗ್ರರಾಷ್ಟ್ರವನ್ನಾಗಿ ಮಾಡಿರುವ ಕ್ಯಾಸ್ಟ್ರೋ ಮುಖ್ಯವಾಗಿ ಆಸರೆ ಪಡೆದದ್ದು ಜನರ ನಡುವೆ ಮತ್ತು ಜನಮಾನಸದಲ್ಲಿ. ಕಾನೂನು ಬಾಹಿರ ಆರ್ಥಿಕ ದಿಗ್ಬಂಧನಗಳನ್ನು ಹೇರಿರುವ ಅಮೆರಿಕಾ ಯಾವಾಗಲೂ ಕ್ಯೂಬಾದ ಪತನಕ್ಕಾಗಿ ಕಾಯುತ್ತಾ ಬಂದಿದೆ. ಅದಕ್ಕಾಗಿ ಅಪಾರ ಹಣವನ್ನು ಸುರಿದಿದೆ, ಏಜೆಂಟರನ್ನು ನೇಮಿಸಿಕೊಂಡಿದೆ. ಅಮೆರಿಕಾದ ಫ್ಲಾರಿಡಾ ರಾಜ್ಯದಲ್ಲಿ ಕ್ಯೂಬಾದಿಂದ ವಲಸೆ ಹೋದವರು ಲಕ್ಷಗಟ್ಟಲೆ ಇದ್ದಾರೆ. ಅವರನ್ನೆಲ್ಲಾ ಅಮೆರಿಕಾ ಸಾಕಿ ಸಲಹುತ್ತಾ ಬಂದಿರುವುದು ಕ್ಯೂಬಾದ ಸ್ವತಂತ್ರ ಸಮಾಜವಾದಿ ಅಸ್ತಿತ್ವವನ್ನು ಬುಡಮೇಲು ಮಾಡುವ ಉದ್ದೇಶದಿಂದ. ಯಾವುದೇ ಅಮೆರಿಕಾದ ಅಭ್ಯರ್ಥಿಯೂ ಈ ನಿರ್ವಸಿತ ಕ್ಯೂಬನ್ನರ ಮತಗಳನ್ನು ಪಡೆಯದೆ ಫ್ಲಾರಿಡಾ ರಾಜ್ಯದಲ್ಲಿ ಅಧ್ಯಕ್ಷೀಯ ಚುನಾವಣೆಯಲ್ಲಿ ಗೆಲ್ಲಲಾರ. ಆದ್ದರಿಂದ ಇವರೆಲ್ಲಾ ಪರತಂತ್ರ ಜೀವಿಗಳಾಗಿದ್ದರೂ ಪ್ರಬಲ ರಾಜಕೀಯ ಶಕ್ತಿ ಪಡೆದಿದ್ದಾರೆ. ಇವರನ್ನು ಬಳಸಿ ಕ್ಯೂಬಾದ ಜನತಾಶಕ್ತಿಯನ್ನು ಮುರಿಯಲು ಅಮೆರಿಕಾದ ಪ್ರತಿಯೊಬ್ಬ ಅಧ್ಯಕ್ಷನೂ ಯತ್ನಿಸಿದ್ದಾನೆ, ಸೋತಿದ್ದಾನೆ. ಮುಂದೆ ಬರುವ ಅಧ್ಯಕ್ಷರುಗಳಿಗೆ ಕ್ಯಾಸ್ಟ್ರೋನನ್ನು ಪದಚ್ಯುತಗೊಳಿಸುವ ಕೆಲಸವಿರುವುದಿಲ್ಲ, ಆದರೆ ಕ್ಯೂಬಾದ ಸ್ವಾತಂತ್ರ್ಯ ಹರಣಕ್ಕಾಗಿ ಕುತಂತ್ರಗಳನ್ನು ರಚಿಸುವ ''ಮಹಾನ್ ಕಾರ್ಯ'' ಮುಂದುವರಿಯುತ್ತದೆ. ಕ್ಯಾಸ್ಟ್ರೋ ವ್ಯಕ್ತಿತ್ವದ ಛಾಯೆಯಲ್ಲಿ ಬೆಳೆದಿರುವ ಕ್ಯೂಬಾದ ಜನತೆ ರಾವುಲ್ ಕ್ಯಾಸ್ಟ್ರೋ ನೇತೃತ್ವದಲ್ಲಿ ತನ್ನ ಸಮಾಜವಾದಿ ವ್ಯವಸ್ಥೆಯನ್ನು ಪೋಷಿಸಿಕೊಂಡು, ಅಂತರರಾಷ್ಟ್ರೀಯವಾಗಿ ಬೇರೆ ರಾಷ್ಟ್ರಗಳ ಸಾರ್ವಭೌಮತ್ವವನ್ನು ಹಿಂದಿನಂತೆಯೇ ಸಂರಕ್ಷಿಸುತ್ತಾ, ತನ್ನ ದೇಶದ ಜನರ ಆಶೋತ್ತರಗಳನ್ನು ಪೂರೈಸುವತ್ತ ಎಂದಿನಂತೆ ದಾಪುಗಾಲುಗಳನ್ನು ಹಾಕುವಲ್ಲಿ ಯಶಸ್ವಿಯಾಗಲೆಂದು ಹಾರೈಸುತ್ತೇವೆ.

*  *  *

ಕೇಂದ್ರದ ವಾರ್ಷಿಕ ಆಯವ್ಯಯ ಅಂದಾಜಿನಲ್ಲಿ ಏನೆಲ್ಲಾ ಆಶ್ವಾಸನೆಗಳನ್ನು ನೀಡಲಾಗಿದೆ ಮತ್ತು ಜನರ ಮೇಲೆ ನಿಜಕ್ಕೂ ಹೇರಲಾಗುವ ಹೊರೆ ಎಂತಹುದೆಂಬುದನ್ನು ಬೇರೆಡೆ (ಸಂಪಾದಕೀಯದಲ್ಲಿ) ಸ್ಥೂಲವಾಗಿ ಚರ್ಚಿಸಲಾಗಿದೆ. ಜನರ ಅನುಭವಕ್ಕಿಂತಲೂ ದೊಡ್ಡ ಮತ್ತು ವಿಶ್ವಾಸಾರ್ಹ ವಿಶ್ಲೇಷಣೆ ಬೇರಾವುದೂ ಇರುವುದಿಲ್ಲ. ಆ ಅನುಭವವು ಯಥಾಪ್ರಕಾರ ಕಹಿಯಾಗಿರುತ್ತದೆಂಬುದು ಅರ್ಥಮಂತ್ರಿ ಚಿದಂಬರಂ ಅವರ ಅಸ್ತಿತ್ವದಿಂದಲೇ ಸಾಬೀತಾಗುತ್ತದೆ. ಆದರೆ ಮಾನ್ಯ ಸಚಿವರು ತಮ್ಮ ಸುಪುತ್ರನಿಗೆ ಕಹಿಯ ಬದಲು ಸಿಹಿಯನ್ನು ಹೇರಳವಾಗಿ ಸವಿಯಲು ಅನುಕೂಲ ಕಲ್ಪಿಸಿಕೊಟ್ಟಿದ್ದಾರೆ, ಅದನ್ನು ಆಗಾಗ್ಗೆ ಮಾಡುತ್ತಲೇ ಬಂದಿದ್ದಾರೆ. ಇತ್ತೀಚಿನ ಬಳುವಳಿಯು ಕಣ್ಣು ಕುಕ್ಕುವಂತಿದೆ. ಕೆನರಾ ಬ್ಯಾಂಕ್ ತನ್ನ ವಿಶಿಷ್ಟ ಲಾಂಛನವನ್ನು ಈವರೆಗೆ ಹೊಂದಿತ್ತು ಮತ್ತು ಅದು ಜನರನ್ನು ಆಕರ್ಷಿಸಿತ್ತು. ಅದರ ಜಾಗದಲ್ಲಿ ಹೊಸದೊಂದು ಬಂದಿದೆ. ಜಂಟಿಗೊಳಿಸುವ ಪ್ರಕ್ರಿಯೆಯನ್ನು ಈ ಹೊಸ ಚಿಹ್ನೆಯು ಸೂಚಿಸುತ್ತದಂತೆ. ಚಿಹ್ನೆಯನ್ನು ಬದಲಿಸಲು ಕೆನರಾ ಬ್ಯಾಂಕು ಖರ್ಚು ಮಾಡಬೇಕಾದ್ದು ಸುಮಾರು ಮುನ್ನೂರು ಕೋಟಿ ರೂಪಾಯಿಗಳೆಂದು ಹೇಳಲಾಗಿದೆ. ಬದಲಾಯಿಸುವ ಕೆಲಸದ ಕಾಂಟ್ರಾಕ್ಟ್ ಪಡೆದಿರುವವರು ಚಿದಂಬರಂ ಅವರ ಮಗ. ಕಾಂಟ್ರಾಕ್ಟ್ ಹಣ ಸುಮಾರು ೪೦ ಕೋಟಿಗಳೆಂದು ಅಂದಾಜು ಮಾಡಲಾಗಿದೆಯೆನ್ನುತ್ತಾರೆ. ಜನರಿಗೆ ಏನಾದರೂ ಚಿಂತೆಯಿಲ್ಲ,

೭ನೇ ಪುಟಕ್ಕೆ



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೯ ಸಂಚಿಕೆ-೯ ಏಪ್ರಿಲ್ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೯೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**


## ಕೇಂದ್ರದ ಬಜೆಟ್ : ಬರಲಿರುವ ಸಮಸ್ಯೆಗಳ ಸರಮಾಲೆ

**ಸಂಪಾದಕೀಯ**

**ಈ** ಸಲದ ಕೇಂದ್ರದ ಬಜೆಟ್‌ನಲ್ಲಿ ಗಮನಿಸಬಹುದಾದ ಮುಖ್ಯ ವಿಷಯಗಳು ಎರಡು: ಒಂದು ಕೃಷಿಕ್ಷೇತ್ರದಲ್ಲಿನ ಅವನತಿ ಮತ್ತು ಅದರಲ್ಲಿ ಪರಿಣಾಮಕಾರಿಯಾದ ಬೆಳವಣಿಗೆ ಇಲ್ಲದೆ ಒಟ್ಟಾರೆ ಆರ್ಥಿಕ ಪ್ರಗತಿಯನ್ನು ಶೇ. ೯-೧೦ರ ಮಟ್ಟದಲ್ಲಿ ಕಾಯ್ದುಕೊಳ್ಳುವುದು ಅಸಾಧ್ಯವೆಂಬ ತಿಳಿವಳಿಕೆ. ಇನ್ನೊಂದು, ಬೆಲೆ ಏರಿಕೆಯನ್ನು, ಹಣದುಬ್ಬರವನ್ನು ಸದ್ಯದಲ್ಲಿ ನಿಯಂತ್ರಿಸುವುದು ಸರ್ಕಾರಕ್ಕೆ ಅಸಾಧ್ಯವೆಂಬುದು. ಕೃಷಿಕ್ಷೇತ್ರಕ್ಕೆ ಸಾರಿರುವ ಸಾಲಮನ್ನಾ ಕೇವಲ ರೈತರ ಬಗ್ಗೆ ಅನುಕಂಪಕ್ಕೆ ಸಂಬಂಧಿಸಿದ್ದಲ್ಲ; ಅದು ಬ್ಯಾಂಕುಗಳಿಗೆ ನೆರವು ನೀಡುವ ಉದ್ದೇಶವನ್ನೂ ಒಳಗೊಂಡಿದೆ. ೬೦,೦೦೦ ಕೋಟಿಗಿಂತ ಹಲವು ಪಟ್ಟು ಮಿಗಿಲಾದ ರೈತರ ಸಾಲದ ಹೊರೆ ಸಾಂಪ್ರದಾಯಿಕ ಮಾರ್ಗಗಳಾದ ಲೇವಾದೇವಿ ವ್ಯವಸ್ಥೆಯದು. ಇದರ ಬಗ್ಗೆ ತಾನೇನೂ ಮಾಡಲಾರೆನೆಂದು ವಿತ್ತ ಸಚಿವರು ಕೈ ಚೆಲ್ಲಿದ್ದರೆ, ಸಾಲಮನ್ನಾ ನೀತಿಯನ್ನು ಚುನಾವಣಾ ತಂತ್ರವಾಗಿ ಹಾಗೂ ರಾಹುಲ್ ಗಾಂಧಿ ನಾಯಕತ್ವವನ್ನು ನಿರ್ಮಿಸುವ ತಂತ್ರವಾಗಿ ಬಳಸುತ್ತಿರುವುದು ಸ್ಪಷ್ಟ. ಈ ರಾಜಕೀಯವನ್ನು ನಮ್ಮ ರೈತರು ಅರಿತುಕೊಳ್ಳಲಾರದಷ್ಟು ದಡ್ಡರೇನಲ್ಲ. ಈ ಸಾಲ ಹೇಗೂ ವಸೂಲಾಗುತ್ತಿರಲಿಲ್ಲ. ಆದರೆ ಬ್ಯಾಂಕುಗಳು ಇದು ಮನ್ನಾ ಆಗದೆ ಹಾಗೂ ಸರ್ಕಾರದಿಂದ ಈ ನಷ್ಟವನ್ನು ತುಂಬಿಸಿಕೊಳ್ಳದೆ ಹೊಸ ಸಾಲವನ್ನು ನೀಡುವಂತಿರಲಿಲ್ಲ. ಬ್ಯಾಂಕುಗಳು ಹಲವಾರು ತಿಂಗಳುಗಳಿಂದ ಷೇರುಪೇಟೆಯಲ್ಲಿ ತಮ್ಮ ಬೆಲೆ ಕಳೆದುಕೊಳ್ಳುತ್ತಿರುವುದಕ್ಕೆ ಕಾರಣ ವಸೂಲಾಗದ ಹಲವು ರೀತಿಯ ಸಾಲಗಳಿಂದಾಗಿ; ಕೇವಲ ರೈತರ ಸಾಲದಿಂದ ಮಾತ್ರ ಅಲ್ಲ. ಉದ್ಯಮಗಳಿಂದ ವಸೂಲಾಗಬೇಕಾದ ಸಾಲದ ಪ್ರಮಾಣ ೬೦ ಸಾವಿರಕೋಟಿಗಿಂತ ಅಪಾರವಾದುದು. ಆಗಾಗ್ಗೆ ಅವರಿಗೆ ಪರೋಕ್ಷವಾಗಿ ಸಾಲಮನ್ನಾ ಮಾಡುತ್ತಲೇ ಬಂದಿರುವ ಸರ್ಕಾರ, ರೈತರಿಗೆ ಪ್ರತ್ಯೇಕವಾಗಿ ವಿಶಿಷ್ಟವಾಗಿ ಏನೂ ಮಾಡಿಲ್ಲ. ರಾಹುಲ್ ಗಾಂಧಿಯವರು ಲೋಕಸಭೆಯಲ್ಲಿ ಮಾಡಿದ ಬಜೆಟ್ ಕುರಿತ ಭಾಷಣವನ್ನು ಬಜೆಟ್ ತಯಾರಿಸಿದವರೇ ಸಿದ್ಧಪಡಿಸಿರಬಹುದು ! ಈಗ ಸಾಲಮನ್ನಾ ಮಾಡುವುದಕ್ಕೆ ಹಿಡುವಳಿ ೨ ಹೆಕ್ಟೇರ್ ಸಾಲದು ಎಂಬ ಅವರ 'ಪ್ರೌಢ' ಸಲಹೆಗೆ ಮನ್ನಣೆ ನೀಡಿ ಅವರನ್ನು ರೈತರ ನಾಯಕನ ಪಟ್ಟಕ್ಕೆ ಏರಿಸುವುದು ತಡವಾಗುವುದಿಲ್ಲ. ನೆಹರೂರವರ ಕಾಲದಲ್ಲಿ ಯುವ ಇಂದಿರಾ ಗಾಂಧಿಯನ್ನು ಕಾಂಗ್ರೆಸ್ ಪಕ್ಷದ ಅಧ್ಯಕ್ಷರನ್ನಾಗಿಸಿದಾಗಲೂ ಇದೇ ತಂತ್ರವನ್ನೇ ಅನುಸರಿಸಿದ್ದು.

ಕೃಷಿಕ್ಷೇತ್ರದ ಸಮಸ್ಯೆಯ ಸ್ವರೂಪವನ್ನು, ಪರಿಹಾರವನ್ನು ಸ್ವಾಮಿನಾಥನ್ ಸಮಿತಿ ಬಿಡಿಸಿಟ್ಟಿದೆ. ಅದರಲ್ಲಿ ಸಾಲದ ಹೊರೆ ಮಾತ್ರವಲ್ಲದೆ, ಹಿಡುವಳಿಯ ಪ್ರಮಾಣ, ಭೂಮಾಲಿಕತ್ವ, ಕೃಷಿ ಉದ್ಯಮದ ಮೂಲಸರಕುಗಳ ಲಭ್ಯತೆ ಮತ್ತು ಅವುಗಳ ಬೆಲೆ, ತಂತ್ರಜ್ಞಾನದ ಪೂರೈಕೆ, ರೈತರೇ ನಿರ್ವಹಿಸುವ ಮಾರುಕಟ್ಟೆ, ಬೆಳೆದ ಬೆಳೆಗೆ ಲಾಭದಾಯಕ ಬೆಲೆ, ಮುಂತಾದುವೆಲ್ಲಾ ಇವೆ. ೧೯೯೦ರಿಂದಲೂ ನಗರ ಕೇಂದ್ರಿತ ಬಂಡವಳಿಗ ಅರ್ಥನೀತಿಯನ್ನು ಹೊತ್ತ ಸರಕಾರಗಳು ಗ್ರಾಮೀಣ ಕ್ಷೇತ್ರವನ್ನು ಸಂಪೂರ್ಣವಾಗಿ ಮರೆತಿದ್ದು, ಈ ಕ್ಷೇತ್ರದಲ್ಲಿ ಗಣನೀಯ ಪ್ರಮಾಣದಲ್ಲಿ ಬಂಡವಾಳ ಹೂಡಿಕೆಯಾಗದೆ ಇಡೀ ಕ್ಷೇತ್ರ ಸೊರಗಿ, ಈಗ ಆಹಾರ ಸಾಮಗ್ರಿಯನ್ನು ಆಮದು ಮಾಡಿಕೊಳ್ಳುವ ಪರಿಸ್ಥಿತಿಗೆ ಬಂದಿರುವುದು ಸ್ಪಷ್ಟ. ಎರಡು ದಶಕಗಳ ಅನಾದರಣೆಯನ್ನು ಈ ಒಂದು ವರ್ಷದ ಬಜೆಟ್ ಸರಿಪಡಿಸಲು ಸಾಧ್ಯವಿಲ್ಲ. ರೈತರ ಆತ್ಮಹತ್ಯೆಗೆ ಕಾರಣ ಇದಕ್ಕೂ ಮೀರಿದ್ದು. ಆಹಾರ ಸ್ವಾವಲಂಬನೆಯ ನೀತಿಯನ್ನು ಕೈಬಿಟ್ಟದ್ದು ಒಂದು ಪ್ರಮುಖ ಕಾರಣ.

ಬೆಲೆ ಏರಿಕೆ, ಹಣದುಬ್ಬರ ಎರಡೂ ಪರಸ್ಪರ ಪೂರೈಕೆಯ ಸ್ವರೂಪದ್ದು. ಕೃಷಿಕ್ಷೇತ್ರದ ಬವಣೆಯೂ ಇದಕ್ಕೆ ಒಂದು ಬಹುಮುಖ್ಯವಾದ ನೇರ ಕಾರಣ. ಕೇವಲ ಬೇಡಿಕೆ, ಉತ್ಪಾದನೆ ಮತ್ತು ಪೂರೈಕೆಯನ್ನು ಅವಲಂಬಿಸಿದ ಬೆಳವಣಿಗೆಯ ಮಾರ್ಗವು ಸಾಮಾನ್ಯ ಜನರು ಈ ಪ್ರಕ್ರಿಯೆಯಲ್ಲಿ ಭಾಗವಹಿಸುವವರು ಎಂಬುದನ್ನು ಪರಿಸ್ಥಿತಿ ಉಲ್ಬಣವಾಗುವವರೆಗೂ ಗಮನಿಸುವುದಿಲ್ಲ. ಗಮನಿಸಿದಾಗಲೂ ಅವರ ವೈಯಕ್ತಿಕ ಆದಾಯ ಈ ಮೂರು ಪ್ರಕ್ರಿಯೆಯಲ್ಲಿ ವಹಿಸುವ ಮಹತ್ವದ ಪಾತ್ರವನ್ನು ಗಮನಿಸುವುದಿಲ್ಲ. ಯಾವುದೋ ಒಂದು ಸಣ್ಣ ವರ್ಗಕ್ಕೆ ದೊರಕುವ ಆದಾಯ ತೆರಿಗೆ ವಿನಾಯ್ತಿ, ಕಡಿತ, ವೇತನ ಆಯೋಗ ಒಂದಿಷ್ಟು ಪರಿಹಾರವನ್ನು ನೀಡುತ್ತದೆಯಾದರೂ ಅಪಾರ ನಿರುದ್ಯೋಗ ಮತ್ತು ಕೊಳ್ಳುವ ಶಕ್ತಿಯಲ್ಲಿ ಕೊರತೆಯನ್ನು ಗಮನಿಸಿ, ಎಲ್ಲರಿಗೂ ಪರಿಹಾರ ನೀಡಲು ಸಮರ್ಥವಾಗುವುದಿಲ್ಲ. ಒಟ್ಟಾರೆ ಬೆಳವಣಿಗೆಯ ದರ ಕಡಿಮೆಯೇ ಆದರೂ, ಎಲ್ಲರನ್ನು ಒಳಗೊಂಡ ಬೆಳವಣಿಗೆ ಮಾತ್ರ ನಿರಂತರ ಬೆಳವಣಿಗೆಗೆ ಅಡಿಪಾಯವಾಗಬಹುದೇ ವಿನಾ ವಿಶ್ವದಲ್ಲೇ ಅತಿ ಹೆಚ್ಚು ಸಂಖ್ಯೆಯ ಅತಿಶ್ರೀಮಂತರನ್ನು ಸೃಷ್ಟಿಸುವ, ಸತತ ಏರಿಳಿಕೆಯ ಅಸಮಾನ ಬೆಳವಣಿಗೆಯ ಮಾರ್ಗದಿಂದ ಇದು ಸಾಧ್ಯವಿಲ್ಲ. ಆದರೆ ಇಂಥ ಸಮಾಜದ ಸ್ಥಾಪನೆ ಬಂಡವಳಿಗ ನೀತಿಯ ಉದ್ದೇಶವೆಂದು ಯಾರು ಹೇಳಿದ್ದಾರೆ ?

ಬಡ್ಡಿ ದರ ಏರಿಸುವುದು, ಇಳಿಸುವುದು ಎರಡನ್ನು ಮಾತ್ರ ತಿಳಿದ ಪಶ್ಚಿಮದ ಮಾದರಿಯಲ್ಲಿ ಅಲ್ಲಿಯ ಬ್ಯಾಂಕುಗಳು ದೇಶದ ಸಮಸ್ತ ಜನರನ್ನು ಆವರಿಸಿದ ವ್ಯವಸ್ಥೆ. ಅಲ್ಲೂ ಅಮೆರಿಕದ ಗ್ರೀನ್‌ಸ್ಪಾನ್ ಎಂಬ 'ಮಾಂತ್ರಿಕ' ಹದಿನೈದು ವರ್ಷ ದೀರ್ಘಕಾಲ ನಡೆಸಿದ ಎಲ್ಲ ಕಸರತ್ತುಗಳೂ ಅಮೆರಿಕದ ಆರ್ಥಿಕತೆಯ ಅಧಃಪತನವನ್ನು ತಡೆಯಲಾಗಲಿಲ್ಲ. ಅಮೆರಿಕದ ರಿಸರ್ವ್ ಬ್ಯಾಂಕಿನ ನೀತಿಗಳನ್ನು ಮಕ್ಕಿಕಾಮಕ್ಕಿ ಅನುಕರಿಸುವ ನಮ್ಮ ರಿಸರ್ವ್ ಬ್ಯಾಂಕ್, ನಮ್ಮ ದೇಶದ ಬ್ಯಾಂಕುಗಳು, ಜನಸಮುದಾಯದ ಬಹುಭಾಗವನ್ನು ತಟ್ಟುವುದೇ ಇಲ್ಲ ಎಂಬುದನ್ನು ಗಮನಿಸುವುದೇ ಇಲ್ಲ. ಜಾಗತಿಕವಾಗಿ ಆಹಾರದ ಕೊರತೆ, ಬೆಲೆ ಏರಿಕೆ, ಅಮೆರಿಕದ ಆರ್ಥಿಕ ಹಿಂಜರಿಕೆ ಮುಂತಾದ ಕಾರಣಗಳನ್ನು ನಮ್ಮ ಆಂತರಿಕ ಸಮಸ್ಯೆಗೆ ಕಾರಣವಾಗಿ ಒಡ್ಡುವ ಅರ್ಥಮಂತ್ರಿ ಹೊಣೆಗೇಡಿ ಮತ್ತು ಅದು ಸರ್ಕಾರದ ನೀತಿಯ ದಿವಾಳಿತನ. ಯಾವುದೇ ಬೆಳವಣಿಗೆಯ ನೀತಿಯೂ ಅದರಲ್ಲೂ ಭಾರತದಂಥ ದೊಡ್ಡ ಜನಬಾಹುಳ್ಯದ ದೇಶ, ಆಂತರಿಕ ಆಹಾರ ಸ್ವಯಂಪೂರ್ಣತೆಯ ಗುರಿಯನ್ನು ಆದ್ಯತೆಯಾಗಿ ಗುರುತಿಸುವುದು ಅನಿವಾರ್ಯ. ಹೀಗಾಗಿ ಬೆಳವಣಿಗೆಯ ದರ ಶೇ. ೯ ಆದರೂ ಕೃಷಿಕ್ಷೇತ್ರದಲ್ಲಿ ಶೇ. ೨ರಷ್ಟು ಇಲ್ಲದಾಗ, ಹಣದುಬ್ಬರ ೫.೨ಕ್ಕೂ ಮಿಕ್ಕು ಹೆಚ್ಚಿದರೆ, ಅದು ನಮ್ಮ ಆರ್ಥಿಕತೆ ಬೆಳೆಯದೆ ಸ್ಥಗಿತಹೊಂದಿದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇಷ್ಟನ್ನು ವಿತ್ತಮಂತ್ರಿ ಸುತ್ತಿ ಬಳಸಿ ಒಪ್ಪಿಕೊಂಡಿದ್ದಾರೆ. ಜನವರಿ ೨೦೦೮ರಲ್ಲಿ ಕೈಗಾರಿಕಾ ಕ್ಷೇತ್ರದ ಬೆಳವಣಿಗೆ ಕೇವಲ ೫.೨ ಎಂಬುದನ್ನು ಈಗಷ್ಟೆ ಹೊರಗೆಡಹಿದ್ದಾರೆ. ಎಲ್ಲ ಯಾವುದು ಹದಿನೆಂಟು ವರ್ಷಗಳ ಅರ್ಥನೀತಿಯ ದುಷ್ಪರಿಣಾಮವೋ ಅದನ್ನು ಈ ಒಂದು ಬಜೆಟ್ಟು ಸರಿಪಡಿಸಲು ಸಾಧ್ಯವಿಲ್ಲ. ಹಾಗೆ ಸರಿಪಡಿಸಲು ಅದು ಸಾಮಾಜಿಕ ನ್ಯಾಯವನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡ ಅರ್ಥ ನೀತಿಯಾಗಬೇಕಾದುದು ಅನಿವಾರ್ಯ.

ಆದರೆ ಈ ಬಜೆಟ್ಟನ್ನು ತಾರೀಫು ಮಾಡುತ್ತಾ ''ರೈತರು ಖಿನ್ನವಾಗಿದ್ದಾರೆ; ಅವರ ಪಾಶವೀ ಸಂವೇದನೆಯನ್ನು ಹೊಡೆದೆಬ್ಬಿಸಬೇಕು. ಅದು ಈ ಬಜೆಟ್ಟಿನಲ್ಲಿ ಆಗಿದೆ'' ಎಂದಿದ್ದಾರೆ ಪ್ರಧಾನಿ. ಸಾಮಾಜಿಕ ನ್ಯಾಯವೋ, ಅನ್ಯಾಯವೋ ಆದರೆ ಬೆಳವಣಿಗೆಯ ದರ ಮುಖ್ಯ; ಅದಕ್ಕೆ ಪಾಶವೀ ಸಂವೇದನೆ (ಎನಿಮಲ್ ಸ್ಪಿರಿಟ್) ಅಗತ್ಯವೆಂಬುವ ಇವರಿಗೆ ರೈತನ ಕೃಷಿಕರ್ಮವೂ ಒಂದು ಕೈಗಾರಿಕೆಯ ಮಾದರಿಯ ಉದ್ದಿಮೆ. ಹಾಗೆಂದು ಹೇಳಿ, ಈ ಬಜೆಟ್ಟು 'ಬಿಸಿನೆಸ್ ಲೈಕ್' ಆಗಿ ಕೃಷಿ ಕ್ಷೇತ್ರದ ಬೆಳವಣಿಗೆಗೆ ಆದ್ಯತೆ ನೀಡಿದೆ ಎನ್ನುತ್ತಾರೆ. ಇಲ್ಲಿ ಎಲ್ಲೂ 'ಮನುಷ್ಯ'ನ ಪಾತ್ರ, ಪ್ರಾಮುಖ್ಯತೆ ಅವರ ಅರ್ಥ ಚಿಂತನೆಯಲ್ಲಿ ಇಲ್ಲ. ಕಳೆದ ಎರಡು ದಶಕಗಳಲ್ಲಿ ನಮ್ಮ ಆಳುವ ವರ್ಗ ಅನುಸರಿಸುತ್ತಿರುವ ಬಹುಜನ ವಿರೋಧಿ ಅರ್ಥನೀತಿ, ವಿಶ್ವದಲ್ಲೇ ಅತಿ ಹೆಚ್ಚು ಸಂಖ್ಯೆಯ ಅತಿ ಶ್ರೀಮಂತರನ್ನು ಬೆಳೆಸುವುದರಲ್ಲಿ, ಅಸಮಾನತೆಯನ್ನು ಹೆಚ್ಚಿಸುವುದರಲ್ಲಿ ಸಫಲವಾಗಿದೆ. ಇದರಿಂದ ಬಹುಜನರಿಗೆ ಸೃಷ್ಟಿಯಾಗುವ ಮಾನವೀಯ ಸಮಸ್ಯೆಗಳ ಸ್ವರೂಪ, ಮನುಷ್ಯನನ್ನು ಕೇಂದ್ರವಾಗಿಸದ ಈ ನೀತಿಗೆ ಸ್ಪಷ್ಟವಾಗುವುದಿಲ್ಲ. ಆದ್ದರಿಂದ ಈಗಿರುವ ನಾಯಕರಿಂದ ಈ ಮಾರ್ಗದ ಬದಲಾವಣೆಯನ್ನು ನಿರೀಕ್ಷಿಸಲಾಗದು. ಅದರ ನಾಯಕತ್ವದ ಬದಲಾವಣೆಯನ್ನು ಜನತೆ ತರಬೇಕು. ಅದಕ್ಕೆ ವಿಶಿಷ್ಟವಾದ ರಾಜಕೀಯ ನಾಯಕತ್ವ ಬೇಕು. ಅದು ಹೇಗೆ ಎಂಬುದು ನಮ್ಮ ಎಡ ಮತ್ತು ಪ್ರಜಾಪ್ರಭುತ್ವವಾದೀ ರಾಜಕೀಯ ಪಕ್ಷಗಳ ಮುಂದೆ ಇರುವ ಸವಾಲು. ಈ ಬಜೆಟ್ಟಿನಲ್ಲಿ ಅಂತರ್ಗತವಾದ ಕೆಲವು ಭ್ರಮೆಗಳು ಕಾಂಗ್ರೆಸ್ಸಿಗೆ ಓಟು ಕೊಡಿಸುವ ಸಾಧ್ಯತೆಗಳನ್ನು ತಡೆಯ ಬಲ್ಲವೆ ? ಒಂದು ಭ್ರಮೆ ಎಂದರೆ ಅರ್ಥ ಸಚಿವರು, ರಾಹುಲ್ ಗಾಂಧಿ, ವಾಣಿಜ್ಯದ ಛೇಂಬರುಗಳು ಇವರೆಲ್ಲ ಇದು ಎಲ್ಲರನ್ನು ಒಳಗೊಂಡ ಬೆಳವಣಿಗೆಯ ಬಜೆಟ್ ಎಂದು ವರ್ಣಿಸುತ್ತಿರುವುದು. ಈ ಬಜೆಟ್ ಯಾವ ದೀರ್ಘಾವಧಿ ನೀತಿಯನ್ನೂ ಅಥವಾ ತಮ್ಮ ಮಾರ್ಗ ಹುಟ್ಟಿ ಹಾಕಿರುವ ಸಾಮಾಜಿಕ ಸಮಸ್ಯೆಗಳನ್ನೂ ನಿವಾರಿಸುವ ಒಲವನ್ನೂ ಹೊರಗೆಡುವುದಿಲ್ಲ. ಹಾಗಾಗಿ ಬರುವ ದಿನಗಳಲ್ಲಿ ಅನಿಯಂತ್ರಿತ ಬೆಲೆ ಏರಿಕೆ, ಆಹಾರದ ಕೊರತೆ, ಐಟಿ ಬಿಟಿ ಕ್ಷೇತ್ರಗಳನ್ನೂ ಸೇರಿದಂತೆ ಎಲ್ಲೆಡೆಯೂ ವೃದ್ಧಿಯಾಗುವ ನಿರುದ್ಯೋಗ, ಇವುಗಳು ರೈತರನ್ನು ಮಾತ್ರವಲ್ಲದೇ ಇತರರನ್ನೂ ಒಳಗೊಂಡು, ಹಲವಾರು ಸಾಮಾಜಿಕ ಕ್ಷೋಭೆಗಳಿಗೆ ದೂಡ ಬಹುದು. ಬೂರ್ಷ್ವಾ ಮಾರ್ಗ ನಿರಂತರ ಸಮಸ್ಯೆಗಳನ್ನು ಸೃಷ್ಟಿಸುತ್ತ ಹೋಗುತ್ತದೆ. ಅದಕ್ಕೆ ಪರಿಹಾರಗಳನ್ನು ಹುಡುಕುವುದು ಅದರ ಉದ್ದೇಶವೇ ಅಲ್ಲ, ಕಾರಣ ಅಂಥ ಸಮಸ್ಯೆಗಳ ಸರಮಾಲೆಯೇ ಅದರ ಅಧಿಕಾರ ಹಿಡಿಯುವ ತಂತ್ರ. ಮೊದಲು ಸಾಲದ ಹೊರೆಯ ಸಮಸ್ಯೆಯನ್ನು ಸೃಷ್ಟಿಸಬೇಕು. ನಂತರ ಅದನ್ನು ಪರಿಹರಿಸುವ ಹುಸಿ ಶೌರ್ಯವನ್ನು ಮೆರೆಯಬೇಕು !

ಇನ್ನು ಷೇರು ಪೇಟೆ ನಿರಂತರ ಕುಸುಯುತ್ತಿರುವುದರ ಬಗ್ಗೆ ಒಂದು ಮಾತು. ಇದಕ್ಕೂ ಬಜೆಟ್‌ಗೂ ನೇರವಾದ ಸಂಬಂಧವಿಲ್ಲ. ಅಂತರರಾಷ್ಟ್ರೀಯವಾಗಿ ಕಂಡುಬರುತ್ತಿರುವ ಕೆಲವು ಬೆಳವಣಿಗೆಗಳೇ ಇದಕ್ಕೂ ಕಾರಣ. ಬ್ಯಾಂಕುಗಳ ಷೇರುಗಳೂ ಬಜೆಟ್ಟಿಗೆ ಮುನ್ನವೇ ಕುಸಿದಿದ್ದವು. ಹಾಗೂ ಅರ್ಥ ಮಂತ್ರಾಲಯದವರು ಷೇರು ಪೇಟೆಯ ಏರಿಳಿತಗಳಿಗೆ ಉದ್ದೇಶಪೂರ್ವಕ ಹೇಳಿಕೆಗಳನ್ನು ನೀಡುವುದರ ಮೂಲಕ ಕಾರಣರಾಗುತ್ತಾರೆಂಬ ಗುಮಾನಿ ಯಾವಾಗಲೂ ಇದ್ದದ್ದೇ. ೧೨೦೦೦ ದಿಂದ ೨೦,೦೦೦ಕ್ಕೆ ವೇಗವಾಗಿ ಏರಿಸಿದಾಗ ಬಂಡವಾಳ ಸಂಗ್ರಹಣೆಯ ಕೆಲಸ ಮುಗಿದಿರುತ್ತದೆ. ಅದು ಇಳಿಯುವಾಗ ಕಂಪನಿಗಳಿಗೆ ಅಲ್ಪಾವಧಿಯಲ್ಲಿ ಅದರ ಬಿಸಿ ಏನೂ ತಟ್ಟುವುದಿಲ್ಲ. ಹಾಗಾಗಿ ೨೦,೦೦೦ ಷೇರು ಸೂಚ್ಯಂಕ ಭಾರತದ ವಾಸ್ತವ ಆರ್ಥಿಕತೆಯ ಬಲವನ್ನೂ, ಆರೋಗ್ಯವನ್ನೂ ಸೂಚಿಸುತ್ತದೆಂಬ ಪೊಳ್ಳುಮಾತನ್ನು ಈ ವಿತ್ತಮಂತ್ರಿ ಅದೆಷ್ಟು ಬಾರಿ ಹೇಳಿದರಲ್ಲವೆ ? ಹಿಂದೊಮ್ಮೆ ಷೇರು ಪೇಟೆಯಲ್ಲಿ ಹಣ ಕಳೆದುಕೊಂಡವರು ತಮ್ಮ ಅಳಲು ತೋಡಿಕೊಂಡಾಗ, ಅಂದಿನ ಅರ್ಥಮಂತ್ರಿ ಮನಮೋಹನರು ಷೇರು ಪೇಟೆ ನಿಮ್ಮಂಥವರಿಗಲ್ಲ ಎಂದು ಹೇಳಿದ್ದನ್ನು ನೆನಪಿಸಿಕೊಳ್ಳಬೇಕು. ಚಿನ್ನದ ಬೆಲೆ, ನೆಲದ ಆಸ್ತಿಪಾಸ್ತಿಯ ಬೆಲೆ ಗಗನಕ್ಕೆ ಏರಿರುವುದಕ್ಕೆ ಜನ ನಮ್ಮ ಆರ್ಥಿಕತೆಯಲ್ಲಿ ವಿಶ್ವಾಸ ಕಳೆದುಕೊಂಡಿರುವುದನ್ನು, ಭವಿಷ್ಯದ ಬಗ್ಗೆ ಆತಂಕಗೊಂಡಿರುವುದನ್ನು ಸೂಚಿಸುತ್ತದೆ. ಷೇರು ಪೇಟೆ ಕುಸಿದಿದ್ದಕ್ಕೆ ಅಂತರರಾಷ್ಟ್ರೀಯ ಕಾರಣಗಳು ಅಮೆರಿಕದ ಆರ್ಥಿಕ ಕುಸಿತ, ಪೆಟ್ರೋಲ್ ಬೆಲೆಯಲ್ಲಿ ವಿಪರೀತ ಹೆಚ್ಚಳ, ಜಾಗತಿಕವಾಗಿ ಹದಗೆಟ್ಟಿರುವ ಆಹಾರದ ದಾಸ್ತಾನು, ಮುಂತಾದುವುಗಳ ಜೊತೆಗೆ, ಆಂತರಿಕವಾಗಿ ಕೈಗಾರಿಕಾ ಅಭಿವೃದ್ಧಿಯ ವಾಸ್ತವ ದರ ವಿಪರೀತ ಕುಸಿಯುತ್ತಿರುವುದು, ವಿಪರೀತ ಒಳ ಪ್ರವೇಶ ಮಾಡಿದ ವಿದೇಶೀ ಹಣದ ಪರಿಣಾಮವಾದ ಹಣದುಬ್ಬರ ಮತ್ತು ಬೆಲೆ ಏರಿಕೆ, ಮೂಲಭೂತ ಸೌಕರ್ಯಗಳ ಅಪಾರ ಕೊರತೆ ಹೀಗೆಲ್ಲಾ ಪಟ್ಟಿಮಾಡಬಹುದು. ಅಂದರೆ ಬಜೆಟ್ ಅಥವಾ ಇನ್ನಾವುದೇ ಸರ್ಕಾರದ ಆರ್ಥಿಕ ನೀತಿಗಳ ಹಿಡಿತಕ್ಕೆ ಸಿಗದ ರೀತಿಯಲ್ಲಿ ಅರ್ಥವ್ಯವಸ್ಥೆ ಹುಚ್ಚೆದ್ದು ವರ್ತಿಸುತ್ತಿದೆ ಎಂದು ಹೇಳಬಹುದು.

## ಷೇರುಪೇಟೆ ಮತ್ತು ಬಂಡವಾಳ

**ಮೊ**ದಲು, ಅಗತ್ಯವಿದೆಯೋ ಇಲ್ಲವೋ ಕಾರುಗಳ ಉತ್ಪಾದನೆಯನ್ನು ಹೆಚ್ಚಿಸುವುದು, ನಂತರ ಕಾರು ಕೊಳ್ಳಲು ಸಾಲಕೊಡುವುದು; ಕೊಳ್ಳುವ ಕಾರೇ ಆಧಾರ ! ಈ ಹಣದಲ್ಲಿ ಕಾರು ಕ್ಷೇತ್ರದ ಬೆಳವಣಿಗೆ, ಒಟ್ಟಾರೆ ಬೆಳೆವಣಿಗೆಯನ್ನು ಶೇ. ೯-೧೦ಕ್ಕೆ ಏರಿಸಲು ನೆರವಾಗುತ್ತದೆ. ಸಾಲ ಮರುಪಾವತಿಯಾಗುವುದಿಲ್ಲ. ಕಾರನ್ನು ಮುಟ್ಟುಗೋಲು ಹಾಕಿಕೊಂಡರೂ ಅವುಗಳನ್ನು ಮಾರಿ ಸಂಪೂರ್ಣ ಸಾಲ ವಾಪಸ್ಸು ಪಡೆಯಲು ಆಗುವುದಿಲ್ಲ. ಆಗ ಬ್ಯಾಂಕುಗಳಿಗೆ ನಷ್ಟ. ಅದು ಸಾರ್ವಜನಿಕರ, ಕಾರು ಕೊಳ್ಳದವರನ್ನೂ ಆವರಿಸಿಕೊಂಡ ನಷ್ಟ. ಮೊದಲಿನ ಬೆಳವಣಿಗೆ ಷೇರುಪೇಟೆಯನ್ನು ಗಗನಕ್ಕೆ ಏರಿಸಿದರೆ, ಎರಡನೆಯದು ಅದನ್ನು ಕೆಳಕ್ಕೆ ತಳ್ಳುತ್ತದೆ. ಈ ಪ್ರಕ್ರಿಯೆಯಲ್ಲಿ ಈ ತಂತ್ರದ ತಿಳಿವಳಿಕೆ ಸಾಲದ ಅಮಾಯಕರು ಅಪಾರ ಹಣ ಕಳೆದುಕೊಳ್ಳುತ್ತಾರೆಯೇ ವಿನಾ ಕಾರು ಕಂಪನಿಗಳಿಗೆ ಏನೇನೂ ನಷ್ಟವಿಲ್ಲ. ಆ ವೇಳೆಗೆ ಕಾರು ಕಂಪನಿಗೆ ಸಾಕಷ್ಟು ಬಂಡವಾಳ ಶೇಖರಣೆಯಾಗಿರುತ್ತದೆ. ಕೆಲವರು ಆತ್ಮಹತ್ಯೆ ಮಾಡಿಕೊಂಡರೆ ಏನು ನಷ್ಟ! ಸರ್ಕಾರ ಕಾರು ಕಂಪನಿಗೆ ಅನುಕೂಲವಾದ ನೀತಿ ನಿರ್ಮಿಸಿಕೊಡುತ್ತದೆ. ಷೇರುಪೇಟೆಯಲ್ಲಿ ನಷ್ಟ ಅನುಭವಿಸುವ ಸಮಸ್ಯೆ ಅದರದ್ದಲ್ಲ. ಸರ್ಕಾರವೇ ಜನತೆಯನ್ನು ತಮ್ಮ ಉಳಿತಾಯವನ್ನು ಷೇರುಪೇಟೆಯಲ್ಲಿ ಹೂಡಿ ಎಂದು ಪುಸಲಾಯಿಸುತ್ತದೆ. ಆದರೆ ಅಲ್ಲಿ ಅವರು ಅನುಭವಿಸುವ ನಷ್ಟಕ್ಕೆ ತಾನು ಹೊಣೆಯಲ್ಲ ಎನ್ನುತ್ತದೆ. ನಮ್ಮ ಉಳಿತಾಯಕ್ಕೆ ತಕ್ಕ ಬಡ್ಡಿ ನೀಡದೆ, ಷೇರುಪೇಟೆಗೆ ನಮ್ಮನ್ನು ದಬ್ಬುತ್ತದೆ. ಯುಟಿಐ ಸಂಸ್ಥೆಗೆ ನಷ್ಟವನ್ನು ಸರ್ಕಾರ ಭರಿಸಿದರೂ, ಅದು ಪರೋಕ್ಷವಾಗಿ ಸಾರ್ವಜನಿಕ ಹಣವನ್ನು ಯಾವುದೋ ಕಂಪನಿಗೆ ಬಂಡವಾಳ ನೀಡಿದಂತೆಯೇ.









ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

## ದೇವರು ಕಕ್ಕಾಬಿಕ್ಕಿಯಾದ



ಪ್ರಾರ್ಥನೆಯಲ್ಲಿ ಮೂಡಿದ
ಸ್ವಾರ್ಥದ ಸುಳಿಯಲ್ಲಿ
ಮಾನವೀಯತೆ ಮುಳುಗಿ
ರಾಡಿ ಎದ್ದು ಮಲಿನವಾದಾಗ
ದೇವರು ಕಕ್ಕಾಬಿಕ್ಕಿಯಾದ

* * *

ಗುಡಿಯ ಗಂಟೆಗಳೆಲ್ಲ
ಹುಚ್ಚೆದ್ದು ಬಡಿದು
ಎತ್ತಿದಾರತಿ ಧೂಪದ ಹೊಗೆಗೆ
ಗರ್ಭಗುಡಿ ಕತ್ತಲೆಯಲ್ಲಿ
ಉಸಿರುಕಟ್ಟಿದಂತಾದಾಗ
ದೇವರು ಕಕ್ಕಾಬಿಕ್ಕಿಯಾದ

* * *

ದೇವದಾಸಿ ಮೈಯ ಗಂಧಕ್ಕೆ
ಪೂಜಾರಿ ಪುಳಕಗೊಂಡು
ಆವರಣದ ಭಿತ್ತಿಗಳಲ್ಲಿ
ಕಾಮಕಲೆ ನರ್ತಿಸಿದಾಗ
ದೇವರು ಕಕ್ಕಾಬಿಕ್ಕಿಯಾದ

* * *

ಹುಂಡಿಗೆ ಬಿದ್ದ
ಬೆವರವಾಸನೆಯ ಹಣ
ಅಚ್ಚ ಬಿಳಿ ಜೇಬುಗಳ
ಅತ್ತರಿನ ಪರಿಮಳದಲ್ಲಿ
ಸದ್ದಿಲ್ಲದೆ ಅದ್ದಿಹೋದಾಗ
ದೇವರು ಕಕ್ಕಾಬಿಕ್ಕಿಯಾದ

ರವಿಶಂಕರ ಒಡ್ಡಂಬೆಟ್ಟು
ಅಭ್ಯುದಯ ಪ್ರೆಸ್ ಬಳಿ, ಅಂಚೆ - ಕನ್ಯಾನ - ೫೭೪ ೨೭೯
ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ

## ಭಯೋತ್ಪಾದನೆಯ ಉತ್ಪಾದನೆ

ಇರಾನಿನಲ್ಲಿ ದೊರೆ ಷಾನನ್ನು ಪದಚ್ಯುತಗೊಳಿಸಲು ಜನರು ವ್ಯಾಪಕ ಹೋರಾಟ ನಡೆಸಿದ್ದು ಇಸ್ಲಾಂ ಮತಧರ್ಮದ ದೊಡ್ಡ ಮುಲ್ಲಾಗಳ ನೇತೃತ್ವದಲ್ಲಿ. ಅಯಾತೊಲ್ಲಾ ಖೊಮೇನಿ ರಾಷ್ಟ್ರದಿಂದ ಹೊರಹೋಗಿ ಪ್ಯಾರಿಸ್ಸಿನಲ್ಲಿ ವಾಸಿಸಬೇಕಾಗಿ ಬಂದಿತ್ತು. ಜಡ್ಡು ಮತಾಂಧತೆಯು ೧೯೭೯ ರಿಂದ ಇರಾನಿನಲ್ಲಿ ಹೆಚ್ಚುತ್ತಾ ಬಂದಿದೆ. ಆದರೆ ಆ ದೇಶದಿಂದ ಬೇರಾವ ದೇಶದ ಮೇಲೂ ಆಕ್ರಮಣ ನಡೆದಿಲ್ಲ, ಭಯೋತ್ಪಾದಕರನ್ನು ಬೆಂಬಲಿಸಿ ತರಬೇತಿ ನೀಡಿ ಕಳಿಸಲಾಗಿಲ್ಲ. ಸಿರಿಯಾ-ಲೆಬನಾನ್‌ಗಳಿಗೆ ಸ್ವಲ್ಪಮಟ್ಟಿಗೆ ಬೆಂಗಾವಲಾಗಿ ನಿಂತಿದ್ದುಂಟು. ಈಗ ಅಮೆರಿಕಾದ ಕೆಂಗಣ್ಣು ಇರಾನಿನ ಮೇಲೆ ಬಿದ್ದಿದ್ದು, ಇರಾಕಿನ ಸಂದರ್ಭದಲ್ಲಿದ್ದಂತೆ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ನಿರ್ಣಯ ಮಾಡಿಸಿ, ಅನೇಕ ದಿಗ್ಬಂಧನಗಳನ್ನು ಹೇರಲಾಗಿದೆ. ಇರಾಕಿನಲ್ಲಿ ಅಮೆರಿಕಾ ಆಕ್ರಮಣವನ್ನು ವಿರೋಧಿಸಿದ್ದಕ್ಕೆ ಇದು ಶಿಕ್ಷೆ. ಭದ್ರತಾ ಮಂಡಲಿಯಲ್ಲಿ ಅಮೆರಿಕಾದ ಕೆಟ್ಟ ನಿರ್ಣಯಕ್ಕೆ ಬೆಂಬಲ ನೀಡಿದ ರಷ್ಯಾ ಮತ್ತು ಚೀಣಾ ಖಂಡಿತಕ್ಕೂ ಖಂಡನಾರ್ಹವಾಗಿವೆ. ನಾಳೆ ಇರಾನಿನಲ್ಲಿ ರಕ್ತಪಾತವಾದರೆ ಅದಕ್ಕೆ ಈ ದೇಶಗಳೂ ಹೊಣೆಯಾಗುತ್ತವೆ. ನಾಚಿಕೆಗೇಡು ಮತ್ತು ಬೇಜವಾಬ್ದಾರಿತನದ ಸಂಗತಿಯೆಂದರೆ ಈ ನಿರ್ಣಯಕ್ಕೆ ದಕ್ಷಿಣ ಆಫ್ರಿಕಾ ಮತ್ತು ವಿಯೆಟ್ನಾಂ ಬೆಂಬಲ ಸೂಚಿಸಿದ್ದು. ಯಾವುದೇ ದೇಶವು ನ್ಯಾಯಬದ್ಧ ಧೋರಣೆಯನ್ನು ನಿರೀಕ್ಷಿಸುವುದು ಸಾಧ್ಯವಿಲ್ಲದಂತಹ ರೀತಿಯಲ್ಲಿ ಭದ್ರತಾ ಮಂಡಲಿಯ ಸದಸ್ಯರು ಅಮೆರಿಕಾಕ್ಕೆ ಹೆದರಿ ಶರಣಾಗಿದ್ದಾರೆ. ನಾಳೆ ಆ ಮಂಡಲಿಯಲ್ಲಿ ಭಾರತದ ಪರವಾಗಿ ಯಾವುದಾದರೂ ದೇಶವಿರುತ್ತದೆಯೇ ಎಂಬ ಸಂಶಯ ಉಂಟಾಗಿದೆ. ಭಾರತದ ಸರ್ಕಾರವು ಅಮೆರಿಕಾಕ್ಕೆ ಅಂಜಲು ಅದೂ ಒಂದು ಕಾರಣವಿರಬಹುದು. ಎಡಪಕ್ಷಗಳ ನೆರವಿನಿಂದ ಸರ್ಕಾರ ರಚಿಸಿರುವ ಕಾಂಗ್ರೆಸ್, ದೇಶವನ್ನು ಅಮೆರಿಕಾದ ಹದ್ದುಗಳಿಗೆ ಅರ್ಪಿಸುತ್ತಿರುವುದು ಒಂದು ಕ್ರೂರ ವಿಪರ್ಯಾಸ.

ಭದ್ರತಾ ಮಂಡಲಿಯ ನಿರ್ಣಯದಂತೆ ಇರಾನಿನ ಹಡಗು ಮತ್ತು ವಿಮಾನಗಳನ್ನು ಎಲ್ಲೆಂದರಲ್ಲಿ ತಡೆದು ತನಿಖೆ ನಡೆಸಲು ಅಮೆರಿಕಾಕ್ಕೆ ಸಾಧ್ಯವಿದೆ. ಆದ್ದರಿಂದ ಬರುವ ದಿನಗಳಲ್ಲಿ ''ಇರಾನಿನಲ್ಲಿ ಭೀಕರ ಮಾರಕಾಸ್ತ್ರಗಳಿವೆ'' ಎಂಬುದಕ್ಕೆ ಅಮೆರಿಕಾ ಪುರಾವೆ ಒದಗಿಸಿಬಿಡುತ್ತದೆ: ಮಾರಕಾಸ್ತ್ರಗಳನ್ನು ತಾನೇ ಹಡಗುಗಳಿಗೆ ತುಂಬಿಯಾದರೂ ಸರಿಯೆ! ಬಲಾತ್ಕಾರ ಮಾಡಕೂಡದೆಂಬ ಷರತ್ತೇನೋ ಇದೆ. ಆದರೆ ಅಮೆರಿಕಾ ಅದಕ್ಕೆ ಸೊಪ್ಪುಹಾಕಲಾರದು. ಅಂತರರಾಷ್ಟ್ರೀಯ ಪರಮಾಣು ಶಕ್ತಿಯ ಮೇಲ್ವಿಚಾರಣಾ ಸಂಸ್ಥೆ ಇರಾನಿನ ಬಗ್ಗೆ ಹೇಳುವುದು ಕೂಡ ನಗಣ್ಯವೆನಿಸುವ ಸಾಧ್ಯತೆಯೇ ಹೆಚ್ಚು.

ಇದೆಲ್ಲದರ ಪರಿಣಾಮವೆಂದರೆ ಇರಾನಿನಲ್ಲಿ ಅಧಿಕೃತವಾಗಿ ಭಯೋತ್ಪಾದಕರ ತಂಡಗಳು ನಿರ್ಮಾಣಗೊಳ್ಳುವುದು. ಏಕೆಂದರೆ ಅಮೆರಿಕಾದ ಹೊಡೆತವನ್ನು ಎದುರಿಸಲು ಇರಾನಿಗೆ ಬೇರಾವ ಮಾರ್ಗವೂ ಇಲ್ಲ. ಎಲ್ಲ ದೇಶಗಳೂ ಕೈಬಿಟ್ಟರೆ ಚಿಕ್ಕಚಿಕ್ಕ ದೇಶಗಳು ಮಾಡಬಹುದಾದ್ದೇನಿದೆ! ಅಂದರೆ, ವಿಶ್ವಸಂಸ್ಥೆಯು ಅಮೆರಿಕಾದ ಬುಟ್ಟಿಯಲ್ಲಿ ಬಿದ್ದಿರುವುದರಿಂದ ಎಲ್ಲೆಲ್ಲೂ ಭಯೋತ್ಪಾದಕ ತಂಡಗಳು ಹುಟ್ಟಿಕೊಳ್ಳುತ್ತವೆ. ಆಫ್ಘಾನಿಸ್ತಾನ, ಇರಾಕ್ ಮುಂತಾದ ಉದಾಹರಣೆಗಳು ನಮ್ಮ ಮುಂದಿವೆ. ಆಮೇಲೆ ಭಯೋತ್ಪಾದಕರನ್ನು ನಿಗ್ರಹಿಸಲು ಸೈನ್ಯ, ಕಾರಾಗೃಹ, ದೌರ್ಜನ್ಯ, ಕೊಲ್ಲುವಿಕೆ, ಎಲ್ಲಾ ಆರಂಭ. ಬೇರೆ ದೇಶಗಳ ಸಂಪತ್ತಿನ ಲೂಟಿಗೆ ಇಷ್ಟೆಲ್ಲಾ ತಯಾರಿ.

ಒಟ್ಟಿನಲ್ಲಿ ಅಮೆರಿಕಾ ಮೊದಲು ಭಯೋತ್ಪಾದಕರನ್ನು ಸೃಷ್ಟಿಸುತ್ತದೆ. ಆಮೇಲೆ ಅವರನ್ನು ಸಂಹರಿಸಲು ಹಿಂಸೆಯನ್ನು ಹರಿಬಿಡುತ್ತದೆ. ಬ್ರಹ್ಮ ಮತ್ತು ಶಿವ ಇಬ್ಬರೂ ಅಮೆರಿಕಾವೇ ಆಗಿರುವುದರಿಂದ ಬಹುಶಃ ಭಾರತವು ಬುಷ್‌ಗೆ ಶರಣಾಗುತ್ತಿದೆ.

ಹೀಗೆ ಶರಣಾಗುವಾಗ ಆರ್ಥಿಕ ನೀತಿ, ನ್ಯಾಯಾಲಯದ ವರ್ತನೆ ಮುಂತಾದುವೆಲ್ಲಾ ಪಲ್ಲಟಗೊಳ್ಳುತ್ತವೆ. ೨೦೦೭-೦೮ರ ಆರ್ಥಿಕ ಸರ್ವೇಕ್ಷಣದಲ್ಲಿ ಚಿದಂಬರಂ ಸೂಚಿಸಿರುವ ಕ್ರಮಗಳು ಆರ್ಥಿಕತೆಯನ್ನು ವೇಗವಾಗಿ ವೃದ್ಧಿಗೊಳಿಸುತ್ತವೆಂದು ಹೇಳಲಾಗಿದೆ. ಆದರೆ ಅದಕ್ಕೆ ವಿರುದ್ಧವಾದ ಪರಿಣಾಮ ಕಟ್ಟಿಟ್ಟ ಬುತ್ತಿ. ಆ ಕ್ರಮಗಳು ಯಾವುವು? (ಅ) ಲಾಭಗಳಿಸುವ ನವರತ್ನೇತರ ಸಾರ್ವಜನಿಕ ಉದ್ದಿಮೆಗಳನ್ನು ಭಾಗಶಃ ಮಾರುವುದು; (ಆ) ಸಕ್ಕರೆ, ಗೊಬ್ಬರಗಳು ಮತ್ತು ಔಷಧಿಗಳ ಮೇಲಿನ ನಿರ್ಬಂಧ ತೆಗೆದು ಹಾಕುವುದು; (ಇ) ತೈಲವಿರುವ ಪ್ರದೇಶಗಳನ್ನು ಖಾಸಗಿಯವರಿಗೆ ಮಾರುವುದು; (ಈ) ಚಿಲ್ಲರೆ ವ್ಯಾಪಾರದಲ್ಲಿ ವಿದೇಶಿ ಬಂಡವಾಳಕ್ಕೆ ಪ್ರವೇಶ ನೀಡುವುದು; ಮತ್ತು (ಉ) ವಿಮೆ ಮತ್ತು ಬ್ಯಾಂಕಿಂಗ್ ಉದ್ಯಮಗಳಲ್ಲಿ ವಿದೇಶಿ ಬಂಡವಾಳ ಹೂಡಿಕೆಗೆ ಹೆಚ್ಚಿದ ಅವಕಾಶ ಕಲ್ಪಿಸುವುದು.

ಅಮೆರಿಕಾವು ಇರಾನಿನಲ್ಲಿ ಒಂದು ರೀತಿ ಭಯೋತ್ಪಾದನೆಯನ್ನು ಉತ್ಪಾದಿಸಿದರೆ ಭಾರತವು ತನ್ನ ಆರ್ಥಿಕತೆಯನ್ನು ಸಂಪೂರ್ಣವಾಗಿ ವಿದೇಶಿ ಬಂಡವಳಿಗರಿಗೆ ಒತ್ತೆಯಿಟ್ಟು ಇನ್ನೊಂದು ರೀತಿಯ ಭಯೋತ್ಪಾದನೆಯ ಉತ್ಪಾದನೆಗೆ ಹಿನ್ನೆಲೆಯನ್ನು ರಚಿಸಿಕೊಡುತ್ತಿದೆ. ಅಂತಹ ಸರ್ಕಾರಕ್ಕೆ ಎಡಪಕ್ಷಗಳು ಇನ್ನೆಷ್ಟು ಕಾಲ ಬೆಂಬಲ ಸೂಚಿಸುತ್ತಿರಬೇಕು? ಒಂದು ಮೊಕದ್ದಮೆಯಲ್ಲಿ ಆಪಾದಿತರ ಪರವಾಗಿ ಫಕಾಲತ್ತು ವಹಿಸಿರುವ ವಕೀಲರ ವಾದವನ್ನು ಕೇಳಲು ತಾನು ಸಿದ್ಧವಿಲ್ಲವೆಂದು ನ್ಯಾಯಾಲಯವು ಟೀಸ್ತಾ ಸೆಟಲ್‌ವಾಡ್‌ರಿಗೆ ಹೇಳಿದಾಗ ಅದನ್ನು ಪಾರ್ಲಿಮೆಂಟ್ ಸಹ ತಡೆಗಟ್ಟಲಾಗದೆಂದು ಘೋಷಿಸುವುದು ದೇಶದ ದಿಕ್ಕು ಬದಲಾಗುತ್ತಿರುವುದರ ಇನ್ನೊಂದು ಸೂಚನೆ.

ನಾವೆತ್ತ ಹೋಗುತ್ತೇವೆಂಬುದನ್ನು ತೀರ್ಮಾನಿಸುವ ಇಂದಿನ ಪರ್ವಕಾಲದಲ್ಲಿ ನಮ್ಮ ದೇಶದ ಜನತೆ ಇಂದು ಕಠಿಣವಾದ ನಿಲುವು ತಾಳಬೇಕಾಗುತ್ತದೆ.

ಪುತ್ರ ವ್ಯಾಮೋಹಕ್ಕೆ ಮಾತ್ರ ಸೂಕ್ತ ಬೆಲೆ ಕಟ್ಟಬೇಕೆಂಬುದು ಶ್ರೀ ಪಿ. ಚಿದಂಬರಂ ಅವರ ನೀತಿಯೆಂದು ತೋರುತ್ತದೆ. ಕೆನರಾ ಬ್ಯಾಂಕ್ ಅಧಿಕಾರ ವರ್ಗ ಇದಕ್ಕೆ ಮಣಿದಿರುವುದು ಒಪ್ಪಲಾಗದ ಸಂಗತಿ.

* * *

ದೇಶದ ರಾಜಕೀಯ ನಿರ್ವಹಣೆಯಲ್ಲಿ ಕಾಂಗ್ರೆಸ್ ಮತ್ತು ಬಿಜೆಪಿ ಪಕ್ಷಗಳ ನಡುವೆ ಬಹಳ ವ್ಯತ್ಯಾಸಗಳಿಲ್ಲ. ಅಮೆರಿಕಾದ ತಾಳಕ್ಕೆ ತಕ್ಕಂತೆ ಕುಣಿಯುವುದರಲ್ಲಿ ಎರಡು ಪಕ್ಷಗಳೂ ನಾಟ್ಯಾಚಾರ್ಯ ಪ್ರಶಸ್ತಿ ಪಡೆದಿವೆ. ಪರಮಾಣು ಶಕ್ತಿಯ ಒಪ್ಪಂದವನ್ನು ಬಿಜೆಪಿ ಸಮರ್ಥಿಸುತ್ತದೆ, ''ಆದರೆ ಅದರ ಇಂದಿನ ಸ್ವರೂಪದಲ್ಲಿ ಅಲ್ಲ'' ಎಂದು ಹೇಳಲಾಗಿದೆ. ಇದು ಅರ್ಥಗರ್ಭಿತವಾದ ಮಾತು: ದೊಡ್ಡಣ್ಣನನ್ನು ಎದುರು ಹಾಕಿಕೊಳ್ಳುವುದು ಬೇಡ ಎಂದಷ್ಟೇ ಇದರ ಸೂಚನೆ. ಈಚೆಗೆ ಇನ್ನೊಂದು ಉದಾಹರಣೆ ದೊರೆತಿದೆ. ಬಿಜೆಪಿಗೆ ಇಸ್ರೇಲ್ ಎಂದರೆ ಎಲ್ಲಿಲ್ಲದ ಪ್ರೀತಿ. ಅರಬ್ಬರನ್ನು ಕೊಲ್ಲುವ ಧೀರರಾಷ್ಟ್ರ ಅದೆಂಬ ಕಾರಣವೂ ಇರಬಹುದು. ಕಾಂಗ್ರೆಸ್ ಪಕ್ಷವು ಇಸ್ರೇಲನ್ನು ಅತಿಯಾಗಿ ಮುದ್ದು ಮಾಡುತ್ತಿದೆ: ಆಯುಧಗಳನ್ನು ಕೊಳ್ಳುವ ಮೂಲಕ ಮತ್ತು ಇಸ್ರೇಲಿನ ಒಂದು ಸೆಟಲೈಟನ್ನು ಹಾರಿಸಿಕೊಡುವ ಮೂಲಕ. ಅದು ಬೇಹುಗಾರಿಕೆಗೆ ಬಳಸಲಾಗುವ ಸೆಟಲೈಟ್ ಎಂದು ತಿಳಿದಿದ್ದೂ, ಈ ''ಸಹಾಯ'' ನೀಡಲಾಗಿದೆ. ಅದಕ್ಕೆ ಬಿಜೆಪಿಯ ಆಕ್ಷೇಪವೇನೂ ಇಲ್ಲ. ಜೆರೂಸಲೆಂನ ಒಂದು ಶಾಲೆಯಲ್ಲಿ ಈಚೆಗೆ ಎಂಟು ಮಕ್ಕಳು ಹತರಾದರು. ಪ್ಯಾಲಿಸ್ಟೈನಿನಲ್ಲಿ ಪ್ರತಿನಿತ್ಯವೂ ನೂರಾರು ಮಂದಿ ಹತರಾಗುತ್ತಲೇ ಇದ್ದಾರೆ. ಪ್ಯಾಲಿಸ್ಟೈನಿನಲ್ಲಿ ಹತರಾಗುವವರ ಬಗ್ಗೆ ಕಂಬನಿ ಮಿಡಿಯದ ಮನಮೋಹನ ಸಿಂಗ್ ಸರ್ಕಾರವು ಜೆರೂಸಲೆಂ ಘಟನೆಯ ಬಗ್ಗೆ ಸಂತಾಪ ಸೂಚಿಸಿದೆ. ಪ್ಯಾಲಿಸ್ಟೈನನ್ನು ದೊಡ್ಡ ಗೋಡೆಯ ಸಹಾಯದಿಂದ ಪ್ರತ್ಯೇಕಗೊಳಿಸಿದಾಗ ಇಸ್ರೇಲನ್ನು ಟೀಕಿಸುವ ಸಾಹಸವನ್ನು ಭಾರತ ಸರ್ಕಾರ ಮಾಡಲಿಲ್ಲ. ಗಾಜಾದಲ್ಲಿ ಒಂದು ದಿನ ೧೨೦ ಮಂದಿಯನ್ನು ಇಸ್ರೇಲ್ ಕೊಂದಾಗ ಅದು ನಮಗೆ ಕಾಣಲಿಲ್ಲ. ಅಂದರೆ ಜೆರೂಸಲೆಂ ಹತ್ಯೆಯು ಸಮರ್ಥನೀಯವೆಂದಲ್ಲ. ನಮ್ಮ ದೇಶವು ಅಮೆರಿಕಾದ ಸೆಟಲೈಟ್ ಆಗುತ್ತಿರುವಂತೆ ಇಸ್ರೇಲಿನ ಸೆಟಲೈಟ್ ಸಹ ಆಗಹೊರಟಿರುವುದು ಖಂಡನೀಯ ಎಂದಷ್ಟೇ ಇಲ್ಲಿಯ ಇಂಗಿತ. ಆದರೆ ಕಾಂಗ್ರೆಸ್ ಮತ್ತು ಬಿಜೆಪಿ ಎರಡರಲ್ಲೂ ಇಸ್ರೇಲನ್ನು ಆಶ್ರಯಿಸುವುದರಲ್ಲಿ, ಅದರ ಪಾತಕಗಳನ್ನು ಗಮನಿಸದಿರುವುದರಲ್ಲಿ, ಸಹಮತ ಕಂಡುಬರುತ್ತಿದೆ. ನಮ್ಮ ದೇಶದ ವಿದೇಶಾಂಗ ನೀತಿಯು ಇದರಿಂದ ಕಲುಷಿತಗೊಳ್ಳುತ್ತಿದೆ.

* * *

ಟಿಬೆಟ್ಟಿನಲ್ಲಿ ನಾಗರಿಕರ ದಮನವು ನಡೆದಿದೆಯೆಂಬ ಹಿನ್ನೆಲೆಯಲ್ಲಿ ಚೀಣಾ ದೇಶವು ಮಾನವ ಹಕ್ಕುಗಳ ಉಲ್ಲಂಘನೆ ಮಾಡುತ್ತಿದೆಯೆಂದು ಅಮೆರಿಕಾ ಮತ್ತು ಯೂರೋಪು ಸಂಘ ಆಪಾದಿಸಿವೆ. ಹತ್ತು ಟಿಬೆಟನ್ನರನ್ನು ಚೀಣಾದ ಪೊಲೀಸರು ಕೊಂದಿದ್ದಾರೆಂದು ಅಮೆರಿಕಾ ಹೇಳಿದೆ. ಏಳು ಲಕ್ಷ ಇರಾಕಿನ ನಾಗರಿಕರನ್ನು ಕೊಂದಿರುವ ಬುಷ್ ಸರ್ಕಾರಕ್ಕೆ ಹತ್ತು ಟಿಬೆಟನ್ನರ ಮೇಲಿನ ಪ್ರೀತಿ ವಿಶೇಷಾರ್ಥವನ್ನು ಪಡೆಯುತ್ತದೆ. ಅಮೆರಿಕಾದ ಸೈನಿಕನಾಗಿ ಇರಾಕಿನಲ್ಲಿ ಕೆಲಸ ಮಾಡಿದ್ದ ಬ್ರಿಯಾನ್ ಕಾಸ್ಲರ್ ಇತ್ತೀಚೆಗೆ ಒಂದು ಬಹಿರಂಗ ಹೇಳಿಕೆ ನೀಡಿ ತನ್ನ ಮತ್ತು ತನ್ನಂಥವರ ದುರ್ನಡತೆಯ ಬಗ್ಗೆ ನಾಚಿಕೆಪಟ್ಟಿದ್ದಾನೆ. ಮಾನವ ಹಕ್ಕುಗಳನ್ನು ಅಮೆರಿಕಾ ಸರ್ಕಾರವು ಇರಾಕಿನಲ್ಲಿ ಹೇಗೆ ಪೋಷಿಸುತ್ತಿದೆಯೆಂಬುದಕ್ಕೆ ಇದು ಸಾಸಿವೆಕಾಳಿನಷ್ಟರಮಟ್ಟಿನ ಒಂದು ಉದಾಹರಣೆ, ಅಷ್ಟೆ. ತಲೆ ತಗ್ಗಿಸಬೇಕೆನಿಸಿದರೆ ಹಾಗೆ ಮಾಡೋಣ ಮತ್ತು ಛೀಮಾರಿ ಹಾಕಬೇಕೆನಿಸಿದರೆ ಅಮೆರಿಕಾದ ರಾಯಭಾರಿಗೆ ಪತ್ರ ಬರೆದು ಹೇಳೋಣ. ಬ್ರಯಾನ್ ಹೇಳಿದ್ದಿದು: ''ಇರಾಕಿನ ನೂರಾರು ಮಕ್ಕಳ ಆಹಾರದಲ್ಲಿ ನಾವು – ಅಮೆರಿಕಾದ ಸೈನಿಕರು – ನಮ್ಮ ಉಚ್ಚೆ ಮತ್ತು ಹೇಲನ್ನು ಬೆರೆಸಿ ಅವರಿಗೆ ಉಣಿಸುತ್ತಿದ್ದೆವು.'' ಇದಕ್ಕಿಂತಲೂ ಅಮಾನವೀಯವಾದ ಬೀಭತ್ಸ ಕೃತಿಯುಂಟೆ? ಇಂತಹ ಅತ್ಯಂತ ಹೇಸಿಗೆಯ ವರ್ತನೆಯ ದೇಶದ ಸರ್ಕಾರದೊಡನೆ ನಮ್ಮ ದೇಶವು ಹೊಸ ಬಾಂಧವ್ಯ ಬೆಳೆಸಲು ತುದಿಗಾಲ ಮೇಲೆ ನಿಂತಿದೆ. ನಾಚಿಕೆಪಡಬೇಕೋ ಅಥವಾ ಹೆಮ್ಮೆಯಿಂದ ಬೀಗಬೇಕೋ !!

* * *

ಅಮೆರಿಕಾದ ಸಖ್ಯದ ಅಮಲಿನ ಜೊತೆಗೆ ನಮ್ಮ ದೇಶದ ಕೆಲವು ಶ್ರೀಮಂತರಲ್ಲಿ ಹಣದ ಮದದಿಂದ ಅಸಹನೆ ಮತ್ತು ಕ್ರೌರ್ಯ ಹೆಚ್ಚುತ್ತಿದೆ. ದೆಹಲಿಯ ಬಳಿ ಹತ್ತು ವರ್ಷದ ಬಾಲಕನೊಬ್ಬನನ್ನು ಜೀವಂತವಾಗಿ ಸುಟ್ಟಿರುವ ದಾರುಣ ಘಟನೆಯು ದೆಹಲಿಯ ಸಿಂಹಾಸನದ ಮೇಲೆ ಕುಳಿತಿರುವವರ ಕಣ್ಣಿಗೆ ಬಿದ್ದಿಲ್ಲ. ಮದುವೆಗೆಂದು ಹೊರಟಿದ್ದ ಶ್ರೀಮಂತರ ಕಾರೊಂದು ಈ ಹುಡುಗನ ಬೈಸಿಕಲ್ಲನ್ನು ಗುದ್ದಿ ಹಾಳು ಮಾಡಿತು. ಅದಕ್ಕೆ ಪರಿಹಾರ ನೀಡಬೇಕೆಂದು ವಾದಿಸಿದ ಎಳೆಯ ಕೂಸನ್ನು ಅಟ್ಟಹಾಸದಿಂದ ಈ ದೊಡ್ಡ ಮನುಷ್ಯರು ಸುಟ್ಟು ಬಿಸುಡಿದರು. ಹಣದ ಮದದ ಪ್ರಶ್ನೆ ಒತ್ತಟ್ಟಿಗಿರಲಿ, ನಮ್ಮ ದೇಶದ ಸಂಸ್ಕೃತಿ ಎಷ್ಟು ಹೀನಾಯವಾಗುತ್ತಿದೆ, ಹೃದಯ ಎಷ್ಟು ಹೊಲಸಾಗುತ್ತಿದೆ ! ಆದರೂ ಸಂಸ್ಕೃತಿಯ ಬಗ್ಗೆ ನಿರಂತರ ಪ್ರವಚನ ನಿಲ್ಲುವುದಿಲ್ಲ.

* * *

ದೆಹಲಿಯಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಕಚೇರಿಯ ಮೇಲೆ ಕಲ್ಲು ತೂರಾಟ, ಅದೂ ಕೇಂದ್ರೀಯ ಕಾರ್ಯಕಾರಿಣಿ ಸಭೆಯು ನಡೆಯುತ್ತಿದ್ದಾಗ. ಆಮೇಲೆ ಬೆಂಗಳೂರಿನಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ರಾಜ್ಯ ಕಾರ್ಯದರ್ಶಿ ಶ್ರೀ ವಿ. ಜೆ. ಕೆ. ನಾಯರ್ ಅವರ ಮನೆ ಮತ್ತು ಶ್ರೀಮತಿ ನಾಯರ್ ಅವರ ಮೇಲೆ ಹಲ್ಲೆ, ಅದೂ ನಾಯರ್ ಅವರು ಮನೆಯಲ್ಲಿಲ್ಲದಾಗ. ನಂತರ ಹೈದರಾಬಾದಿನಲ್ಲಿ ಸುಂದರಯ್ಯ ಸಾಂಸ್ಕೃತಿಕ ಕೇಂದ್ರದ ಮೇಲೆ ಧಾಳಿ, ಅಲ್ಲಿದ್ದ ಹಲವು ವಸ್ತುಗಳ ನಾಶಗೊಳಿಸುವಿಕೆ. ಮುಂದೆ ಬೆಂಗಳೂರಿನಲ್ಲಿ ಯಾವ ಸಂಸ್ಥೆಯ ಮೇಲೆ ಮತ್ತು ಯಾವಾಗ ಧಾಳಿ ? ಪ್ರಗತಿಪರ ಸಂಸ್ಥೆಗಳಿಗೆ ಇದೊಂದು ಎಚ್ಚರಿಕೆಯ ಘಂಟೆ.

ಮೇಲೆ ಹೇಳಿದ ಮೂರೂ ಘಟನೆಗಳಲ್ಲಿ ನೇರವಾಗಿ ಪಾಲ್ಗೊಂಡವರು ಸಂಘ ಪರಿವಾರದ ಹುರಿಯಾಳುಗಳೆಂದು ಇಡೀ ದೇಶಕ್ಕೆ ತಿಳಿದಿದೆ. ಅದು ಕೇರಳದ ಕಣ್ಣೂರಿನಲ್ಲಿ ಜರುಗಿದ ಪರಸ್ಪರ ಹತ್ಯೆಗಳ ವಿರುದ್ಧದ ಪ್ರತಿಭಟನೆ ಎನ್ನಲಾಗಿದೆ. ದೇಶದಲ್ಲಿ ರಾಜಕೀಯ ಹತ್ಯೆಗಳು ಮುಂದುವರಿದರೆ ನಾಗರಿಕ ಸಮಾಜವು ಛಿದ್ರವಾಗುತ್ತದೆ, ಪ್ರಜಾಪ್ರಭುತ್ವದ ವ್ಯವಸ್ಥೆಯು ನಿರ್ನಾಮವಾಗುತ್ತದೆ, ಹಿಂಸೆಯು ಎಲ್ಲೆಲ್ಲೂ ತಾಂಡವವಾಡುತ್ತದೆ. ಇದು ಎಲ್ಲ ರಾಜಕೀಯ ಪಕ್ಷಗಳಿಗೂ ಮನವರಿಕೆಯಾಗಬೇಕು. ಈಗಲೂ ಪ್ರತೀಕಾರಕ್ಕೆ ಮುಂದಾಗುವುದಿಲ್ಲವೆಂದು ಶ್ರೀ ವಿ.ಜೆ.ಕೆ. ನಾಯರ್ ಹೇಳಿರುವುದು ಸ್ವಾಗತಾರ್ಹ ಮತ್ತು ಅಭಿನಂದನಾರ್ಹ. ಸಂಘಪರಿವಾರದವರು ಈ ನೀತಿ-ಸಂಸ್ಕೃತಿಗಳನ್ನು ಗೌರವಿಸಿ ಹಿತವಾದ ಜನಪರ ರಾಜಕೀಯದಲ್ಲಿ ಪಾಲ್ಗೊಳ್ಳುವ ಕ್ರಮವನ್ನು ಅನುಸರಿಸುತ್ತಾರೆಂದು ಆಶಿಸೋಣ.

* * *

ಈ ಬಾರಿ ಬೀಜಿಂಗ್ ಒಲಿಂಪಿಕ್ಸ್‌ನಲ್ಲಿ ಭಾರತದ ಹಾಕಿ ತಂಡ ಇರುವುದಿಲ್ಲವೆಂಬ ಖಿನ್ನತೆಯು ಹಲವು ಯೋಚನಾತರಂಗಗಳನ್ನು ಹೊರಡಿಸುತ್ತದೆ. ಎಂಟು ದಶಕಗಳಲ್ಲಿ ಮೊದಲ ಬಾರಿಗೆ ಇಂತಹ ಅನಿಷ್ಟ ಬೆಳವಣಿಗೆ ಕಂಡುಬಂದಿದೆ. ಹಾಕಿ ಫೆಡರೇಷನ್, ಆಟಗಾರರನ್ನು ಆಯ್ಕೆಮಾಡುವ ವಿಧಾನದಲ್ಲಿ ತಾರತಮ್ಯ, ತಾಂತ್ರಿಕ ಕೌಶಲ್ಯಕ್ಕೆ ಆದ್ಯತೆ ನೀಡದಿರುವುದು, ಹೊಸದಾಗಿ ಆಟಕ್ಕೆ ಆಕರ್ಷಿತರಾಗದ ಯುವಕರ ಭಿನ್ನ ಆಸಕ್ತಿಗಳು, ಅವಕಾಶ ಕಲ್ಪಿಸದ ನಮ್ಮ ವ್ಯವಸ್ಥೆ, ಕ್ರಿಕೆಟ್ ಎಂಬ ವಿಷವನ್ನು ಸಮೃದ್ಧವಾದ ಅಮೃತವೆಂಬಂತೆ ಅಫೀಮಿನ ಮಾದರಿಯಲ್ಲಿ ಜನರ ಮನಸ್ಸಿನೊಳಗೆ ತುಂಬುವುದು, ಹೀಗೆ ಯಾವುದನ್ನು ಕಾರಣವನ್ನಾಗಿ ಗುರುತಿಸಬೇಕು ! ''ವ್ಯಾಕುಲತೆಯನ್ನು ಬಿಟ್ಟೇಳು'' ಎಂದು ಅರ್ಜುನನಿಗೆ ಕೃಷ್ಣ ಪರಮಾತ್ಮನು ಬೋಧಿಸಿದನಂತೆ. ಅದಕ್ಕೆ ಪ್ರತಿಕ್ರಿಯಿಸಿದ ವೀರ ಅರ್ಜುನನಂತೆ ನಮ್ಮ ಆಟಗಾರರು ಪ್ರತಿದ್ವಂದ್ವಿಗಳನ್ನು ಕೊಲ್ಲುವುದು ಬೇಡ, ಆದರೆ ಆಟದಲ್ಲಿ ಅವರನ್ನು ಮಣಿಸಲು ಬೇಕಾದ ಸಾಮರ್ಥ್ಯವನ್ನು ಪಡೆಯುವಂತೆ ಕ್ರಮಗಳನ್ನು ಈ ಕೂಡಲೆ ಕೈಗೊಳ್ಳಬೇಕು. ವ್ಯಸನ, ಭಾಷಣ, ಉಪದೇಶ ಮತ್ತು ಟೀಕೆಗಳು ಸಾಕು ; ಹೊಸ ಕಾರ್ಯತಂತ್ರದತ್ತ ಗಮನಹರಿಸೋಣ.




## ಪ್ರತಿಕ್ರಿಯೆ

ಡಾಕ್ಟರ್ ಮಹಾಬಲೇಶ್ವರ ರಾಯರು ಸಾಮಾನ್ಯ ಶಾಲೆಗಳ ಬಗ್ಗೆ ನಾನು ವಾದಿಸುವಂತೆ ನನ್ನ ಸಾಂಸಾರಿಕ ಜೀವನದಲ್ಲಿ ನಾನೇ ನಡೆದುಕೊಂಡಿಲ್ಲವೆಂದು ದೂರಿದ್ದಾರೆ. ಅವರ ವೈಯಕ್ತಿಕವಾದ ದೂರಿನಲ್ಲಿ ಕೊಂಚ ಸತ್ಯವಿದೆ; ಅವರಿಗೆ ಗೊತ್ತಿಲ್ಲದ ಕೆಲವು ವಿಷಯಗಳೂ ನನ್ನ ಸಾಂಸಾರಿಕ ಜೀವನದಲ್ಲಿ ಇವೆ. ಆದರೆ ಅವರಿಗೆ ಗೊತ್ತಿರುವ ಕೆಲವು ಸಂಗತಿಗಳ ಮೂಲಕ ಅವರು ಹೂಡುವ ವಾದದಲ್ಲಿ ತಿರುಳು ಇಲ್ಲ. ನನ್ನ ಮಕ್ಕಳು ಮೈಸೂರಿನ ಕೇಂದ್ರೀಯ ಶಾಲೆಗಳಲ್ಲಿ ಓದಿದವರು. (ಇವು ಒಳ್ಳೆಯ ಶಾಲೆಗಳು; ವ್ಯಾಪಾರೀ ಸಂಸ್ಥೆಗಳಲ್ಲ). ಆದರೆ ಪ್ರಾರಂಭದಲ್ಲಿ ನಾನು ಇಂಗ್ಲೆಂಡಿನಲ್ಲಿ ಓದಿಬಂದನಂತರ ನನ್ನ ಜೊತೆ ಇಂಗ್ಲೆಂಡಿನಲ್ಲಿ ಬೆಳೆದ, ಕನ್ನಡ ಚೆನ್ನಾಗಿ ಬಾರದ ನನ್ನ ಮಗನನ್ನು ಅವನು ಕನ್ನಡ ಕಲಿಯಬೇಕೆಂಬ ಕಾರಣದಿಂದ ಮನೆಯ ಹತ್ತಿರದ ಒಂದು ಸಾಮಾನ್ಯ ಶಾಲೆಗೆ ಸೇರಿಸಿದ್ದೆ. ಆಮೇಲೆ ರೀಜನಲ್ ಕಾಲೇಜಿನ ಅಧ್ಯಾಪಕನಾಗಿ ನನಗೆ ಲಭ್ಯವಿದ್ದ ಕೇಂದ್ರೀಯ ಶಾಲೆಗೆ ಸೇರಿಸಿದೆ. ನನ್ನ ಮಗಳೂ ಮಾನಸಗಂಗೋತ್ರಿಯ ಎಲ್ಲ ಮಕ್ಕಳ ಶಾಲೆಯಲ್ಲಿ ಬೆಳೆದು ಆನಂತರ ಕೇಂದ್ರೀಯ ಶಾಲೆ ಸೇರಿದಳು. ನನ್ನ ಮಗ ಭೌತಶಾಸ್ತ್ರದ ಅಧ್ಯಾಪಕ; ಆತ ಕನ್ನಡದಲ್ಲಿ ಪಾಠ ಮಾಡುವ ಶಕ್ತಿ ಪಡೆದಿದ್ದಾನೆ; ಕನ್ನಡದಲ್ಲಿ ಬರೆಯಬಲ್ಲ ಕೂಡ. ಇದು ನನ್ನ ಮಗಳ ಬಗ್ಗೆಯೂ ನಿಜ. ಅವಳು ವೈದ್ಯಕೀಯ ವಿಷಯಗಳನ್ನು ಕನ್ನಡದಲ್ಲಿ ವಿವರಿಸಬಲ್ಲಳು, ಬರೆಯಬಲ್ಲಳು. ಮಾಧ್ಯಮ ಇಂಗ್ಲಿಷ್ ಆದರೂ ಮೈಸೂರಿನ ಕೇಂದ್ರೀಯ ಶಾಲೆ ಎಲ್ಲ ವಿಷಯಗಳಲ್ಲೂ ಈಗಿನ ವ್ಯಾಪಾರೀ ಶಾಲೆಗಳಂತೆ ಮುಖ್ಖಿಕಾಮುಖ್ಖಿ ಪಾಠಕ್ರಮದ ಅರಗಿಣಿ ಪಂಜರಗಳಾಗಿರಲಿಲ್ಲ.

ಈಗ ನನ್ನ ಮೊಮ್ಮಕ್ಕಳು ಮಾತ್ರ, ಅವರ ತಂದೆ ಕನ್ನಡದ ಒಬ್ಬ ಬರಹಗಾರನಾದರೂ, ಅವರು ಇರುವ ವಾತಾವರಣದಿಂದಾಗಿ, ಅವರು ಕಲಿಯುವ ಶಾಲೆಯಿಂದಾಗಿ, ಬೆಂಗಳೂರಿನಿಂದಾಗಿಯೂ ಹೆಚ್ಚು ವ್ಯವಹರಿಸುವುದು, ಕನ್ನಡ ಚೆನ್ನಾಗಿ ಗೊತ್ತಿದ್ದೂ, ಇಂಗ್ಲಿಷಿನಲ್ಲಿ. ಇದನ್ನು ಬದಲಾಯಿಸಲು ಅವರ ತಾಯಿ ತಂದೆಯರು ಏನು ಮಾಡುತ್ತ ಇದ್ದಾರೆಂದು ನಾನೇ ವಿವರಿಸ ಹೊರಡುವುದು ತಪ್ಪಾಗುತ್ತದೆ. ಸಾಮಾನ್ಯ ಶಾಲೆಗಳಲ್ಲಿ ನಾವು ಬಯಸಿದರೂ ನಮ್ಮ ಮಕ್ಕಳನ್ನು ಓದಿಸಲು ಹಿಂಜರಿಯುತ್ತೇವೆ ಯಾಕೆ ಎಂಬುದನ್ನು ಗಾಢವಾಗಿ ಚರ್ಚಿಸಬೇಕೆಂಬುದು ನನ್ನ ಮತ. ಮೇಲಿನ ವರ್ಗದ ನಾಯಕತ್ವದ ನಮ್ಮ ಸರ್ಕಾರಗಳೂ ಕಾರಣವೆಂಬುದನ್ನು ಡಾ|| ಮಹಾಬಲೇಶ್ವರ ರಾಯರು ಗುರುತಿಸಿದ್ದಾರೆ. ಆದರೆ ನಾನೇಕೆ ಈ ಬಗ್ಗೆ ಹಿಂದೆ ಮಾತನಾಡಿಲ್ಲ ಎಂದು ಅವರು ಕೇಳುತ್ತಾರೆ. ಆದರೆ ಈ ವಿಷಯದ ಬಗ್ಗೆ ಮುಂಚಿನಿಂದಲೂ ನಾನು ಮಾತಾಡುತ್ತಲೇ ಇದ್ದೇನೆಂಬುದು ಅವರಿಗೆ ತಿಳಿಯದೆಂಬುದು, ಅವರು ಶಿಕ್ಷಣ ತಜ್ಞರಾದ್ದರಿಂದ, ನನಗೆ ಬೇಸರದ ಸಂಗತಿ.

ಕುವೆಂಪು ಮಾದರಿ ಶಾಲೆ ಕನ್ನಡದಲ್ಲಿ ಪಾಠ ಮಾಡಿಯೂ ಅತ್ಯುತ್ತಮ ಶಾಲೆಯಾಗಬಹುದೆಂಬುದನ್ನು ಎಲ್ಲ ಸಂಸಾರಿಗಳಿಗೆ ಮನದಟ್ಟುಮಾಡಬೇಕೆಂಬ ಆಸೆಯಿಂದ ನಾನು ಮುಖ್ಯಮಂತ್ರಿ ಕೃಷ್ಣರಲ್ಲಿ ಮನವಿ ಮಾಡಿಕೊಂಡೆ. ಅವರೂ ಒಪ್ಪಿದ್ದರು; ಆದರೆ ಇದು ಕೈಗೂಡಲಿಲ್ಲ. ಕನ್ನಡದಲ್ಲಿ ಜಗತ್ತಿನಲ್ಲಿ ಲಭ್ಯವಿರುವ ಜ್ಞಾನದ ಸ್ವೀಕಾರ ಮಾತ್ರವಾದರೆ ಸಾಲದು; ಜ್ಞಾನದ ಹೊಸ ಸೃಷ್ಟಿಯೂ ಆಗಬೇಕೆಂಬುದು ನನ್ನ ಆಸೆ.

ನನ್ನ ಮಕ್ಕಳಾಗಲಿ ಮೊಮ್ಮಕ್ಕಳಾಗಲಿ ಸಾಮಾನ್ಯ ಶಾಲೆಗಳಲ್ಲಿ ಓದಿಲ್ಲ ಎಂಬ ಕಾರಣದಿಂದ ನನ್ನ ವಾದದ ಹಿಂದಿರುವ ವಿಚಾರಗಳೂ ಸುಳ್ಳಾಗುವುದಿಲ್ಲ. ಒಂದು ವ್ಯವಸ್ಥೆಯೇ ಬದಲಾಗಬೇಕೆಂಬ ನನ್ನ ವಿಚಾರವನ್ನು ಒಂದು ವಿಚಾರವಾಗಿಯೇ ಶಿಕ್ಷಣತಜ್ಞರು ಚರ್ಚಿಸಬಲ್ಲರೆಂದು ನಾನು ತಿಳಿದಿದ್ದೇನೆ. ನನ್ನ ವಿಚಾರಗಳಿಗೂ ನನ್ನ ಜೀವನ ಕ್ರಮಕ್ಕೂ ನಾನು ಅನುಭವಿಸುವ ಸೌಲಭ್ಯಗಳಿಗೂ ಇರುವ ಅಂತರಗಳ ಅರಿವು ನನಗೆ ಇದೆ. ಅವು ನನ್ನನ್ನು ಬಾಧಿಸುತ್ತವೆ ಎಂದಷ್ಟು ಮಾತ್ರ ವಿನಯದಲ್ಲಿ ನಾನು ಹೇಳಬಲ್ಲೆ.




ನಾನು ಹೇಳುವ ಎಷ್ಟೋ ಮಾತುಗಳು ನನಗೇ ನಾನು ಹೇಳಿಕೊಳ್ಳುವ ಮಾತುಗಳು; ಎತ್ತರದಲ್ಲಿ ನಿಂತು ಇತರರಿಗೆ ಬುದ್ಧಿ ಹೇಳುವ ಹಿರಿತನದ ಮಾತುಗಳಲ್ಲ. ನನ್ನ ವಿಚಾರಗಳ ಬೆಳಕಿನಲ್ಲಿ ನಾನು ಸತತವಾದ ಆತ್ಮವಿಮರ್ಶೆಯಲ್ಲೂ ಹತಾಶೆಯಲ್ಲೂ ಬದುಕುತ್ತ ಇದ್ದೇನೆ. ಆದರೆ ನನ್ನನ್ನು ಬಿಟ್ಟೂ ನಾನು ಮಾಡುವ ವಿಚಾರಗಳಲ್ಲಿ ಒಂದು ಸತ್ಯವಿರಬಹುದೆ ಎಂದು ಶಿಕ್ಷಣತಜ್ಞರಾದ ಡಾ|| ಮಹಾಬಲೇಶ್ವರ ರಾಯರನ್ನು ನಾನು ಈ ಬಗ್ಗೆ ಮಾಡಿರುವ ಎಲ್ಲ ಸೂಕ್ಷ್ಮ ವಿಚಾರಗಳನ್ನೂ ಗಮನಿಸಿ ಚರ್ಚಿಸಬೇಕೆಂದು ನಮ್ರತೆಯಲ್ಲಿ ಕೋರುತ್ತೇನೆ. ನಾನು ಪ್ರೀತಿಸುವ ತುಂಬ ಜಾಣರಾದ ನನ್ನ ಮೊಮ್ಮಕ್ಕಳೂ ಅವರ ವಾರಿಗೆಯ ಎಲ್ಲ ಮಕ್ಕಳೂ ಇಂಗ್ಲಿಷ್ ಬಲ್ಲವರಾಗಿಯೂ ಕನ್ನಡದಲ್ಲಿ ಜ್ಞಾನವನ್ನು ಸೃಷ್ಟಿಮಾಡಬಲ್ಲವರಾಗಬೇಕೆಂಬುದು ನನ್ನ ಆಸೆ. ಸಾಮಾನ್ಯ ಶಾಲೆಗಳಿಗೆ ಎಲ್ಲ ಮಕ್ಕಳೂ ಹೋಗಲೇಬೇಕೆಂಬ ಸಮಾಜವಾದೀ ವ್ಯವಸ್ಥೆ ನಮ್ಮದಾದಲ್ಲಿ, ಎಲ್ಲ ಮಕ್ಕಳ ಜೊತೆ ಬೆಳೆಯಲೇಬೇಕಾದ ಅನಿವಾರ್ಯತೆ ಇದ್ದಲ್ಲಿ ಅವರ ಬದುಕು ಇನ್ನಷ್ಟು ಶ್ರೀಮಂತವಾಗುತ್ತದೆಂಬ ನನ್ನದೇ ಆದ ಶಾಲಾನುಭವದಿಂದ ಹೇಳುತ್ತ ಇದ್ದೇನೆ. ನಾನು ಹತ್ತನೇ ಇಯತ್ತೆಯತನಕ ಓದಿದ್ದು ಕನ್ನಡ ಮಾಧ್ಯಮದ ಶಾಲೆಯಲ್ಲಿ; ಎಲ್ಲ ಮಕ್ಕಳ ಜೊತೆ. ಈಗಿರುವ ವ್ಯವಸ್ಥೆಯಲ್ಲೇ ಶ್ರೀಮಂತರ ಶಾಲೆಗಳಲ್ಲಿ ಶೇಕಡ ಮೂವತ್ತು ಸ್ಥಳೀಯ ವಿದ್ಯಾರ್ಥಿಗಳಿಗೆ ಕಲಿಯಲು ಅವಕಾಶವಿರಲೇಬೇಕು. ಯಾಕೆಂದರೆ ಅವರು ಶಾಲೆಗಳನ್ನು ನಡೆಸುವ ಜಾಗಗಳು ಇಡೀ ಸಮಾಜಕ್ಕೆ ಸೇರಿದ್ದು. ಜೊತೆಗೆ ಮಾನವಿಕ ಜ್ಞಾನಶಾಖೆಗಳಿಗೆ ಸಂಬಂಧಿಸಿದ ಚರಿತ್ರೆ, ಭೂಗೋಳ, ಸಿವಿಕ್ಸ್‌ನಂತಹ ವಿಷಯಗಳನ್ನು ಎಲ್ಲ ಮಕ್ಕಳಿಗೂ ಸ್ಥಳೀಯ ಭಾಷೆಯಲ್ಲಿ ಕಲಿಸತಕ್ಕದ್ದು. ಯಾಕೆಂದರೆ ಈ ವಿಷಯ ಗಳನ್ನು ಮಕ್ಕಳು ಗ್ರಹಿಸುವುದು ಪಠ್ಯಪುಸ್ತಕಗಳಿಂದ ಮಾತ್ರವಲ್ಲ; ಅವರು ಓಡಾಡುವ ಸಾಮಾನ್ಯರ ಸಮೃದ್ಧ ಜೀವನದ ಬೀದುಗಳಿಂದಲೂ ಕೂಡ.

ಅದಕ್ಕಾಗಿ ಚಳುವಳಿಯೊಂದನ್ನು ನಾನು ನಡೆಸುವಷ್ಟು ಹಕ್ಕು ತಿಳಿದಂತೆ ಎಲ್ಲ ವಿಷಯಗಳಲ್ಲೂ ಬಾಳಲಾರದೇ ಹೋದ ನನ್ನಂತಹ ಅನೇಕರಿಗೆ ಇಲ್ಲವೆಂಬುದು ನನಗೂ ವಿಷಾದದ ಸಂಗತಿಯೇ. ಡಾ|| ಮಹಾಬಲೇಶ್ವರ ರಾಯರಿಗೂ ಇದು ವಿಷಾದದ ಸಂಗತಿಯಾದರೆ, ಸಿನಿಕರಾಗಿ ನನ್ನ ನ್ಯೂನತೆಗಳನ್ನು ಜರೆಯದಿದ್ದರೆ, ಅವರ ಜೊತೆ ನಾನು ಮಾತಾಡಬಹುದು.

*ಬೆಂಗಳೂರು* **ಯು. ಆರ್. ಅನಂತಮೂರ್ತಿ**

## ಜ್ಞಾನದೀವಿಗೆ ಬೀರಿದ ಬೆಳಕು

೨೦೦೮ರ ಫೆಬ್ರವರಿ 'ಹೊಸತು' ಸಂಚಿಕೆಯಲ್ಲಿ ನಮ್ಮ ಗುರುಗಳಾಗಿದ್ದ ಮಾನ್ಯ ಕೆ.ವಿ.ಆರ್.ರವರ ಬಗ್ಗೆ ಓದಿ ತುಂಬ ಸಂತೋಷವಾಯ್ತು. ನಾನು ಒಂದೇ ಒಂದು ವರ್ಷ ಅವರ ಶಿಷ್ಯಳಾಗಿದ್ದೆ. ಅವರು ೧೯೪೪ರಲ್ಲಿ ಬೆಂಗಳೂರಿನ ಬಸವನಗುಡಿಯ ಆಚಾರ್ಯ ಪಾಠಶಾಲೆಯಲ್ಲಿ ಶಿಕ್ಷಕರಾಗಿದ್ದಾಗ, ನಾನು ೮ನೇ ತರಗತಿ (ಆಗಿನ IV ಫಾರಂ) ಯಲ್ಲಿ ಓದುತ್ತಿದ್ದೆ. ಅವರು ನಮಗೆ ಇಂಗ್ಲಿಷ್ ಗ್ರಾಮರ್ ಮತ್ತು ಕಾಂಪೊಸಿಷನ್ ಹಾಗೂ ಭೂಗೋಳ ಪಾಠ ಮಾಡುತ್ತಿದ್ದರು. ಅವರ ಪಾಠದ ರೀತಿ ಇತರ ಎಲ್ಲರಿಗಿಂತ ವಿಭಿನ್ನವಾಗಿರುತ್ತಿತ್ತು. ಆ ವಿಭಿನ್ನತೆ ಏನೆಂದು ಮಾತುಗಳಲ್ಲಿ ಹೇಳಲು ಆಗಲೂ ತಿಳಿಯುತ್ತಿರಲಿಲ್ಲ, ಈಗಲೂ ತಕ್ಕ ಶಬ್ದಗಳು ಹೊಳೆಯುತ್ತಿಲ್ಲ. ಅದೊಂದು ತರಹ ಅನುಭವೈಕ ವೇದ್ಯ. ಮೇಷ್ಟ್ರು ಪಾಠ ಮಾಡ್ತಿದಾರೆ ಅನ್ನೋ ಒಂದು ಔಪಚಾರಿಕ ಭಾವನೆಯೇ ಬಾರದಂತೆ ಕಲಿಸುತ್ತಿದ್ದರು. ತರಗತಿಯ ಪಾಠವಲ್ಲದೆ, ಅನೇಕ ಇತರ ವಿಷಯಗಳನ್ನೂ ತಿಳಿಸಿ ಹೇಳುತ್ತಿದ್ದರು. ಒಂದು ಸಲ ಅವರು ತರಗತಿಯಲ್ಲಿ ಗಾಂಧೀಜಿ ಬಗ್ಗೆ ಕೆಲವು ವಿಷಯ ತಿಳಿಸಿದರು. ಅದು ಕನ್ನಡ ಮಾಧ್ಯಮ. ಅವರು ಹೇಳಿದ್ದೂ ಕನ್ನಡದಲ್ಲೇ. ನಂತರ, ''ಈಗ ಗಾಂಧಿ ಬಗ್ಗೆ ಕೇಳಿದಿರಲ್ಲ, ಅದರ ಜೊತೆಗೆ ನಿಮಗೆ ಇನ್ನೂ ಏನಾದ್ರೂ ಗಾಂಧಿ ಬಗ್ಗೆ ಗೊತ್ತಿದ್ರೆ, ಅದನ್ನೂ ಸೇರಿಸಿ, ಒಂದು ಪ್ರಬಂಧ ಬರೆಯಿರಿ. ಇಂಗ್ಲಿಷ್‌ನಲ್ಲಿ'' ಎಂದರು. ಇದು ಅವರ ಇಂಗ್ಲಿಷ್ ವಾಕ್ಯ ರಚನಾ ಪಾಠದ ಒಂದು ಮಾದರಿ, ಅಷ್ಟೆ. ತರಗತಿಯಲ್ಲೇ ಬರೆಯುತ್ತಿದ್ದೆವು. ತಂದೆ, ತಾಯಿ, ಮತ್ತಿತರರ ಸಹಾಯವಿಲ್ಲದೆ ಕೇವಲ ಸ್ವಂತ ಬರಹ. (ಪ್ರಬಂಧ ಬರೆಯುವಾಗ ಕನ್ನಡ ಪದಗಳಿಗೆ ಸಮಾನವಾದ ಇಂಗ್ಲಿಷ್ ಪದಗಳು ನಮಗೆ ಗೊತ್ತಿಲ್ಲದಿದ್ದರೆ ಅಲ್ಲೇ ಮೇಷ್ಟರನ್ನೇ ಕೇಳಬಹುದಾಗಿತ್ತು. ನಾನೂ ಹಾಗೆ ಎರಡು ಪದಗಳನ್ನು ಕೇಳಿದ್ದೆ. ಅವು ಇನ್ನೂ ನೆನಪಿನಲ್ಲಿವೆ, ''ಎಕ್ಕು, ನೂಲು''). ಹೋಂ

ವರ್ಕ್ ಎಂಬ ಹೊರೆಯಿಲ್ಲ. ಬರೀ ಪಾಠಕೇಳುತ್ತ, ''ಕೈಕಟ್ಟಿ, ಬಾಯ್ಮುಚ್ಚಿ'' ಕುಳಿತಿರುವ ಬದಲು, ವಿದ್ಯಾರ್ಥಿಗಳ ಸಕ್ರಿಯ ಪಾಲುಗೊಳ್ಳುವಿಕೆ. ಬರೀ ಇಷ್ಟೇ ಅಲ್ಲ; ಆ ದಿನ ಗಾಂಧೀಜಿ ಮೇಲೆ ನಾವೆಲ್ಲ ಬರೆದ ಪ್ರಬಂಧಗಳನ್ನು, ಮೇಷ್ಟ್ರು ಮನೆಗೆ ತೆಗೆದುಕೊಂಡು ಹೋಗಿ, ತಿದ್ದಿ ಮೌಲ್ಯಮಾಪನ ಮಾಡಿ, ಮುಂದಿನ ವಾರದ ತರಗತಿಯಲ್ಲಿ ನಮಗೆ ಹಿಂದಿರುಗಿಸಿದರು. ಜೊತೆಯಲ್ಲೇ ಉತ್ತಮವಾಗಿ ಪ್ರಬಂಧ ಬರೆದವರು ಎಂದು ನಮ್ಮಲ್ಲಿ ೪-೫ ಜನಕ್ಕೆ ಪುಟ್ಟ, ಪುಟ್ಟ ಪುಸ್ತಕಗಳನ್ನು ಕೊಟ್ಟರು. ನನಗೂ ''ಕಸ್ತೂರಿ ಬಾ'' ಎಂಬ ಪುಸ್ತಕ ದೊರಕಿತು. ಅದು ಈಗಲೂ ನನ್ನ ಬಳಿ ಇದೆ. ಅದರಲ್ಲಿ ಮೇಷ್ಟರು ಸಹಿ ಹಾಕಿದ್ದಾರೆ, ತಾರೀಖು ೫-೧೦-೧೯೪೪. ಆ ಪುಸ್ತಕದ ಮಾರಾಟದ ಲಾಭವೆಲ್ಲ ''ಕಸ್ತೂರಿ ಬಾ ರಾಷ್ಟ್ರೀಯ ಸ್ಮಾರಕ ನಿಧಿ''ಗೆ ಸಂದಾಯವಾಗುತ್ತಿತ್ತು. ನಮ್ಮ ಕೈಲಿ ಪ್ರಬಂಧ ಬರೆಸಿ, ಮೇಷ್ಟ್ರು ತಮ್ಮ ಸ್ವಂತ ಹಣದಿಂದ ನಮಗೆಲ್ಲ ಬಹುಮಾನ ಕೊಟ್ಟಿದ್ದರು ಮತ್ತು ಅದಕ್ಕಾಗಿ ಖರ್ಚು ಮಾಡಿದ ಹಣ ರಾಷ್ಟ್ರೀಯ ಸ್ಮಾರಕ ನಿಧಿಗೆ! ಹೇಗಿದೆ, ನಮ್ಮ ಮೇಷ್ಟರ ಆದರ್ಶ! ಇದೊಂದೇ ಅಲ್ಲ, ಇದೇ ರೀತಿ ಮೇಡಂ ಕ್ಯೂರಿ ಬಗ್ಗೆಯೂ ಕನ್ನಡದಲ್ಲಿ ಹೇಳಿ, ನಂತರ ಇಂಗ್ಲಿಷ್‌ನಲ್ಲಿ ನಮ್ಮಿಂದ ತರಗತಿಯಲ್ಲೇ ಪ್ರಬಂಧ ಬರೆಯಿಸಿದ್ದರು. ಆಗ ಶ್ರೀಮತಿ ಕೆ. ವಿ. ರತ್ನಮ್ಮನವರು ಬರೆದ ಮೇರಿ ಕ್ಯೂರಿ ಪುಸ್ತಕಗಳನ್ನು ಬಹುಮಾನವಾಗಿ ಕೊಟ್ಟಿದ್ದರು.

ಕೆ.ವಿ.ಆರ್. ಮೇಷ್ಟ್ರು ತರಗತಿಯಲ್ಲಿ ಮಧ್ಯೆ ಮಧ್ಯೆ ತಮಾಷೆ ಮಾಡುತ್ತ, ನಮ್ಮನ್ನು ನಗಿಸುತ್ತಿದ್ದರು. ಒಂದು ಸಲ ಅವರು ಭೂಕಂಪಗಳ ಬಗ್ಗೆ ಪಾಠ ಮಾಡುತ್ತಿದ್ದರು. ಮಲೇರಿಯಾ ಪೀಡಿತಳಾಗಿದ್ದ ನನಗೆ, ಆ ಸಮಯದಲ್ಲೇ ಚಳಿಬಂದು ನಡುಗಲಾರಂಭಿಸಿದೆ. ಮಿಕ್ಕವರು ನೋಡುವ ಮೊದಲೇ, ಮೇಷ್ಟರು ಇದನ್ನು ಗಮನಿಸಿದರು. ''ಓ, ನಾನಿಲ್ಲಿ ಭೂಕಂಪದ ಬಗ್ಗೆ ಹೇಳ್ತಾ ಇದ್ರೆ, ಇಲ್ಲೊಬ್ಬರಿಗೆ ಮೈಕಂಪ ಆಗ್ತಾ ಇದ್ಯಲ್ಲ'' ಎಂದರು. ಎಲ್ಲಾ ಹುಡುಗಿಯರೂ ನನ್ನ ಕಡೆ ನೋಡಿ ಗೊಳ್ ಎಂದು ನಕ್ಕರು. ನಾನೂ ನಡುಗುತ್ತಲೇ ನಕ್ಕೆ. ಮೇಷ್ಟ್ರು ಪಾಠ ನಿಲ್ಲಿಸಿ, ಶಾಲೆಯ ಆಳನ್ನು ಜೊತೆ ಮಾಡಿ, ಕೂಡಲೆ ನನ್ನನ್ನು ಮನೆಗೆ ಕಳಿಸಿಕೊಟ್ಟರು. ತಮಾಷೆಯೊಂದಿಗೆ ಶಿಷ್ಯರ ಬಗ್ಗೆ ಕಾಳಜಿ, ವಾತ್ಸಲ್ಯ!

ಮೇಷ್ಟರು ಒಮ್ಮೆ ರವೀಂದ್ರನಾಥ ಠಾಕೂರರ ಬಗ್ಗೆ ನಮಗೆ ತಿಳಿಸುತ್ತ ಇದ್ದರು. ಆಗ ''ಪರ್ಫೆಕ್ಟ್'' ಅನ್ನೋ ಶಬ್ದ ಬಳಸಿ ಏನೋ ಹೇಳಿದರು. ನನಗೆ ಹಾಗೆಂದರೆ ಏನೆಂದು ಅರ್ಥವಾಗಲಿಲ್ಲ. ನಾನು ಎದ್ದುನಿಂತು 'ಸಾರ್, ಪರ್ಫೆಕ್ಟ್ ಎಂದರೇನು' ಎಂದೆ. ಪಾಠದ ಓಟಕ್ಕೆ ತಡೆಯಾಯ್ತೋ ಏನೋ! ಆದರೂ ಅವರೇನೂ ನನ್ನನ್ನು ಗದರಿಸಲಿಲ್ಲ. 'ಆಮೇಲೆ ಹೇಳ್ತೀನೆ' ಎನ್ನುತ್ತ, ಠಾಕೂರರ ಬಗ್ಗೆ ಮಾತು ಮುಂದುವರೆಸಿದರು. ಹಾಗೇ ಹೇಳುತ್ತಾ, 'ಟಾಗೋರ್ ಸಾಯೋಕೆ ಮುಂಚೆ ಗೀತಾಂಜಲಿ ಅನ್ನೋ ಪದ್ಯ ಬರೆದ' ಎಂದರು. ನಾನು ತಟ್ಟನೆ ''ಸಾರ್, ಹಾಗಾದ್ರೆ ಮಿಕ್ಕದ್ದೆಲ್ಲಾ ಸತ್ತಮೇಲೆ ಬರೆದಿದ್ದಾ?'' ಎಂದು ಕೇಳಿದೆ. ೧೧ ವರ್ಷದ ಹುಡುಗಿಯ ಎಳೆನಿಂಬೆಕಾಯಿ ಬುದ್ಧಿ! ಮನಸ್ಸಿಗೆ ಬಂದದ್ದನ್ನು ಸ್ವಲ್ಪವೂ ಯೋಚಿಸದೇ ಇಂಪಲ್ಸಿವ್ ಆಗಿ ಕೇಳಿಬಿಟ್ಟೆ. ಯಾವುದೇ ಶಿಕ್ಷಕರು, 'ತಲೆಹರಟೆ' ಎಂದು ಬೈಯಬಹುದಾಗಿದ್ದ ಸನ್ನಿವೇಶ. ಆದರೆ ನಮ್ಮ ಮೇಷ್ಟರು ಹಾಗೇನೂ ಮಾಡಲಿಲ್ಲ. ನಕ್ಕರು, ಜೋರಾಗಿಯೇ ನಕ್ಕರು. ಆಮೇಲೆ ''ನೋಡು, ಆಗ ಕೇಳಿದ್ಯಲ್ಲಾ ಪರ್ಫೆಕ್ಟ್ ಅಂದರೇನೂಂತ, ಇದು, ಈಗ ಕೇಳಿದ್ಯಲ್ಲ ಅದು ಪರ್ಫೆಕ್ಟ್ ಪ್ರಶ್ನೆ'' ಎಂದರು. ಅವರು ಏನೂ ಬಯ್ಯದಿದ್ದರೂ, ನಾನು ತಲೆಹರಟೆ ಹರಟಿದೆನೋ ಏನೋ ಎಂಬ ಅಳುಕು, ಅಪರಾಧಿ ಪ್ರಜ್ಞೆ ಅನೇಕ ದಿನ ನನ್ನನ್ನು ಕಾಡಿತ್ತು.

ಕೆ.ವಿ.ಆರ್. ಮೇಷ್ಟ್ರು ೧೯೪೮ರಿಂದ ತುಮಕೂರಲ್ಲೇ ನೆಲೆಸಿದ್ದು ನನಗೆ ಗೊತ್ತೇ ಇರಲಿಲ್ಲ. (೧೯೪೯ ರಿಂದ ೧೯೫೩ ರವರೆಗೆ ನಾನೂ ತುಮಕೂರಿನಲ್ಲೇ ಇದ್ದೆ. ಗೊತ್ತಿದ್ದರೆ ಒಂದು ಸಲವಾದರೂ ಮೇಷ್ಟರನ್ನು ನೋಡಿ ಬರಬಹುದಾಗಿತ್ತು). ೧೯೬೫ರಲ್ಲಿ ನಾನು ಬಿ.ಎಡ್. ವಿದ್ಯಾರ್ಥಿನಿಯಾಗಿದ್ದಾಗ, ಕಾಲೇಜಿನಿಂದ ನಮ್ಮನ್ನು ಸಿದ್ಧಗಂಗಾ ಹೈಸ್ಕೂಲಿಗೆ ಕರೆದುಕೊಂಡುಹೋಗಿದ್ದರು. ಆಗ ಮೇಷ್ಟರನ್ನು ನೋಡಿ, ಮಾತಾಡಿಸಿದೆ. ನನ್ನ ಗುರುತನ್ನೂ ಹೇಳಿಕೊಂಡೆ. ಆದರೆ ಮೇಷ್ಟರು ನನ್ನನ್ನು ಸಂಪೂರ್ಣವಾಗಿ ಮರೆತುಬಿಟ್ಟಿದ್ದರು! ೨೧ ವರ್ಷಗಳ ಸುದೀರ್ಘ ಅವಧಿಯ ನಂತರ, ಕೇವಲ ಒಂದೇ ವರ್ಷ ಶಿಷ್ಯಳಾಗಿದ್ದವಳನ್ನು ನೋಡಿದರೆ ಹೇಗೆ ತಾನೇ ನೆನಪಿಸಿಕೊಳ್ಳಲು ಸಾಧ್ಯ? ಮೇಷ್ಟರು ನನ್ನನ್ನು ಮರೆತರೇನು? ಅವರ ಪಾಠದ ರೀತಿಯ ಸೊಗಸು, ನನ್ನ ಮನಸ್ಸಿನಲ್ಲಿತುಂಬಿ, ಕಿವಿಯಲ್ಲಿ ರಿಂಗಣಿಸುತ್ತಿದೆ. ನನ್ನ ಮನದಲ್ಲಿ ಮಾಸಲಾರದ ಮುದ್ರೆಯೊತ್ತಿದೆ. ಆ ನಮ್ಮ ಗುರುಗಳಿಗೆ 'ಹೊಸತು' ಮೂಲಕ ನನ್ನ ನಮನಗಳು. ಅವರ ಶಿಷ್ಯಳಾಗಿದ್ದ ಕಾಲದ ಸವಿನೆನಪಿನ ನವಿಲು ಗರಿಗೆದರಿ ಕುಣಿಯಲು ಕಾರಣವಾದ 'ಹೊಸತು' ಪತ್ರಿಕೆಗೂ ಕೃತಜ್ಞತೆಗಳು.

ಕತ್ರಿಗುಪ್ಪೆ, ಬೆಂಗಳೂರು **ಬಿ. ಜಿ. ಕುಸುಮಾ**

### ನಗರ ಜೀವಿಗಳ ಮನಃಸ್ಥಿತಿ

ನಗರದಲ್ಲಿ ಸಾಮಾನ್ಯವಾಗಿ ಅಕ್ಷರಸ್ಥರ ಸಂಖ್ಯೆ ಜಾಸ್ತಿ. ಆದರೆ, ಇಂಥಲ್ಲಿಯೇ ಇವತ್ತು ಮೂಢನಂಬಿಕೆಯೂ ಜಾಸ್ತಿಯಾಗಿದೆ. ಬೀದರಿನ ಹಳ್ಳಿಗಾಡಿನಲ್ಲಿ ಮೂಢನಂಬಿಕೆಯ ಬಗೆಗಿರುವ ವರದಿಯನ್ನು ನೋಡಿ ನಾವು ದಂಗಾಗುತ್ತೇವೆ. ಹಳ್ಳಿಗಳ ಅಜ್ಞಾನವೇ ಅದಕ್ಕೆ ಕಾರಣ ಎಂದು ನಮ್ಮ ಸುಶಿಕ್ಷಿತ ಮನಸ್ಸು ಲೊಚಗುಟ್ಟುತ್ತದೆ. ಆದರೆ, ಬೆಂಗಳೂರಿನಂಥ ಹೈಟೆಕ್ ಸಿಟಿಯಲ್ಲೂ ಈ ಹಾವಳಿ ಬಿಟ್ಟಿಲ್ಲ. ವಾಸ್ತುಶಾಸ್ತ್ರವಂತೂ ನಗರಗಳ ಸುಶಿಕ್ಷಿತರ ಮನಸ್ಸನ್ನು ವಶೀಕರಿಸಿಕೊಂಡುಬಿಟ್ಟಿದೆ. ವಾಸ್ತುದೋಷಕ್ಕೆ ಪರಿಹಾರ ಹೇಳುವವರು ಕೋಟ್ಯಧೀಶರಾಗಿದ್ದಾರೆ. ಸರಕಾರದ ಉನ್ನತ ಅಧಿಕಾರಿಗಳು ರಾಹುಕಾಲ ನೋಡಿ ಮನೆ ಬಿಡುತ್ತಾರೆ. ಮಂತ್ರಿಮಾನ್ಯರು ಅಧಿಕಾರ ಸ್ವೀಕರಿಸಿದ ಮೇಲೆ ತಮ್ಮ ಅಧಿಕೃತ ನಿವಾಸದ ವಾಸ್ತು ಬದಲಾವಣೆಗಳಿಗೆ ಲಕ್ಷಾಂತರ ರೂಪಾಯಿ ವೆಚ್ಚ ಮಾಡುತ್ತಾರೆ. ಅಧಿಕಾರ ಉಳಿಸಿಕೊಳ್ಳಲು ರಾಜಕಾರಣಿಗಳು ಜ್ಯೋತಿಷಿಗಳ ಮೊರೆಹೋಗುತ್ತಾರೆ. ಸರಕಾರಗಳು ಅಭದ್ರಗೊಂಡ ಸಮಯದಲ್ಲಂತೂ ಜೋತಿಷಿಗಳ ಬೆಲೆ ದಿಢೀರ್ ಏರಿಬಿಡುತ್ತದೆ. ದೆಹಲಿ, ಚೆನ್ನೈ, ಬೆಂಗಳೂರು, ಕೋಲ್ಕತ್ತಾದಂತಹ ನಗರಗಳಲ್ಲಿ ಹೈಟೆಕ್ ಜ್ಯೋತಿಷಿಗಳ ನೆಟ್‌ವರ್ಕ್ ಅತ್ಯಂತ ಪ್ರಬಲವಾಗಿದೆ.

ಕೆಲವು ವ್ಯಕ್ತಿಗಳು ಹತ್ತೂ ಬೆರಳುಗಳಲ್ಲಿ ಹೊಳೆಯುವ ಹರಳುಗಳನ್ನೊಳಗೊಂಡ ಉಂಗುರ ಧರಿಸಿರುತ್ತಾರೆ. ಯಾವ ಹರಳಿನ ಉಂಗುರ ಯಾವ ಹೆಸರಿನವರು ಧರಿಸಬೇಕು ಎನ್ನುವುದನ್ನು ಹೇಳುವುದಕ್ಕೆ ತಜ್ಞರಿದ್ದಾರೆ. ಅವರನ್ನು ಉಂಗುರ ತಜ್ಞರೆಂದು ಕರೆಯುತ್ತಾರೆ. ನಿಮ್ಮ ಮನೆ ಅಥವಾ ನಿಮ್ಮ ಆರೋಗ್ಯದಲ್ಲಿ ಏರುಪೇರಾದರೆ ಇಂಥ ಹರಳಿನ ಉಂಗುರವನ್ನು ಇಂಥ ಬೆರಳಿನಲ್ಲಿ ಧರಿಸಿರೆಂದು ಅವರು ಸಲಹೆ ಕೊಡುತ್ತಾರೆ. ಸರಕಾರಿ ಕಚೇರಿಗೆ ಕೆಲಸ ಮಾಡಿಸಿಕೊಳ್ಳುವುದಕ್ಕೆ ಬರುವ ವ್ಯಕ್ತಿಗಳು ಮಾತನಾಡುತ್ತಾ ಕುಳಿತಾಗ ಆ ಹರಳಿನ ಉಂಗುರವನ್ನು ಪ್ರದರ್ಶಿಸುತ್ತಾರೆ. ತಮ್ಮ ಕೆಲಸ ಈ ಹರಳಿನ ವಶೀಕರಣದಿಂದ ಆಗುತ್ತದೆ ಎಂಬುದು ಅವರ ನಂಬಿಕೆ. ಇನ್ನೂ ಕೆಲವರು ಕೊರಳಲ್ಲಿ ಚಿತ್ರ ವಿಚಿತ್ರವಾದ ಫಲಕಗಳು, ಕವಡೆ ಕಾಯಿಗಳನ್ನು ಕಟ್ಟಿಕೊಂಡು ಬರುತ್ತಾರೆ. ಸರ್ಪದೋಷಕ್ಕೆ ನಮ್ಮ ಕ್ರಿಕೆಟ್‌ರಾಜ ಸಚಿನ್ ತೆಂಡೂಲ್ಕರ್ ಕುಕ್ಕೆ ಸುಬ್ರಹ್ಮಣ್ಯಕ್ಕೆ ಬಂದು ಪೂಜೆ ಸಲ್ಲಿಸಿ ಹೋದ. ಇತ್ತೀಚೆಗಂತೂ ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಬಾಲಿವುಡ್ ತಾರೆಯರು ರಸ್ತೆಗಳೇ ಇಲ್ಲದ ಹಳ್ಳಿಗಳಲ್ಲಿ ಪ್ರತ್ಯಕ್ಷರಾಗುತ್ತಿದ್ದಾರೆ. ವಿಷಯ, ಅವರು ಬಂದು ಹೋದ ಮೇಲೆ ಇಂಥ ನಟಿ ಇಂಥಲ್ಲಿ ಬಂದು ಹೋದರು ಎಂದು ಮರುದಿನ ಪತ್ರಿಕೆಗಳಲ್ಲಿ ಪ್ರಕಟವಾಗುತ್ತದೆ. ಅದು ಖಾಸಗಿ ಕೆಲಸ, ನಿಗೂಢವಾದ ಭೇಟಿ – ಇತ್ಯಾದಿ ವರದಿಗಳಲ್ಲಿರುತ್ತದೆ. ದೂರದ ಮುಂಬೈನಿಂದ ಬಂದ ಆ ನಟಿ ನಿಮಗೆ ಗೊತ್ತಿಲ್ಲದ ಹಾಗೆ ನೀವು ನಿರ್ಲಕ್ಷ್ಯ ಮಾಡಿದ ನಿಮ್ಮ ಊರಿನ ಹನುಮಂತನ ದರ್ಶನ ಮಾಡಿಕೊಂಡು ಹೋಗಿರುತ್ತಾರೆ. ಅವರ ಪಾದಗಳು ಇತ್ತಕಡೆ ಏಕೆ ದಯಪಾಲಿಸಿದವು? ಈ ಕುತೂಹಲದ ಪುಳಕ ನಮ್ಮ ಜನತೆಯಲ್ಲಿ ಮೂಡುತ್ತದೆ. ನಂತರ ಇಂಥ ನಟಿಯರೂ ಇಲ್ಲಿ ಬಂದು ಹೋಗಿದ್ದಾರೆ ಎಂದು ಸ್ಥಳದ ಮಹಿಮೆಯನ್ನು ಬಣ್ಣಿಸುತ್ತಾರೆ. ಮಹಿಮೆ ಬೆಳೆಯೋದು ಅಂದರೆ ಹೀಗೆ!

ಅದೊಂದು ಇಕ್ಕಟ್ಟಾದ ಜಾಗದಲ್ಲಿರುವ ಗೋಡೆ. ಅಲ್ಲಿ ಎರಡು ಅಡಿ ಅಗಲ ನಾಲ್ಕೇ ನಾಲ್ಕು ಅಡಿ ಉದ್ದ ಜಾಗ ಖಾಲಿ ಇದೆ. ಅದಕ್ಕೊಂದು ಫ್ರೇಮ್ ಹಾಕಿ ಅದರೊಳಗೆ ಹೊಂದುವ ಸಾಮಾನುಗಳನ್ನಿಟ್ಟುಕೊಂಡು ಮಾರಾಟ ಮಾಡಿ ಬದುಕುತ್ತಿರುವವರನ್ನು ನಾವು ಬೆಂಗಳೂರಿನ ಕೆಲವು ಜನನಿಬಿಡ ವಾಣಿಜ್ಯ ಮಳಿಗೆಗಳಲ್ಲಿ ಕಾಣುತ್ತೇವೆ. ಅದೇ ತರಹ ರಸ್ತೆ ತಿರುವು ಅಥವಾ ಮನೆಯ ಮೂಲೆಯ ಅತ್ಯಂತ ಚಿಕ್ಕ ಜಾಗದಲ್ಲಿ ನೀಟಾಗಿ ದೇವಸ್ಥಾನ ಕಟ್ಟಿ ಜನರನ್ನು ಆಕರ್ಷಿಸುವ ವ್ಯವಸ್ಥೆ ಬೆಂಗಳೂರಿನಂಥ ಊರಿನಲ್ಲಿ ಇದೆ. ರಸ್ತೆ ಸಂಚಾರಕ್ಕೆ ಅಡ್ಡಿಯಾಗುತ್ತದೆ ಎಂದು ಇತ್ತೀಚೆಗೆ ಮಹಾನಗರ ಪಾಲಿಕೆ ಕೆಲವೊಂದನ್ನು ಕೆಡವಿಹಾಕಿದೆ. ಭಾರತೀಯ ಜನಸಮುದಾಯದಲ್ಲಿ ದೈವಭಕ್ತಿ ಸಾಮಾನ್ಯ. ಅದು ಕೂಡ ನಗರಗಳಲ್ಲಿ ವಾಣಿಜ್ಯೀಕರಣಗೊಂಡಿಲ್ಲ. ಬದುಕಿನ ಆಚರಣೆಗಳ ಜೊತೆಗೆ ಈ ಭಕ್ತಿ ತಳುಕು ಹಾಕಿಕೊಂಡಿರುತ್ತದೆ. ಕಣದ ಪೂಜೆ, ಚರಗ ಚೆಲ್ಲುವುದು, ಕೂರಿಗೆ ಪೂಜೆ, ತೆನೆಕಟ್ಟುವುದು, ಲಕ್ಷ್ಮೀ ಪೂಜೆ, ಬಣವಿ ಪೂಜೆ, ಇಲ್ಲೆಲ್ಲ ನೆಲವ ನಂಬಿದವರ ಅಗಾಧ ಶ್ರದ್ಧೆ - ಈ ಪೂಜೆಯ ಮೂಲಕ ಹೊರಹೊಮ್ಮುತ್ತದೆ. ಕಾರ ಹುಣ್ಣಿಮೆಯ ದಿನ ಎತ್ತುಗಳ ಓಡಿಸುವವರು, ಮೊಹರಂ ಹಬ್ಬದಲ್ಲಿ ಅಲ್ಲಾನ ಭಕ್ತರಾಗಿ ಕುಣಿಯುತ್ತಾರೆ. ಇಲ್ಲಿ ಅವರ ಬದುಕಿನ ಸಂಭ್ರಮಕ್ಕೆ ದೇವರು ನಿಮಿತ್ತವಾಗುತ್ತಾನೆಯೇ ಹೊರತು, ದೇವರ ಮುಖಾಂತರವೇ ಅವರು ಎಲ್ಲ ಸಂಭ್ರಮವನ್ನು ಕಾಣಲಿಕ್ಕೆ ಹೋಗುವುದಿಲ್ಲ. ಬದುಕಿನಲ್ಲಿ ಅವರು ದೇವರನ್ನು ತೊಡಗಿಸಿಕೊಳ್ಳುತ್ತಾರೆ. 'ಎಳ್ಳು ಜೀರಿಗೆ ಬೆಳೆಯೋಳು ಭೂತಾಯಿನ ಎದ್ದೊಂದು ಗಳಿಗೆ ನೆನೆದೇನ' ಎನ್ನುವ ಗ್ರಾಮೀಣ ಹೆಣ್ಣುಮಗಳ ಬೆಳಗಿನ ಒಂದು ಸಾಲು ತುಂಬ ಮಹತ್ವದ್ದು. ಅಲ್ಲಿ ಊದಿನ ಕಡ್ಡಿ, ಕುಂಕುಮ, ವಿಭೂತಿ ಯಾವುದೂ ಇಲ್ಲ. ಅದೊಂದು ಆಕೆ ಸಲ್ಲಿಸುವ ಅಕ್ಷರದ ಪೂಜೆ, ಪ್ರಶ್ನಾತೀತ ಶ್ರದ್ಧೆ!

ಆದರೆ ಬದುಕು ಎಲ್ಲ ಬಗೆಯಲ್ಲೂ ನೆಮ್ಮದಿಯಾಗಿದೆ

ಎಂದೆನಿಸುವ, ಎಲ್ಲ ಬಗೆಯ ಭೌತಿಕ ಸಂಪತ್ತುಗಳನ್ನು ಅನುಭವಿಸುವ ನಗರೀಕೃತ ಮನಸ್ಸುಗಳಿಗೆ ದೇವರು ಯಾಕೆ ಇಷ್ಟೊಂದು ಕಾಡಬೇಕು. ಹೊರಗೆ ಕಾಣುವ ಭೌತಿಕ ಬೆಳವಣಿಗೆಗೂ, ನಗರದ ಒಳಗಿನ ಮನಃಸ್ಥಿತಿಗೂ ತುಂಬಾ ವ್ಯತ್ಯಾಸವಿದೆ. ಭೋಗ ಸಂಸ್ಕೃತಿ ಹುಟ್ಟುಹಾಕಿದ ಪರಿಣಾಮ ನಗರದ ಮನಃಸ್ಥಿತಿಗಳು ಅಲ್ಲೋಲಕಲ್ಲೋಲವಾಗುತ್ತಿವೆ. ಐಷಾರಾಮಿ ಜೀವನ ಮನುಷ್ಯನ ಸಹಜ ಬದುಕನ್ನೇ ನುಂಗಿ ಹಾಕಿಬಿಡುತ್ತದೆ. ಇವತ್ತಿನ ನಗರಗಳೆಂದರೆ ಅವು ಭೋಗ ಸಂಸ್ಕೃತಿಯ ಪ್ರಧಾನ ಕೇಂದ್ರಗಳು. ಅಮೆರಿಕಾದಂತಹ ರಾಷ್ಟ್ರಗಳು ಹುಟ್ಟುಹಾಕಿದ ಪರಿಣಾಮ ಇದು. ಅಭಿವೃದ್ಧಿ ಎಂದರೆ ಅದು ಜಗತ್ತಿನ ಕಣ್ಣಲ್ಲಿ ಇದೇ ಆಗಿದೆ. ದುಡ್ಡಿಗೆ ಇಲ್ಲಿ ಕಿಮ್ಮತ್ತಿಲ್ಲ. ಹಳ್ಳಿಯ ಎಲ್ಲ ಶಕ್ತಿಗಳನ್ನು ಹೀರಿಕೊಂಡು ನಗರಗಳು ಬೆಳೆದುನಿಂತವು. ಜನ ಇರುವೆಗಳಂತೆ ಬೆಂಗಳೂರಿನಂಥ ಊರುಗಳಿಗೆ ಬರುತ್ತಲೇ ಇದ್ದಾರೆ. ಆಕರ್ಷಣೆಯ ಜೊತೆಗೆ ಹೇಗಾದರೂ ಬದುಕುವ ಹಟ! ಈ ಎಲ್ಲ ಕಾರಣಗಳಿಂದ ಮನುಷ್ಯ ಸಹಜ ಬದುಕೇ ಹೊರಟುಹೋಗುವಷ್ಟು ಅದು ಪರಿಣಾಮ ಮಾಡಿದೆ. ನಗರದ ಮನುಷ್ಯ ಹೆಚ್ಚು ವಿಲಾಸಿಯಾದಷ್ಟು ನೆಲದ ಸಂಬಂಧಗಳ ಜೊತೆಗಿನ ತನ್ನ ಬೇರುಗಳನ್ನು ಕಡಿದು ಕೊಂಡ. ವ್ಯಕ್ತಿಗತ ಬದುಕೇ ಅವನಿಗೆ ಮುಖ್ಯವಾಯಿತು. ದಿನಾ ಸಾವಿರಾರು ಜನರ ನಡುವೆ ತಿರುಗುತ್ತಿದ್ದರೂ ಇವನು ಒಬ್ಬಂಟಿಯಾಗುತ್ತ ಹೋದ. ಪಕ್ಕದ ಮನೆಯವರಿಗೆ ಪರಿಚಯವೇ ಇಲ್ಲದ ಹಾಗೆ ಬದುಕಹತ್ತಿದ. ವೃದ್ಧಾಶ್ರಮ, ಅನಾಥಾಶ್ರಮ, ಅಪಾರ್ಟ್‌ಮೆಂಟ್ ಕಲ್ಚರ್, ಶುರುವಾಯಿತು. ಮನುಷ್ಯನಲ್ಲಿ ಒಂಟಿತನ, ಅಭದ್ರತೆ ಕಾಡತೊಡಗಿತು. ಅವರವರ ಬದುಕು ಅವರವರದು ಎನ್ನುವ ಸ್ಥಿತಿ ಬಂದಾಗ ಅವನಿಗೆ ಬದುಕುವ ಭಯ ಶುರುವಾಯಿತು. ಇಂಥ ಘಾಸಿಗೊಂಡ ಮನಃಸ್ಥಿತಿಯಲ್ಲಿ ಹರಳು, ಜೋತಿಷ್ಯ, ಮಾಟ ಮಂತ್ರ, ದೇವರು ದಿಂಡರು ವಾಸ್ತು, ಇಂಥವು ಗಳಿಗೆ ಹೆಚ್ಚು ಬೆಲೆ ಬಂತು. ಈ ಘಾಸಿಗೊಂಡ, ಅಸಮಾಧಾನ ಗೊಂಡ ಮನಃಸ್ಥಿತಿಯನ್ನು ಇವು ಹೆಚ್ಚು ಉಪಯೋಗಿಸಿ ಕೊಂಡವು. ಇಂಥ ಮನಃಸ್ಥಿತಿಯಲ್ಲಿಯೇ ಅಮೆರಿಕಾದಂಥ ರಾಷ್ಟ್ರದಲ್ಲಿ ಬೆನ್‌ಹಿನ್ ಹುಟ್ಟಿಕೊಂಡ. ನಮ್ಮ ನಗರದ ಗಲ್ಲಿ ಗಲ್ಲಿಯಲ್ಲಿ ಹಸ್ತರೇಖೆ, ಹರಳು ಶಾಸ್ತ್ರಜ್ಞರು ಬಾಬಾಗಳು, ಗುರುಗಳು, ಫಕೀರರು ಹುಟ್ಟಿಕೊಂಡರು.

ಆರ್ಥಿಕವಾಗಿ ನಾವು ಸಂತುಷ್ಟರಾದಂತೆ ನೆಮ್ಮದಿ ಯಾಗಿರಬಹುದು ಎನ್ನುವ ಕಲ್ಪನೆಯೊಂದಿದೆ. ಇಂಥ ಕಲ್ಪನೆಯನ್ನು ವ್ಯವಸ್ಥಿತವಾಗಿ ಹರಡಿದ್ದು ಅಮೆರಿಕಾ. ದುಡ್ಡೇ ಮಾನದಂಡವಾದಾಗ ಮನುಷ್ಯನ ಸಹಜ ಬದುಕಿಗೆ ಅಲ್ಲಿ ಬೆಲೆ ಇರುವುದಿಲ್ಲ. ಉಪಭೋಗ ಸಂಸ್ಕೃತಿ ಹಸಿವನ್ನು ಹೆಚ್ಚಿಸುತ್ತದೆ ವಿನಾ ಹಿಂಗಿಸುವದಿಲ್ಲ. ಅಮೆರಿಕಾದಂತಹ ರಾಷ್ಟ್ರದಲ್ಲಿ ಶಾಂತಿ ಸರ್ವನಾಶವಾಗಿ ಹೋದಾಗ ತನ್ನ ಸುಖಕ್ಕಾಗಿ ಅದು ಏನೆಲ್ಲ ಮಾಡಬಹುದು ಎನ್ನುವುದಕ್ಕೆ ಈಗ ಅದು ಹರಡುತ್ತಿರುವ ಯುದ್ಧಗಳೇ ಸಾಕ್ಷಿ. ಅಂಥ ರಾಷ್ಟ್ರದಲ್ಲಿಯೇ ಏಕಕಾಲಕ್ಕೆ ಬುಷ್ ಹಾಗೂ ಬೆನ್‌ಹಿನ್ ಕಾಣಿಸಿಕೊಳ್ಳುವುದಕ್ಕೆ ಸಾಧ್ಯವಿದೆ.

ಈಗ ನಮ್ಮ ಕಣ್ಣೆದುರಿಗಿರುವುದು ನಗರ ಕೇಂದ್ರಿತ ಅಭಿವೃದ್ಧಿ ಕಲ್ಪನೆ. ಇದೊಂದು ರೀತಿಯ ಅಸಹಜ ಕಲ್ಪನೆ. ಕೇವಲ ಹಣದಿಂದಲೇ ನೆಮ್ಮದಿ ಸಾಧ್ಯವಿಲ್ಲ ಎನ್ನುವುದನ್ನು ಅರ್ಥ ಮಾಡಿಕೊಳ್ಳಬೇಕಾದರೆ ನಗರದ ಶ್ರೀಮಂತರ ಮನೆ ಹೊಕ್ಕು ನೋಡಬೇಕು. ಇದು ಯಾಕೆ ಹೀಗಾಯಿತು ಎಂದರೆ ನಾವು ನಮ್ಮ ಚಿಂತನೆಗಳನ್ನು ನಮ್ಮ ವ್ಯವಸ್ಥೆಯನ್ನು ಆರ್ಥಿಕ ಮೂಲದಲ್ಲಿಯೇ ವಿಶ್ಲೇಷಿಸಿದ್ದಕ್ಕೆ. ಇದರಾಚೆ ಒಂದು ಬದುಕಿದೆ ಎನ್ನುವದನ್ನೇ ನಮ್ಮ ವ್ಯವಸ್ಥೆ ನಮಗೆ ಕಲಿಸಿಕೊಡಲಿಲ್ಲ.

ಅಭದ್ರತೆ, ಒಂಟಿತನದಂತಹ ನಗರೀಕೃತ ಮನಃಸ್ಥಿತಿಗಳ ದೌರ್ಬಲ್ಯಗಳ ಬಗ್ಗೆ ಹಳ್ಳಿಗಾಡಿನ ಜನತೆ ಅಷ್ಟಿತಷ್ಟಿಯೂ ತಲೆಕೆಡಿಸಿಕೊಳ್ಳುವುದಿಲ್ಲ. ಅವರನ್ನು ಅದು ಅಷ್ಟಾಗಿ ಕಾಡು ವುದಿಲ್ಲ. ನಗರಗಳ ಕಡೆಗೆ ಅವರಿಗೆ ಒಂದು ರೀತಿಯ ಆಕರ್ಷಣೆ ಇದೆ. ಅದು ಪ್ರೀತಿ ಅಲ್ಲ. ಅವರಲ್ಲಿರುವ ಮಾಟ ಮಂತ್ರ, ತಾಯಿತಗಳು ಅರಿವಿನ ಕೊರತೆಯಿಂದ ಬಂದದ್ದು. ಆರ್ಥಿಕವಾಗಿ ಹಳ್ಳಿಗರು ತುಂಬಾ ಬಡವರಿರುತ್ತಾರೆ. ಆದರೆ ಅವರಿಗೆ ಭಾವನಾತ್ಮಕ ಭದ್ರತೆ ಅತ್ಯಂತ ಪ್ರಬಲವಾಗಿರುತ್ತದೆ. ತನ್ನ ಸಾಮುದಾಯಿಕ ಕಲ್ಪನೆಯಲ್ಲಿ ಹಳ್ಳಿಗಳು ಇವತ್ತಿಗೂ ಭಾವನಾತ್ಮಕ ಭದ್ರತೆಯನ್ನು ಹಿಡಿದಿಟ್ಟುಕೊಂಡಿವೆ. ನಡತೆಯಿಂದ ಚಿಕ್ಕಮ್ಮನಾಗುವ ಹೆಣ್ಣುಮಗಳು ಓಣಿಯಲ್ಲಿ ತೀರಿಕೊಂಡಾಗ, ಪಕ್ಕದಮನೆ ಹುಡುಗಿ ಅಳುವುದು ಎಂಥವರಲ್ಲಿಯೂ ಹೃದಯ ಸಂಬಂಧದ ಪಾವಿತ್ರ್ಯತೆಯನ್ನು ಮನಗಾಣಿಸುತ್ತದೆ.

ಇಲ್ಲಿ ನಗರದಲ್ಲಿ ಹಾಗಿಲ್ಲ. ಸಾಯುವುದು ಸುಡುವುದು ಇಲ್ಲಿ ಕ್ರಿಯೆ ಮಾತ್ರ ಆಗಿ ಉಳಿಯುತ್ತದೆ. ಭಾವನಾತ್ಮಕ ಸ್ಪರ್ಶ ಕಡಿಮೆ (ಇಲ್ಲಿ ಆಚರಣೆ ಕುರಿತು ಚರ್ಚೆ ಬೇಡ). ಒಬ್ಬರಿಗೊಬ್ಬರು ಸಂಬಂಧ ಇಲ್ಲದೆ ಬದುಕುವ ಬದುಕಿದು. ಅಂದಂದಿನ ದಿನ ಮೆಜೆಸ್ಟಿಕ್‌ನಿಂದ ಮನೆ ಮುಟ್ಟುವುದು ಮುಖ್ಯವಾಗುತ್ತದೆ. ತಳಮಳ, ಮಾನಸಿಕ ಒತ್ತಡ, ಏಕಮುಖವಾದ ದುಡಿಮೆ, ವಿಲಾಸಿ ಜೀವನ, ಇವೆಲ್ಲವು ಗಳಿಂದ ಮನಸ್ಸು ಜರ್ಜರಿತಗೊಂಡಿದೆ. ಇಲ್ಲಿ ಬದುಕಿನಿಂದ ಸದಾ ಆತಂಕ, ಅಭದ್ರತೆ ಮನುಷ್ಯನನ್ನು ಕಾಡುತ್ತಿರುತ್ತದೆ. ಆಗವನು, ಮೆಡಿಟೇಷನ್, ಬಾಬಾಗಳು, ಗುರುಗಳು, ಜೋತಿಷ್ಯ, ವಾಸ್ತು, ದಿಕ್ಕು, ದೆಸೆ ಹುಡುಕಿಕೊಂಡು ಹೋಗುತ್ತಾನೆ. ಹಸ್ತರೇಖಾ ಪ್ರವೀಣರು ಇಲ್ಲೊಂದು ಸಂಘ ಕಟ್ಟಿಕೊಳ್ಳುವಷ್ಟು ಪ್ರಬಲರಾಗುತ್ತಾರೆ. ಮನೋದೌರ್ಬಲ್ಯ ಎಂಥವುಗಳನ್ನೂ ನಂಬಿಬಿಡುತ್ತದೆ.

ಮಂಡ್ಯ *ಬಸವರಾಜು ಹೂಗಾರ*

**ಕನ್ನಡ ಬರಹ**

'ಕನ್ನಡ ಬರವಣಿಗೆಯನ್ನು ಬದಲಿಸೋಣ' ಎಂಬ ಕೃತಿ ಕನ್ನಡ ಅಕ್ಷರ ಪ್ರಪಂಚದಲ್ಲೆ ಸಂಚಲನವನ್ನುಂಟು ಮಾಡಬೇಕಿತ್ತು. ಆದರೆ ಹಾಗಾಗಲಿಲ್ಲ ಎನ್ನುವುದು ವಿಪರ್ಯಾಸ. ಇದರ ಕರ್ತೃ ಡಾ॥ ಡಿ. ಎನ್. ಶಂಕರಬಟ್ಟ ಅವರು. ಈ ಹೊತ್ತಿಗೆಯಲ್ಲಿ ಶಂಕರಬಟ್ಟರು ಶ, ಷ ಕಾರಗಳ ಬಳಕೆ, ಅಲ್ಪ ಪ್ರಾಣ ಮಹಾಪ್ರಾಣಗಳು, ಋ ಕಾರ ಇತ್ಯಾದಿ ಗಳನ್ನು ಕುರಿತು ಕನ್ನಡ ಬರವಣಿಗೆ ಈವರೆಗೆ ಒಳಗೊಳ್ಳುತ್ತಾ ಬಂದಿರುವ ಗೊಂದಲವನ್ನು ಮನೋಸಾಮಾಜಿಕ ನೆಲೆಯಲ್ಲಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದ್ದಾರೆ. ಇದರೊಂದಿಗೆ ಗೊಂದಲ ನಿವಾರಣೆಗೆ ಹಿಡಿಯಬೇಕಾದ ಹಾದಿಯ ಸುಳುಹುಗಳನ್ನು ಸ್ಪಷ್ಟವಾಗಿ ತೋರಿದ್ದಾರೆ. ಕನ್ನಡವನ್ನು ಮಾತಾಡುವಂತೆಯೇ ಬರೆಯಬೇಕು, ಬರವಣಿಗೆಯಲ್ಲಿನ ತಪ್ಪುಗಳನ್ನು ಸರಿಪಡಿಸಬೇಕು ಎಂಬುದು ಇಲ್ಲಿನ ಮುಖ್ಯ ಆಶಯ. ಕಂಪ್ಯೂಟರ್ ಬಳಕೆ ಅನಿವಾರ್ಯವಾಗುತ್ತಿರುವ ಇಂದಿನ ದಿನಗಳಲ್ಲಿ ಕನ್ನಡ ಲಿಪಿ ತನ್ನ ಸಾಂಪ್ರದಾಯಿಕ ಚಹರೆಗಳನ್ನು ಬದಲಿಸಿಕೊಳ್ಳಬೇಕಾದದ್ದು ಅನಿವಾರ್ಯ ವಾಗಿದೆ. ಮುಂದೊಮ್ಮೆ ಕನ್ನಡವನ್ನು ಲೇಕನಿ ಬಳಸಿ ಬರೆಯುವ ಹಸ್ತಲಿಪಿಕಾರರೇ ಅಪರೂಪವಾಗಿಬಿಡಬಹುದು. ತಂತ್ರಜ್ಞಾನ ಅಂತಹ ಮಾಂತ್ರಿಕ ಬದಲಾವಣೆ ತಂದುಬಿಡುತ್ತದೆ. ಅಲ್ಲದೆ ಇಂಗ್ಲಿಷನ್ನು ಕಂಪ್ಯೂಟರ್ ಪರದೆಯ ಮೇಲೆ ಟೈಪಿಸುವಾಗ ಅಕ್ಷರ ತಪ್ಪುಗಳನ್ನು ಪರಿಶೀಲಿಸಲು ಸ್ಪೆಲ್‌ಚೆಕ್, ಡಿಕ್ಶನರಿ ತಂತ್ರಾಂಶಗಳಿರುವಂತೆ ಕನ್ನಡಕ್ಕೂ ರೂಪಿಸಬೇಕಿದೆ. ಆಗ ಶ, ಷ ಗಳ ಬಳಕೆ ಅರ್ಕಾವೊತ್ತು ಎಲ್ಲಿ ಬರಬೇಕು ಮುಂತಾದ ಅಂಶಗಳ ಬಗ್ಗೆ ಸ್ಪಷ್ಟತೆಯಿರಬೇಕಾಗುತ್ತದೆ. ಮನೆಯಲ್ಲಿ ಮಾತನಾಡುವ ಕನ್ನಡವೇ ಬೇರೆ ಶಾಲೆಯಲ್ಲಿ ಕಲಿಯುವ ಕನ್ನಡವೇ ಬೇರೆ ಎನ್ನುವಂತೆ ಸ್ಥಿತಿ ಶಿಷ್ಟಕನ್ನಡ ಕಲಿಯುವ ಮಕ್ಕಳಲ್ಲಿ ವ್ಯಾಪಕವಾದ ಸಮಸ್ಯೆ. ಅಲ್ಲದೆ ಶಿಷ್ಟ ಕನ್ನಡವನ್ನು ಮನೆಯಲ್ಲಿ ಬಳಸುವ ಕನ್ನಡದ ಸಮುದಾಯಗಳು ಈಗ ಕನ್ನಡ ಶಾಲೆಗಳಿಗೆ ಸೇರುತ್ತಲಿರುವುದೂ ಅನುಮಾನ. ಹೀಗಾಗಿ ಕನ್ನಡ ಲಿಪಿ ಬದಲಾಗಬೇಕೆಂಬುದು ಕೇವಲ ಅಕಾಡೆಮಿಕ್, ಭಾಷಾಶಾಸ್ತ್ರದ ಪ್ರಶ್ನೆಯಾಗಿ ಉಳಿದಿಲ್ಲ. ಸಾಮಾಜಿಕ ಅಸಮಾನತೆಯನ್ನು ನಿವಾರಿಸುವ ನೈತಿಕ ಜವಾಬ್ದಾರಿಯಾಗಿ ಬದಲಾಗಿಬಿಟ್ಟಿದೆ. ಈ ಎಲ್ಲಾ ದೃಷ್ಟಿಕೋನಗಳಿಂದ ನೋಡಿದಾಗ ಕನ್ನಡ ಬರವಣಿಗೆ ಬದಲಾಗಬೇಕಿದೆ ಎಂಬ ವಾದದಲ್ಲಿ ಕಂಡಿತ ಹುರುಳಿದೆ. ಆದರೆ ಅಲ್ಪ ಪ್ರಾಣ ಮಹಾ ಪ್ರಾಣ ಗಳನ್ನು ಪೂರ್ತಿಯಾಗಿ ಬಿಟ್ಟುಬಿಡಲು ಸಾಧ್ಯವೇ? ದನ-ಧನ, ಬರ-ಭರ ಇಂತಹ ಪದಗಳನ್ನು ಸಂದರ್ಭಕ್ಕೆ ಹೊರತಾಗಿ ಬರೆದಾಗ ಅರ್ಥ ವ್ಯತ್ಯಾಸ ಗುರುತಿಸುವುದು ಹೇಗೆ? ಹೇಗೆ ಬದಲಾಗಬೇಕು ಎನ್ನುವದಕ್ಕೆ ಶಂಕರಬಟ್ಟರ ಪುಸ್ತಕ ಮಾದರಿಯೊಂದನ್ನು ರೂಪಿಸಿಕೊಟ್ಟಿದೆ. ಈ ಮಾದರಿಯನ್ನು ಬಳಸಿ ವಿಮರ್ಶೆಯೊಂದನ್ನು ಬರೆದಿರುವ ರಾಮಲಿಂಗಪ್ಪನವರ ಪ್ರಯತ್ನ ('ಹೊಸತು' ಜನವರಿ ಸಂಚಿಕೆ) ಬಹುಶಃ ಚೊಚ್ಚಲಿನದಾಗಿದೆ.

*ಬೆಂಗಳೂರು-೨೭* ***ಡಾ॥ ಬಿ. ಸಿ. ನಾಗೇಂದ್ರ ಕುಮಾರ್***

**ಮಾರ್ಚ್ ಸಂಚಿಕೆ**

ಕೆ. ಎಸ್. ಪಾರ್ಥಸಾರಥಿಯವರ 'ಬಂಡವಾಳದ ಕಬಂಧ ಬಾಹುವಿನಲ್ಲಿ ಕನ್ನಡ' – ಕನ್ನಡಿಗರ ಇಂದಿನ ವಾಸ್ತವ ಸ್ಥಿತಿಯ ದ್ಯೋತಕವಾಗಿ ಹೊರಹೊಮ್ಮಿದೆ. ''ನಾನು ನನ್ನ ಮನೆಯಲ್ಲಿಯೇ ಪರಕೀಯ'' ಎನ್ನುವ ಕಟು ಸತ್ಯದ ಪ್ರತೀಕವಾಗಿದೆ. ನಿಜಕ್ಕೂ ಜಾಗತೀಕರಣ ಎನ್ನುವ ಹೆಸರಿನಲ್ಲಿ ಮಾರಾಟಕ್ಕಿಟ್ಟಂತಿದೆ. ನಮ್ಮ ರಾಜ್ಯದ ರಾಜಧಾನಿಯ ಜೊತೆಗೆ ನಮ್ಮತನವನ್ನು ನಮ್ಮ ರಾಜಕೀಯ ನಾಯಕರು ಈ ವಿಷಯದಲ್ಲಿ ತೋರಿರುವ ದಿವ್ಯ ನಿರ್ಲಕ್ಷ್ಯದಿಂದ ಈ ಸ್ಥಿತಿ ಒದಗಿಬಂದಿದೆ ಎನ್ನುವ ಮಾತನ್ನು ಕನ್ನಡಿಗರು ಒಪ್ಪಲೇಬೇಕು.

ಚಲನಚಿತ್ರ ಅತ್ಯಂತ ಪ್ರಬಲ ಮಾಧ್ಯಮ ಎನ್ನುವ ಅಂಶ ನಿರ್ವಿವಾದ. ಇದಕ್ಕೆ ಪೂರಕವಾಗಿ ಇಂದಿನ ಸಣ್ಣ ಪರದೆ ಕೆಲಸ ಮಾಡುತ್ತಿರುವ ಅಂಶವೂ ಗಣನೀಯ. ಈ ನಿಟ್ಟಿನಲ್ಲಿ ಬರಗೂರು ರಾಮಚಂದ್ರಪ್ಪನವರ 'ಜಾಗತೀ ಕರಣ ಮತ್ತು ಸಿನಿಮಾ' ಪ್ರಸ್ತುತತೆಯ ಚಿತ್ರಣವನ್ನು ನೀಡಿದೆ. ನಮ್ಮ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸ್ಥಿತಿಗತಿಗಳ ನಡೆಗೆ ಅನುಗುಣವಾಗಿ ನಾವು ನಮ್ಮ ಈ ಮಾಧ್ಯಮವನ್ನು ಕೊಂಡೊಯ್ಯುವ ಅವಶ್ಯಕತೆ ಶ್ರೀಯುತರ ಲೇಖನದಲ್ಲಿ ಮೂಡಿದೆ. ನಮ್ಮ ನಿರ್ಮಾಪಕರು ಮಂಥನಗೈಯಲಿ ಎನ್ನುವ ಮಾತು ಈ ಓದುಗನದ್ದು.

ಅಗಲಿದ ಚೇತನ ವ್ಯಾಸರಾಯ ಬಲ್ಲಾಳರಿಗೆ ಆತ್ಮೀಯ ನಮನ ಮತ್ತು ಪರಿಪೂರ್ಣ ಶ್ರದ್ಧಾಂಜಲಿಯಾಗಿವೆ. ಆಕರ್ಷಕ ವರ್ಣಪಾರದರ್ಶಿಕೆಯ ಮುಖಪುಟದೊಂದಿಗೆ ಡಾ॥ ವಿಜಯರವರ ಲೇಖನ. ಬಲ್ಲಾಳರ ಮಗುವಿನ ಮನಸ್ಸಿನ ಪೂರ್ಣ ಅಭಿವ್ಯಕ್ತಿ ಚಿತ್ರಣ, ಅವರೊಂದಿಗಿನ

ಮರೆಯಲಾಗದ ಕ್ಷಣಗಳು, ವಾಣಿಜ್ಯ ರಾಜಧಾನಿಯಲ್ಲಿದ್ದರೂ ಕನ್ನಡದ ಬಗ್ಗೆ ಅವರ ಅಪಾರ ಕಳಕಳಿ ಮೊದಲಾದ ವಿಷಯಗಳ ಬಗ್ಗೆ ವಿಸ್ತೃತವಾಗಿಯಲ್ಲದಿದ್ದರೂ ಸೂಕ್ಷ್ಮವಾಗಿ ಪರಿಚಯಿಸಿರುವ ಪರಿ ಈ ಬಾರಿಯ ಸಂಚಿಕೆಯನ್ನು ಸಾರ್ಥಕಗೊಳಿಸಿದೆ.

ಬೆಂಗಳೂರು — *ನೆ. ಲ. ರಾಮಮೂರ್ತಿ*

ಡಾ॥ ಶಿವಗಂಗಾ ರುಮ್ಮರವರ 'ಧರ್ಮ' ಬರಹವು ಎಡಪಂಥೀಯರ ದೃಷ್ಟಿಯ ಸ್ಪಷ್ಟ ಉದಾಹರಣೆಯಾಗಿದೆ. ಕಾರ್ಲ್ ಮಾರ್ಕ್ಸ್‌ನು ಬಸವೇಶ್ವರರಿಗಿಂತ ೬-೭ ಶತಕ ನಂತರ ಹುಟ್ಟಿದವ. ಅಂದ ಬಳಿಕ ಲೇಖಕರು ಪ್ರತಿ ವಾಕ್ಯದಲ್ಲೂ ಬಸವಣ್ಣನು ಕಾರ್ಲ್ ಮಾರ್ಕ್ಸ್ ಹೇಳಿದ್ದನ್ನೇ ಹೇಳಿದ್ದಾನೆ ಎಂದು ಅವಗಣಿಸಿ ಬರೆದ ಕಾಣರವೇನು ? ಈ ಕುರಿತು ಹೇಳಬೇಕೆಂದೇ ಇದ್ದಲ್ಲಿ ಕಾರ್ಲ್ ಮಾರ್ಕ್ಸ್‌ನು ಬಸವೇಶ್ವರರು ಹೇಳಿದ್ದನ್ನೇ ಹೇಳಿದ್ದಾನೆ ಎಂದು ಅನ್ನುವುದು ಸೂಕ್ತವಾದೀತು. ಎಡಪಂಥೀಯರಿಗೆ ಕಾರ್ಲ್ ಮಾರ್ಕ್ಸ್‌ನಿಗೆ ಮಹತ್ವ ಕೊಡುವ ಛಲವೇಕೆ ? ಬಸವೇಶ್ವರರು ಜನಿಸಿದ್ದು ಮೊದಲೋ ಕಾರ್ಲ್ ಮಾರ್ಕ್ಸ್‌ನೋ ?

ಧಾರವಾಡ — *ಶೇಖರಯ್ಯ ಸ್ವಾಮಿ ಹಿರೇಮಠ*

ಸಂಪಾದಕೀಯ ಲೇಖನವು ಪ್ರಸ್ತುತ ವಿದ್ಯಮಾನವನ್ನು ವಿವರಿಸಿದೆ. ಬಾಲಕಾರ್ಮಿಕರ ಸಮಸ್ಯೆ, ಅವರಿಗೆ ಶಿಕ್ಷಣದ ಅವಶ್ಯಕತೆ, ಅಮೆರಿಕಾದ ಎಡಿಸನ್ ಶಾಲೆಗಳ ಸೌಕರ್ಯ, ಎಲ್ಲವನ್ನೂ ಪ್ರಸ್ತಾಪಿಸಿರುವುದು ಮೆಚ್ಚುವಂತಹುದು. ನಮ್ಮ ದೇಶದ ಶಿಕ್ಷಣದ ದುರವಸ್ಥೆಯನ್ನು ಮಾರ್ಮಿಕವಾಗಿ ಚಿತ್ರಿಸಲಾಗಿದೆ. ಅಸಂಘಟಿತ ದುಡಿಯುವ ಮಕ್ಕಳನ್ನು ಕರೆತಂದು ಶಿಕ್ಷಣ ಕೊಡಬೇಕಾದದ್ದು ಸರಕಾರದ ಕೆಲಸ. ರಾಷ್ಟ್ರೀಯ ಶಿಕ್ಷಣ ನೀತಿ ಸುಧಾರಣೆಗೊಳ್ಳಬೇಕು.

ಹುನ್ನೂರು — *ಕೇಶವ ಉಮರ್ಜಿ*

ಇಂದಿನ ಸುದ್ದಿ ಮಾಧ್ಯಮಗಳಲ್ಲಿ ಶ್ರೇಷ್ಠ ಎಂದೆನಿಸಿರುವ ಪತ್ರಿಕೆಗಳು ಷೇರುಪೇಟೆಯ ವಿಚಾರಗಳನ್ನು, ಕ್ರಿಕೆಟ್ ಎಂಬ ವ್ಯಾಪಾರಿ ಆಟದಲ್ಲಿ ನಿಂದನೆಗಳ ಬಗ್ಗೆ, ಸಿನಿಮಾ ಜನರ ಮದುವೆಗಳ ಬಗ್ಗೆ, ಅಣುಬಾಂಬು ತಯಾರಿಕೆಯ ವಿವರಗಳನ್ನು ಪ್ರಕಟಿಸಿ ಜನಮನಗಳಲ್ಲಿ ನೆಲೆ ನಿಲ್ಲುತ್ತಿರುವಾಗ, ಮುಂದೆ ಭಾರತ ಅತ್ಯಂತ ಪ್ರಬಲ ಆರ್ಥಿಕವಲಯ ಎಂದು ಕರೆದುಕೊಳ್ಳುತ್ತಿರುವಾಗ ಇಲ್ಲಿನ ಶಿಕ್ಷಣದ ಬಗ್ಗೆ ಮೂಡಿಬಂದಿರುವ ಸಂಪಾದಕೀಯ ಪ್ರತಿಯೊಬ್ಬ ನಾಗರಿಕನು ಅತ್ಯಂತ ಗಂಭೀರವಾಗಿ ಪರಿಗಣಿಸಬೇಕಾದ ಸಂಗತಿಯಾಗಿದೆ. ಮಾನವೀಯ ಅಭಿವೃದ್ಧಿ ಸೂಚ್ಯಂಕಕ್ಕಿಂತ ಹೆಚ್ಚಾಗಿ, ಷೇರು ಸೂಚ್ಯಂಕ ಮತ್ತು ಚಿನ್ನದ ಬೆಲೆಗಳಿಗೆ ಹೆಚ್ಚಿನ ಮಹತ್ವ ನೀಡುವ ಭಾರತೀಯ ಸಮಾಜದಲ್ಲಿ ಶಿಕ್ಷಣವೆಂದರೆ ವ್ಯಾಪಾರದ ಒಂದು ಸರಕು ಎಂದು ಪರಿಗಣಿತವಾಗಿದೆಯೇ ಹೊರತು ಅದು ಜ್ಞಾನದ ಹಾದಿ ಎಂಬುದನ್ನು ನಾವು ಮರೆತ್ತಿದ್ದೇವೆ. ಹಸಿದು ಕಂಗಾಲಾಗಿರುವ ಸಂಸಾರ ಚಿಕ್ಕಮಕ್ಕಳನ್ನು ಕೆಲಸಗಳಲ್ಲಿ ತೊಡಗಿಸಿ ಜೀವನ ಕಳೆಯಬೇಕಾದ ಪರಿಸ್ಥಿತಿ, ಅನಕ್ಷರತೆ ಹೆಚ್ಚುವ ರೀತಿಗಳನ್ನು ವಾಸ್ತವಿಕ ವ್ಯವಸ್ಥೆಗಳನ್ನು ಗ್ರಾಮೀಣ ಮಟ್ಟದಲ್ಲಿ ಅರಿಯುವ ಪ್ರಯತ್ನಗಳನ್ನು ಮಾಡದ ನಮ್ಮ ತಜ್ಞರು ನಿರೂಪಿಸುವ ವಿಧಾನಗಳು ಹಾಗೂ ಧೋರಣೆಗಳು ಸಮಾನತೆಯ ಸೌಜನ್ಯದಿಂದ ದೂರವಿರುವುದರಿಂದಾಗಿ ಜ್ಞಾನಾಧಾರಿತ ಸಮಾಜವೆಂದರೆ ಏನು ಎಂಬುದರ ಅರಿವು ನಮಗಿಲ್ಲದಾಗಿದೆ.

ಉಡುಪಿ — *ನರೇಂದ್ರ ಸಿರಕಜೆ*

'ಭಾರತೀಯರಿಗೆ ದ್ವಿಪೌರತ್ವ'ದ (ಫೆಬ್ರವರಿ ಸಂಚಿಕೆ) ಬಗ್ಗೆ : ಯಾವುದೇ ಅನಿವಾಸಿ ಭಾರತೀಯ ತಾನು ಸದ್ಯದಲ್ಲಿ ವಾಸಿಸುತ್ತಿರುವ ದೇಶಕ್ಕೆ ಸಂಪೂರ್ಣವಾಗಿ ಬದ್ಧನಾಗಿರಬೇಕೆಂಬುದು ಸಣ್ಣ ಮಕ್ಕಳಿಗೂ ಗೊತ್ತಿರುವ ನೀತಿ, ಸತ್ಯ. ಅನಿವಾಸಿ ಭಾರತೀಯರಿಗೆ ಭಾರತದಲ್ಲಿ ಮತದಾನದ ಹಕ್ಕು ನೀಡಲು ಸರಕಾರ ನಿರ್ಧರಿಸಿರುವ ಹಿಂದೆ ಯಾವ ವೈಜ್ಞಾನಿಕ ಕಾರಣಗಳೂ ಕಂಡುಬರುತ್ತಿಲ್ಲ. ಅದೇ ರೀತಿ ಯಾವುದೇ ಸಾಮಾಜಿಕ ನ್ಯಾಯವೂ ಗೋಚರಿಸುತ್ತಿಲ್ಲ. ನಮ್ಮ ರಾಜಕೀಯ ಪಕ್ಷಗಳ ಕಣ್ಣಿರುವುದು ಅನಿವಾಸಿಗಳು ತಮ್ಮ ಪಕ್ಷಗಳಿಗೆ ನೀಡಲಿರುವ ಡಾಲರುಗಳ ರೂಪದ ಪಾರ್ಟಿ ಫಂಡಿನ ಮೇಲೆ ಹಣಕ್ಕಾಗಿ ಪವಿತ್ರವಾದ 'ಮತ'ವನ್ನು ಅನಿವಾಸಿಗಳಿಗೆ ಮಾರಲು ಸಿದ್ಧವಿರುವ ಸರಕಾರಗಳಿಂದ (ರಾಜಕಾರಣಿಗಳಿಂದ) ನಾವು ಒಳ್ಳೆಯದನ್ನು ನಿರೀಕ್ಷಿಸುವುದು ಸಾಧ್ಯವೇ ಇಲ್ಲವೆಂಬ ಹತಾಶ ನಮ್ಮನ್ನು ಆವರಿಸಿದರೆ ಆಶ್ಚರ್ಯವಿಲ್ಲ.

ರಂಗೇನಹಳ್ಳಿ — *ಕು. ಸ. ಮಧುಸೂದನ*

## ಗಣ್ಯರ ದೃಷ್ಟಿಯಲ್ಲಿ ಸ್ತ್ರೀ ನಗಣ್ಯಳಾದಳೆ ?

ಫೆಬ್ರವರಿ ೯, ೨೦೦೮ ಕರ್ನಾಟಕದ ಮಹಿಳೆಯರಿಗೆ ಒಂದು ಕರಾಳ ದಿನ. ಮಹಿಳೆಯರ ಹಕ್ಕುಗಳನ್ನು ರಕ್ಷಿಸಿ ಸಾಮಾಜಿಕ ನ್ಯಾಯವನ್ನು ಎತ್ತಿಹಿಡಿಯಬೇಕಾದ, ಉನ್ನತ ಸ್ಥಾನವನ್ನು ಅಲಂಕರಿಸಿರುವ ಇಬ್ಬರು ಸಮಾಜದ 'ಗಣ್ಯ' ವ್ಯಕ್ತಿಗಳು ದೌರ್ಜನ್ಯಕ್ಕೊಳಗಾಗುತ್ತಿರುವ ಪಟ್ಟಣದ ಹೆಣ್ಣುಮಕ್ಕಳನ್ನು ಕುರಿತಂತೆ ಸಾರ್ವಜನಿಕ ವೇದಿಕೆಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ.

* ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾದ ಸಿರಿಯಾಕ್ ಜೋಸೆಫ್‌ರವರು 'ಹಿಂದೂ ವಿವಾಹ ಕಾಯಿದೆ ೧೯೫೫ರ ಸೆಕ್ಷನ್ ೧೩.ರನ್ನು ಕುರಿತಂತೆ ಸುಪ್ರೀಂ ಕೋರ್ಟು' ಎಂಬ ವಿಷಯವನ್ನು ಕುರಿತಂತೆ ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತಿರುವಾಗ (೯-೨-೨೦೦೮ರ 'ದಿ ಹಿಂದೂ' ಪತ್ರಿಕೆಯಲ್ಲಿ ಪ್ರಕಟವಾಗಿರುವಂತೆ) ಮಹಿಳೆಯರು 'ಸಭ್ಯ' ರೀತಿಯಲ್ಲಿ ಉಡುಪು ಧರಿಸುವುದು ಜನಸಾಮಾನ್ಯರ ಕ್ಷೇಮ ಮತ್ತು ಸುರಕ್ಷತೆಯ ದೃಷ್ಟಿಯಿಂದ ಅಗತ್ಯವಾದುದು ಎಂದು ಒತ್ತಿಹೇಳಿದರು. ತಮ್ಮ ವಾದವನ್ನು ವಿಸ್ತರಿಸುತ್ತಾ, "ಇತ್ತೀಚಿನ ದಿನಗಳಲ್ಲಿ ಮಹಿಳೆಯರು ಎಂತಹ ಉಡುಪುಗಳನ್ನು ಧರಿಸುತ್ತಾರೆಂದರೆ, ಚರ್ಚು, ದೇವಾಲಯಗಳಂತಹ ಪೂಜಾಸ್ಥಳಗಳಿಗೆ ಭೇಟಿ ಕೊಟ್ಟಾಗಲೂ ದೇವರನ್ನು ಧ್ಯಾನಿಸುವುದಕ್ಕಿಂತ ಹೆಚ್ಚಾಗಿ ನಮ್ಮ ಮುಂದಿರುವ ಈ ಮಂದಿಯತ್ತಲೇ ಮನಸ್ಸು ಹರಿಸುವಂತಾಗುತ್ತದೆ."

* ಕರ್ನಾಟಕ ಮಾನವ ಹಕ್ಕುಗಳ ಆಯೋಗದ ಮುಖ್ಯಸ್ಥರಾಗಿರುವ ಶ್ರೀ ಎಸ್.ಆರ್. ನಾಯಕ್‌ರವರು 'ಮಾನವ ಹಕ್ಕುಗಳು ಮತ್ತು ವಕೀಲರ ಪಾತ್ರ' ಎಂಬ ವಿಷಯವನ್ನು ಕುರಿತಂತೆ ವಕೀಲರ ಸಂಘದಲ್ಲಿ ಮಾತನಾಡುತ್ತಿರುವಾಗ, ಹೊಸ ವರ್ಷದ ಸಂಭ್ರಮಾಚರಣೆಯ ಸಂದರ್ಭದಲ್ಲಿ ಇಬ್ಬರು ಮಹಿಳೆಯರ ಮೇಲೆ ನಡೆದ ಹಲ್ಲೆಯ ಪ್ರಕರಣವನ್ನು ಉಲ್ಲೇಖಿಸುತ್ತಾ (೯-೨-೨೦೦೮ರ 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಯಲ್ಲಿ ವರದಿಯಾಗಿರುವಂತೆ), "ಹೌದು, ಗಂಡಸರು ಕೆಟ್ಟವರಿರಬಹುದು, ಆದರೆ ಹೆಂಗಸರಿಗೆ ರಾತ್ರಿಯ ವೇಳೆಯಲ್ಲಿ ಹೊರಗೆ ಹೋಗುವ ಸಾಹಸ ಮಾಡಲು ಯಾರು ಹೇಳಿದರು ? ಅವರು ಹಾಗೆ ರಾತ್ರಿ ವೇಳೆ ಹೋಗುವುದೇ ಆದಲ್ಲಿ ಗಂಡಸರು ಅಲ್ಲಿ ಮುಟ್ಟಿದರು, ಇಲ್ಲಿ ತಳ್ಳಿದರು ಅಂತ ದೂಷಿಸುವಂತಿಲ್ಲ. ಕ್ಷಣಿಕ ತೃಪ್ತಿಗಾಗಿ ಯುವಕರು ಸಂಸ್ಕೃತಿಯನ್ನು ಹಾಳುಮಾಡುತ್ತಿದ್ದಾರೆ..."

ಮಹಿಳೆಯರಿಗೆ ಅತ್ಯಂತ ಹೆಚ್ಚಿನ ಗೌರವ ಕೊಡುತ್ತೇವೆಂದು ಕೊಚ್ಚಿಕೊಳ್ಳುವ ಸಮಾಜದ ಮುಖಕ್ಕೆ ಹೊಡೆದಂತಿವೆ ಈ ಎರಡು ಘಟನೆಗಳು. ಮಹಿಳೆಯರ ಹಿತಾಸಕ್ತಿಯನ್ನು ಸಂಪೂರ್ಣವಾಗಿ ಧಿಕ್ಕರಿಸುವಂತಹವು ಇವು. ಉನ್ನತ ಸ್ಥಾನದಲ್ಲಿದ್ದು ಜವಾಬ್ದಾರಿಯುತರಾಗಿರಬೇಕಾದ ಗಣ್ಯರೇ ದೇಶದಲ್ಲಿ ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯದ ಬಗ್ಗೆ ಕೀಳಾದ ಅಭಿಪ್ರಾಯಗಳನ್ನು ಹೊಂದಿದ್ದು ಸಾರ್ವಜನಿಕ ವೇದಿಕೆಗಳನ್ನು ತಮ್ಮ ಹಗುರವಾದ ಚಿಂತನೆಯನ್ನು ಪ್ರಕಟಿಸಲು ಬಳಸುತ್ತಿರುವುದು ಶೋಚನೀಯ.

ಈ ಸಂದರ್ಭದಲ್ಲಿ ಒಂದಂಶವನ್ನು ಮುಖ್ಯ ನ್ಯಾಯಾಧೀಶರ ಗಮನಕ್ಕೆ ತರಲು ಇಚ್ಛಿಸುತ್ತೇನೆ. ಆ್ಯಸಿಡ್ ಸಿಡಿತದ ದೌರ್ಜನ್ಯಕ್ಕೆ ಒಳಗಾದ ಎಲ್ಲಾ ದುರ್ದೈವಿಗಳೂ ಬಡ ಹಾಗೂ ಮಧ್ಯಮ ವರ್ಗದವರಿಂದ ಬಂದವರಾಗಿದ್ದು ಸಭ್ಯರೀತಿಯಲ್ಲಿಯೇ ಉಡುಪು ಧರಿಸಿದ್ದವರು. ಡಕಾಯಿತರು ಬಂದು ಮನೆಯನ್ನು ಲೂಟಿಮಾಡಿ ಹೆಂಗಸರ ಮೇಲೆ ಹಲ್ಲೆ ನಡೆಸಿದಾಗಲೂ ಆ ಹೆಣ್ಣುಗಳು ಮನೆಯಲ್ಲೇ ಇದ್ದರು. ಈ ಮುಗ್ಧ ಹೆಣ್ಣುಮಕ್ಕಳಿಗೆ ಅಸಭ್ಯ ಉಡುಪಿನ ಕಲ್ಪನೆಯಾಗಲಿ, ತಾವು ಅತ್ಯಾಚಾರಕ್ಕೆ ಒಳಗಾಗಬಹುದೆಂಬ ಪೂರ್ವ ಕಲ್ಪನೆಯಾಗಲಿ ಇರಲಿಲ್ಲ. ಹೀಗೂ ದೇವಾಲಯಗಳಲ್ಲಿ ಅರೆನಗ್ನ ಉಡುಪಿನಲ್ಲಿರುವ ಗಂಡಸರೂ ಹೆಂಗಸರ ಆಕರ್ಷಣೆಗೆ ಒಳಗಾಗಬಹುದಲ್ಲವೆ ? ಹೀಗಿರುವಾಗ ಸಮಾಜದ ಉನ್ನತ ಅಧಿಕಾರದ ಸ್ಥಾನದಲ್ಲಿರುವವರು, ಅದರಲ್ಲೂ ಸಾಮಾಜಿಕ ನ್ಯಾಯ ದೊರಕಿಸಲೆಂದೇ ಆ ಸ್ಥಾನಗಳನ್ನು ಅಲಂಕರಿಸಿರುವವರು, ಹೆಣ್ಣನ್ನು ಕುರಿತು ಅಪಮಾನಕಾರಿಯಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದು ನಿಜಕ್ಕೂ ಖಂಡನೀಯ. ಇನ್ನಾದರೂ ಇವರು ತಮ್ಮ ಅಭಿಪ್ರಾಯಗಳನ್ನು ಬದಲಿಸಿಕೊಳ್ಳುವರೆ ?

ಡಾ॥ ಇ. ರತಿ ರಾವ್

ನಂ.೫೫೯ಎ, ೫ನೇ ಕ್ರಾಸ್, ವಿಜಯನಗರ, ೨ನೇ ಹಂತ, ಮೈಸೂರು-[illegible]

ಇದೇ ಮಾರ್ಚ್ ೨ರಂದು 'ಹೊಸತು' ಪತ್ರಿಕೆಗಾಗಿ ಪ್ರೊ॥ ಜೆ. ಆರ್. ಲಕ್ಷ್ಮಣರಾವ್ ಅವರ ಸಂದರ್ಶನ ನಡೆಸಲು ಡಾ॥ ಜಿ.ರಾಮಕೃಷ್ಣ ಮತ್ತು ಡಾ॥ ಎನ್. ಗಾಯತ್ರಿ ಮೈಸೂರಿನಲ್ಲಿ ಅವರ ಮನೆಗೆ ತೆರಳಿದ್ದರು. ಸಂದರ್ಶನದ ಕೊನೆಯ ವೇಳೆಗೆ ಡಾ॥ ಪ್ರಭುಶಂಕರ ಅವರು ಸಹ ಸೇರಿಕೊಂಡರು. ಸಂದರ್ಶನದ ನಂತರದ ವಿಶೇಷವೆಂದರೆ ಸಂದರ್ಶಿತರ ಮನೆಯಲ್ಲಿ ಭೋಜನ. ಶ್ರೀಮತಿ ಜೀವೂಬಾಯಿ ಲಕ್ಷ್ಮಣರಾವ್ ಹಾಗೂ ಅವರ ಮಗಳು ಶ್ರೀಮತಿ ವಿದ್ಯಾ ಅವರು ಆತಿಥ್ಯಕ್ಕೆ ಅಣಿಗೊಳಿಸಿ ಸಹಭೋಜನದಲ್ಲಿ ಪಾಲ್ಗೊಂಡದ್ದಕ್ಕೆ ಸಂದರ್ಶಕರು ಕೃತಜ್ಞರಾಗಿದ್ದಾರೆ.

ಸಂದರ್ಶನ ಲೇಖನವನ್ನು ಸಿದ್ಧಗೊಳಿಸಿದವರು ಡಾ॥ ಎನ್. ಗಾಯತ್ರಿ.

**ಹೊಸತು** : ನಮಸ್ಕಾರ. ನಮ್ಮ ಪತ್ರಿಕೆಯ ಓದುಗರಾಗಿ, ಲೇಖಕರಾಗಿ, ಅದರ ಆರಂಭದಿಂದ ನೀವು ಅದನ್ನು ಗಮನಿಸುತ್ತಾ ಬಂದಿದ್ದೀರಿ. ನಿಮ್ಮ ಚಿಂತನೆ, ವಿಚಾರಗಳನ್ನು ಪರಿಚಯಿಸಲು ಪತ್ರಿಕೆಗಾಗಿ ಸಂದರ್ಶಿಸಲು ಬಂದಿದ್ದೇವೆ. ಮೊದಲಿಗೆ ನೀವು ವಿಜ್ಞಾನಿಯಾಗಿ...

**ಲಕ್ಷ್ಮಣರಾವ್** : (ಮಾತನ್ನು ತಡೆದು ನಗುತ್ತಾ) ನಾನು ವಿಜ್ಞಾನಿಯಲ್ಲ; ವಿಜ್ಞಾನದ ವಿದ್ಯಾರ್ಥಿ ಮಾತ್ರ. 'ವಿಜ್ಞಾನಿ' ಎಂದರೆ ಯಾವುದಾದರೂ ಸಂಶೋಧನೆ ಮಾಡಿ, ಹೊಸ ಜ್ಞಾನವನ್ನು ಕೊಡುಗೆಯಾಗಿ ನೀಡಬೇಕಾಗುತ್ತದೆ. ನಾನು ಅಂತಹದನ್ನೇನೂ ಮಾಡಿಲ್ಲ. ಆರಂಭದಲ್ಲಿ ಸಂಶೋಧನೆ ಮಾಡಬೇಕೆಂದು ಅನ್ನಿಸಿ ಶುರು ಮಾಡಿದರೂ ತಕ್ಷಣ ಅಧ್ಯಾಪಕ ವೃತ್ತಿಗೆ ಬಂದುಬಿಟ್ಟೆ. ನನ್ನ ಮನೆಯ ಅಗತ್ಯಗಳಿಂದಾಗಿ ನಾನು ಕೆಲಸ ಮಾಡುವುದು ಅನಿವಾರ್ಯವಾಗಿತ್ತು.

**ಹೊ** : ಮೊದಲು ಎಲ್ಲಿ ಸಂಶೋಧನೆ ಮಾಡಲು ಆರಂಭಿಸಿದಿರಿ ?

**ಲ** : ಸೆಂಟ್ರಲ್ ಕಾಲೇಜಿನಲ್ಲೇ. ಆಗ ಸಂಶೋಧನೆಗೆ ಸಾಕಷ್ಟು ಅವಕಾಶಗಳು ಇದ್ದವು. ಕಲ್ಕತ್ತ, ಮದ್ರಾಸಿನಲ್ಲಿ ಡಿ. ಎಸ್ಸಿ. ಅಂತ ಡಿಗ್ರಿಗಳು ಇದ್ದವು. ಅಧ್ಯಾಪನದ ಜೊತೆಗೆ ಸಂಶೋಧನೆಯನ್ನು ನಡೆಸಿ ಡಿ. ಎಸ್ಸಿ. ಡಿಗ್ರಿಗಳನ್ನು ನಮ್ಮ ಅನೇಕ ಅಧ್ಯಾಪಕರುಗಳು, ಸೀಬಯ್ಯ, ಅಶ್ವತ್ಥನಾರಾಯಣರಾವ್, ರಾಮಸ್ವಾಮಿ – ಪಡೆದುಕೊಂಡರು.

**ಹೊ** : ಹಾಗಾದರೆ ನಿಮಗೂ ಏಕೆ ಅಧ್ಯಾಪನದ ಜೊತೆಗೆ ಸಂಶೋಧನೆ ಮಾಡಲು ಆಗಲಿಲ್ಲ ?

**ಲ** : ಆಗಲಿಲ್ಲ, ಏಕೆಂದರೆ, ಕಾಲೇಜಿನ ಅಧ್ಯಾಪನದ ಜೊತೆಗೆ ನಾನು ಮನೆಪಾಠ ಹೇಳಿ ದುಡಿಯಬೇಕಿತ್ತು. ವಿಧವೆ ತಾಯಿ, ಇಂಜಿನಿಯರಿಂಗ್ ಓದುತ್ತಿದ್ದ ತಮ್ಮ, ಮದುವೆಯಾಗಬೇಕಿದ್ದ ತಂಗಿ ಇದ್ದದ್ದರಿಂದ ನನಗೆ ಕಾಲೇಜು ಪಾಠದಿಂದ ಬರುತ್ತಿದ್ದ ಸಂಬಳದ ಜೊತೆಗೆ ಇನ್ನೂ ಹೆಚ್ಚಿನ ಹಣ ಬೇಕಿತ್ತು.

**ಹೊ** : ನೀವು 'ಮನೆಪಾಠ' ಅಂತ ಹೇಳಿದ್ದಕ್ಕೆ ನೆನಪಾಯ್ತು. ಆಗಿನ ಕಾಲದ ಮನೆಪಾಠಕ್ಕೂ ಈಗ್ಗೂ ಏನಾದರೂ ವ್ಯತ್ಯಾಸವಿದೆ ಅಂತ ಅನ್ನಿಸುತ್ತಾ ?

**ಲ** : ಹಿಂದೆ ಅವಶ್ಯಕತೆಯಿದ್ದವರು, ಅಂದರೆ ಯಾವುದಾದರೂ ವಿಷಯದಲ್ಲಿ

# 'ಶಾಂತಿಗಾಗಿ ಪರಮಾಣು ಶಕ್ತಿ – ಹುರುಳಿಲ್ಲದ ಮಾತು'

– ಪ್ರೊ॥ ಜೆ. ಆರ್. ಲಕ್ಷ್ಮಣರಾವ್





### ಜಗಳೂರು ರಾಘವೇಂದ್ರರಾವ್ ಲಕ್ಷ್ಮಣರಾವ್

ಜನನ - ೧೯೨೧, ಎಂ.ಎಸ್ಸಿ. ಪದವೀಧರ. ೧೯೪೩ರಿಂದ ೩೮ ವರ್ಷ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸೇವೆ ಸಲ್ಲಿಸಿದರು. ೧೯೮೧ರಲ್ಲಿ ನಿವೃತ್ತರಾದಾಗ ಯುವರಾಜಾ ಕಾಲೇಜಿನಲ್ಲಿ ರಸಾಯನಶಾಸ್ತ್ರದ ಪ್ರಾಧ್ಯಾಪಕ ಮತ್ತು ಇಂಗ್ಲಿಷ್ - ಕನ್ನಡ ನಿಘಂಟು ಪರಿಷ್ಕರಣ ಕಾರ್ಯದ ಮುಖ್ಯ ಸಂಪಾದಕ.

ಪ್ರಬುದ್ಧ ಕರ್ನಾಟಕದ ಚಿನ್ನದ ಸಂಚಿಕೆಯ ವಿಜ್ಞಾನಾಂಕದ, 'ವಿಜ್ಞಾನ ಕರ್ನಾಟಕ'ದ (ತ್ರೈಮಾಸಿಕ) ಮತ್ತು 'ಬಾಲ ವಿಜ್ಞಾನ'ದ ಸಂಪಾದನೆ. ಗೆಲಿಲಿಯೋ (ನಾಟಕ : ಅನುವಾದ). ಪರಮಾಣು ಚರಿತ್ರೆ, ಆರ್ಕಿಮಿಡೀಸ್, ಲೂಯಿ ಪಾಸ್ಚರ್, ಆಲೋಚನ, ಬೈಜಿಕ ವಿದ್ಯುತ್, ಚಕ್ರ, ಜನಸಾಮಾನ್ಯರಿಗೆ ಎಂಥ ವಿಜ್ಞಾನ ಬೇಕು? ಹಾರಾಡುವ ತಟ್ಟೆಗಳು, ವಿಜ್ಞಾನ ಮತ್ತು ತಂತ್ರಜ್ಞಾನ, ವೈಜ್ಞಾನಿಕತೆ, ವಿಜ್ಞಾನಿಗಳೊಡನೆ ರಸನಿಮಿಷಗಳು ಹಾಗೂ ನೆನಪಿನ ಅಲೆಗಳು ಅಲ್ಲದೆ ಹಲವು ಅನುವಾದಿತ ಕೃತಿಗಳು ಪ್ರಕಟವಾಗಿವೆ.

ವಿಜ್ಞಾನವನ್ನು ಜನಪ್ರಿಯಗೊಳಿಸುವ ನಿಟ್ಟಿನಲ್ಲಿ ಇವರ ಸೇವೆಗಾಗಿ ಕೇಂದ್ರ ಸರಕಾರದ ಪ್ರಶಸ್ತಿ, ಮತ್ತು 'ಚಕ್ರ' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

ಕೊರತೆಯಿದ್ದವರು ಮಾತ್ರ ಮನೆಪಾಠಕ್ಕೆ ಬರುತ್ತಿದ್ದರು. ಈಗಿನ ಸ್ಥಿತಿ ಹಾಗಲ್ಲ; ವಿದ್ಯಾರ್ಥಿಗಳು ಮನೆಪಾಠಕ್ಕೆ ಹೋಗೋಕೆ ಆರಂಭಿಸಿದ ಮೇಲೆ ಪ್ರಾಮಾಣಿಕ ಟೀಚರ್‌ಗಳಿಗೂ ಪಾಠ ಮಾಡೋಕೆ ಸ್ಫೂರ್ತಿನೇ ಇಲ್ಲದ ಹಾಗೆ ಆಗಿಹೋಯ್ತು. ಕ್ಲಾಸ್‌ನಲ್ಲಿ ಪಾಠ ಮಾಡುತ್ತಿದ್ದಾಗ ಹುಡುಗರ ಗಮನವೆಲ್ಲಾ ಎಲ್ಲೋ ಇರುತ್ತೆ. ಕಾರಣ, ಅವರೆಲ್ಲಾ ಟ್ಯೂಷನ್‌ಗೆ ಹೋಗುವವರು. ನಿರ್ದಾಕ್ಷಿಣ್ಯವಾಗಿ ಈ ಟ್ಯೂಷನ್ ಅನ್ನು ನಿಲ್ಲಿಸಬೇಕು. ಅದು ಕಾನೂನು ರೀತ್ಯಾ ಅಪರಾಧ ಅಂತ ಘೋಷಿಸಬೇಕು.

**ಹೊ** : 'ವಿಜ್ಞಾನ ಶಿಕ್ಷಣ'ದ ಸನ್ನಿವೇಶದ ಬಗ್ಗೆ ಈಗ ಸಾಕಷ್ಟು ಚರ್ಚೆಯಾಗುತ್ತಿದೆ. ಅದರ ಬಗ್ಗೆ ನಿಮಗೇನನ್ನಿಸುತ್ತದೆ?

**ಲ** : 'ವಿಜ್ಞಾನ ಮತ್ತು ತಾಂತ್ರಿಕತೆ' – ಇವುಗಳ ಬಗ್ಗೆ ಹೇಳೋದಾದರೆ ವಿಜ್ಞಾನ ಎನ್ನುವುದು 'ಜ್ಞಾನದ ಸಂಪಾದನೆ'. ಆದರೆ 'ತಾಂತ್ರಿಕತೆ' ಈ ಜ್ಞಾನವನ್ನು ಬಳಸಿ ಉಪಯೋಗ ಪಡೆದುಕೊಳ್ಳುವುದು. ವಿಜ್ಞಾನ ಶಿಕ್ಷಣ 'ಬೇರು' ಇದ್ದಂತೆ, ತಾಂತ್ರಿಕತೆ 'ಫಲ' ಇದ್ದ ಹಾಗೆ. ಅಧ್ಯಾತ್ಮದ ದೃಷ್ಟಿಯಿಂದ ನೋಡಿದಾಗಲೂ 'ಶುದ್ಧ ವಿಜ್ಞಾನ'ವೆಂದರೆ ಸತ್ಯಾನ್ವೇಷಣೆ ಮತ್ತು ಜ್ಞಾನ ದಾಹ ಎಂದೇ ತಿಳಿಯಬೇಕು. 'ತಾಂತ್ರಿಕತೆ' ಎಂದರೆ ಪ್ರಾಪಂಚಿಕ ಮೋಹ. ಉದಾಹರಣೆ ಕೊಡೋದಾದರೆ, ಆಲ್‌ಫ್ರೆಡ್ ನೊಬೆಲ್ ಡೈನಮೈಟ್ ಕಂಡುಹಿಡಿದ; ನಾಲೆಗಳನ್ನು ಮಾಡೋದಿಕ್ಕೆ ಬಳಸಿದ. ಆಮೇಲೆ ಅಪಾರ ಹಣ ಗಳಿಸಿದರೂ ಪಾಪಪ್ರಜ್ಞೆಯಿಂದಾಗಿ ಗಳಿಸಿದ ಹಣವನ್ನೆಲ್ಲಾ ಬಳಸಿ ನೊಬೆಲ್ ಪಾರಿತೋಷಿಕವನ್ನು ಪ್ರತಿಷ್ಠಾಪಿಸಿದ. ನಮ್ಮ ಕಾಲದಲ್ಲಿ ಅತ್ಯಂತ ಬುದ್ಧಿವಂತ ಹುಡುಗರು ಯಾರೂ ಇಂಜಿನಿಯರಿಂಗ್ ಕೋರ್ಸಿಗೆ ಹೋಗುತ್ತಿರಲಿಲ್ಲ. ಈಗ ಕಾಲ ಅದಲು ಬದಲಾಗಿದೆ.

ಈ ಸಂದರ್ಭದಲ್ಲಿ ನಮ್ಮ ಪ್ರೊಫೆಸರ್ ಮಂಜುನಾಥ್ ಹೇಳುತ್ತಿದ್ದ ಮಾತುಗಳು ನೆನಪಿಗೆ ಬರುತ್ತವೆ. ಪ್ರಯೋಗಾಲಯದಲ್ಲಿ ಕೆಲಸ ಮಾಡುವ ಅಟೆಂಡರ್ ಪ್ರೊಫೆಸರ್‌ಗಿಂತಲೂ ಚೆನ್ನಾಗಿ ಯಾಂತ್ರಿಕವಾಗಿ ಪ್ರಯೋಗದ ಉಪಕರಣಗಳನ್ನು ಜೋಡಿಸಬಹುದು. ಆದರೆ ಒಂದು ವೇಳೆ, ಅದರಲ್ಲಿ ಏನಾದರೂ ತಪ್ಪಾದರೆ, ಆಗ ಅವನಿಗೆ ಅದರ ರಿಪೇರಿ ಮಾಡೋಕೆ ಬರಲ್ಲ. ಅದಕ್ಕೆ ಪ್ರೊಫೆಸರೇ ಬೇಕು.

**ಹೊ** : ಪದವಿ, ಸ್ನಾತಕೋತ್ತರ ಪದವಿಗಳ ಹಂತದಲ್ಲಿ ವಿಜ್ಞಾನದ ವಿಷಯಗಳಲ್ಲಿ ವಿದ್ಯಾರ್ಥಿಗಳು ಆಸಕ್ತಿ ತೋರುವಂತೆ ಮಾಡುವುದು ಹೇಗೆ?

**ಲ** : ಈ ದಿಕ್ಕಿನಲ್ಲಿ ಇಂಟಿಗ್ರೇಟೆಡ್ ಕೋರ್ಸ್ ಅಂತ ಮಾಡಿದಾರೆ. ಆದರೆ ಅದೂ ಅಷ್ಟೊಂದು ಆಕರ್ಷಕವಾಗಿದ್ದಂತೆ ಕಾಣುವುದಿಲ್ಲ. ನಮ್ಮ ವಿದ್ಯಾರ್ಥಿಗಳಿಗೆ ಮತ್ತು ಪೋಷಕರಿಗೆ ಈಗ ಮುಖ್ಯ ಆಕರ್ಷಣೆ ಅಂದರೆ 'ಹಣ'. ಅದಕ್ಕಾಗಿ ಏನಾದರೂ ವ್ಯಾಸಂಗ ಮಾಡಬೇಕು. ಇಂಜಿನಿಯರಿಂಗ್ ಮಾಡಿದರೆ ಎಷ್ಟೊಂದು ಹಣ ಸಂಪಾದಿಸಬಹುದು! 'ಶುದ್ಧ ವಿಜ್ಞಾನ'ದ ಓದಿನಿಂದ ಅಷ್ಟೊಂದು ಹಣ ಸಂಪಾದಿಸಲು ಸಾಧ್ಯವಾಗದೇ ಇರಬಹುದು. ಈ ಅಂಶಕ್ಕೆ ಹೆಚ್ಚಿನ ಒತ್ತುಕೊಡಬೇಕು. ಅಂದರೆ ವಿಜ್ಞಾನದಲ್ಲಿ ಪರಿಣತಿ ಪಡೆದವರಿಗೂ ಒಳ್ಳೆಯ ಆದಾಯ ದೊರಕುವಂತಿರಬೇಕು. ಆದರೆ ವಿಜ್ಞಾನ ಶಿಕ್ಷಣವಂತೂ ಸಮಾಜಕ್ಕೆ ಅತ್ಯಗತ್ಯವಾಗಿ ಬೇಕು. ಈ ಸಮಸ್ಯೆಗೆ ಏನು ಪರಿಹಾರವೋ ನನಗೆ ತೋಚುತ್ತಿಲ್ಲ.

**ಹೊ** : ಕನ್ನಡ ಮಾಧ್ಯಮದಲ್ಲಿ ವಿಜ್ಞಾನದ ಶಿಕ್ಷಣವನ್ನು ಕೊಟ್ಟರೆ ವಿದ್ಯಾರ್ಥಿಗಳು ಚೆನ್ನಾಗಿ ಕಲಿಯುತ್ತಾರೆ ಅಂತ ನೀವು ಹೇಳುತ್ತಿರುತ್ತೀರಿ. ಆದರೆ ಇದು ಯಾವ ಹಂತದಿಂದ ನಡೆಯಬೇಕು?

**ಲ** : ಆರಂಭದ ಹಂತದಿಂದಲೂ. 'ಇಂಡಿಯಾ ಟುಡೇ'ನಲ್ಲಿ ಒಂದು ಸಂಶೋಧನಾ ಲೇಖನ ಓದಿದ್ದೆ. ಸರ್ವೇ ಮಾಡಿ ತಯಾರಿಸಿದ್ದ ಲೇಖನ. ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ, ಗಣಿತ - ಇವುಗಳ ಮೂಲಭೂತ ತತ್ವ ಮತ್ತು ಪರಿಕಲ್ಪನೆಗಳನ್ನು ಕುರಿತಂತೆ ಅಂತರರಾಷ್ಟ್ರೀಯ ನೆಲೆಯಲ್ಲಿ ಸರ್ವೇ ಮಾಡಿದಾಗ ಕಂಡುಬಂದ ಫಲಿತಾಂಶವೆಂದರೆ, ಭಾರತದ ವಿದ್ಯಾರ್ಥಿಗಳ ಸಾಧನೆ ಕಳಪೆ ಮಟ್ಟದ್ದಾಗಿತ್ತು ಎಂಬುದು. ಅದಕ್ಕೆ ಸ್ಪಷ್ಟವಾದ ಕಾರಣಗಳನ್ನೇನೂ ಅವರು ಕೊಟ್ಟಿರಲಿಲ್ಲ. ನಾನು ಅನ್ಕೊಂಡೆ – ಯುರೋಪ್, ಚೀನಾ, ಕೊರಿಯಾ, ಜಪಾನ್ ಮುಂತಾದ ಅಭಿವೃದ್ಧಿಶೀಲ ದೇಶಗಳಲ್ಲಿ ವಿಜ್ಞಾನವನ್ನು ಅವರ ಮಾತೃಭಾಷೆಯಲ್ಲಿ ಕಲಿಯುತ್ತಾರೆ. ನಮ್ಮಲ್ಲಿ ಹಾಗಿಲ್ಲ.

**ಹೊ** : ಇದಕ್ಕೆ ಭಾಷೆ ಕಾರಣಾನೋ? ಅವರು ಕಲಿಯುವ ಪದ್ಧತಿನೋ?

**ಲ** : ಪದ್ಧತಿ ಬಂದಿರೋದು ಭಾಷೆಯಿಂದಲೇ ಅಲ್ಲವೇ? ವಿಜ್ಞಾನವನ್ನು ವಿದೇಶೀ ಭಾಷೆಯ ಮೂಲಕ ಕಲಿಯುವುದು ಭಾರತದಲ್ಲಿ ಮಾತ್ರ.

**ಹೊ** : ನೀವೆಲ್ಲ ಅಧ್ಯಾಪಕರಾಗಿದ್ದಾಗ ವಿದ್ಯಾರ್ಥಿಗಳನ್ನು ವಿಜ್ಞಾನದ ಶಿಕ್ಷಣ, ಸಂಶೋಧನೆಗಳತ್ತ ಹೇಗೆ ಆಕರ್ಷಿಸಿದಿರಿ? ಈಗ ಅಂತಹ ಸನ್ನಿವೇಶವಿಲ್ಲವೆ?

**ಲ** : ನನಗೆ ಬೇರೆಯವರ ವಿಷಯ ಗೊತ್ತಿಲ್ಲ. ಆದರೆ ನನ್ನ ವೈಯಕ್ತಿಕ ಅನುಭವ ಹೇಳುವುದಾದರೆ, ವಿದ್ಯಾರ್ಥಿಗಳಿಗೆ ತರಗತಿಯಲ್ಲಿ ಕಠಿಣವಾದದ್ದನ್ನು ಅರ್ಥ ಮಾಡಿಸೋಕೆ ಪ್ರಯತ್ನಿಸಿ, ಅದರಲ್ಲಿ ಯಶಸ್ವಿಯಾದಾಗ, ಅವರ ಕಣ್ಣಲ್ಲಿ ಹೊಳಪು ಮೂಡುತ್ತದಲ್ಲಾ, ಅದು ನನಗೆ ತೃಪ್ತಿ ಕೊಟ್ಟ ಕ್ಷಣಗಳು. ಈಗ ಅಂತಹ ಅಧ್ಯಾಪಕರು ಇಲ್ಲ ಅಂತ ಹೇಳಕ್ಕಾಗಲ್ಲ, ಆದರೆ ಅಂತಹವರ ಸಂಖ್ಯೆ ತುಂಬಾ ಕಡಿಮೆ ಇರಬಹುದು.

**ಹೊ** : ನಮ್ಮಲ್ಲಿ ವೈಜ್ಞಾನಿಕ ಮನೋಭಾವದ ಅಭಾವ ಮತ್ತು ಅಗತ್ಯದ ಬಗ್ಗೆ ಸಾಕಷ್ಟು ಚರ್ಚೆ ನಡೆಯುತ್ತಿರುತ್ತದೆ. 'ಜನಪ್ರಿಯ ವಿಜ್ಞಾನ'ದ ಬರವಣಿಗೆಯಿಂದ ಈ ದಿಕ್ಕಿನಲ್ಲಿ ಏನಾದರೂ ಸಹಾಯವಾಗಬಹುದಾ?

**ಲ** : ನೇರವಾಗಿ ಅಂತ ಹೇಳಕ್ಕಾಗಲ್ಲ. ಆದರೆ ಜನಪ್ರಿಯ ವಿಜ್ಞಾನದ ಬರವಣಿಗೆಯು ಅತ್ಯಂತ ಅಗತ್ಯವಾದ್ದು. ಇಂತಹ ಬರವಣಿಗೆ ಈವತ್ತು ತುಂಬಾ ಮುಖ್ಯವಾಗಿ ಬೇಕು. ಉದಾಹರಣೆಗೆ, ಒಬ್ಬ ಪತ್ರಕರ್ತ ತನ್ನ ಲೇಖನದಲ್ಲಿ ಒಂದು ಕಡೆ ಹೇಳಿಬಿಡ್ತಾನೆ - 'ಇಂತಿಂಥ ಸಂಶೋಧನೆ ನಡೆದಿದೆ' ಅಂತ. ಆದರೆ ಕೇವಲ ಆ ಲೇಖನದಿಂದ ಜನಸಾಮಾನ್ಯರಿಗೆ ತಲೆ ಬುಡ ಗೊತ್ತಾಗಲ್ಲ. ಸಾಧಾರಣ ಶಬ್ದಗಳು – ಗ್ಲೋಬಲ್ ವಾರ್ಮಿಂಗ್, ಗ್ರೀನ್ ಎಫೆಕ್ಟ್ – ಈ ತರಹದ ಪರಿಕಲ್ಪನೆಗಳನ್ನು ಕುರಿತು ಅವು ವಿವರವಾಗಿ ಬರೆದರೆ, ಆಗ ವಿಜ್ಞಾನದ ವಿದ್ಯಾರ್ಥಿಯಾಗಲಿ, ಕಲಾವಿದ್ಯಾರ್ಥಿಯಾಗಲಿ ಅರ್ಥಮಾಡಿ ಕೊಳ್ಳಲು ಸಾಧ್ಯವಾಗುತ್ತದೆ. ಆದ್ದರಿಂದಲೇ 'ಜನಪ್ರಿಯ ವಿಜ್ಞಾನ'ದ ಬರವಣಿಗೆಯಲ್ಲಿಯೇ ನಾನು ಮುಖ್ಯವಾಗಿ ತೊಡಗಿಸಿಕೊಂಡೆ. ಅದನ್ನು ನಾನು ನನ್ನ ಅಧ್ಯಾಪನ ವೃತ್ತಿಯ ವಿಸ್ತರಣೆಯಾಗಿ ಕಾಣುತ್ತೇನೆ.

**ಹೊ** : ಅದು ಸರಿ. ಆದರೆ ಈ 'ಜನಪ್ರಿಯ ವಿಜ್ಞಾನ' ಬರವಣಿಗೆಯಿಂದ ವೈಜ್ಞಾನಿಕ ಮನೋಭಾವ ಉಂಟಾಗಲು ಸಾಧ್ಯವೆ?

ಲ : ಇಲ್ಲ, ವಿಜ್ಞಾನದ ತಾತ್ವಿಕತೆಯಲ್ಲಿ ಆಸಕ್ತಿಯಿದ್ದಾಗ ಮಾತ್ರ ವೈಜ್ಞಾನಿಕ ಮನೋಭಾವ ಉಂಟಾಗಲು ಸಾಧ್ಯ. ಪ್ರೌಢಶಾಲೆಯಿಂದಲೇ 'ವಿಜ್ಞಾನದ ವಿಧಾನ'ದ ಬಗ್ಗೆ ಅರಿವು ಮೂಡಿಸಬೇಕು. ಆ ಆರಂಭಿಕ ಹಂತದಲ್ಲಿ ವಿದ್ಯಾರ್ಥಿಗಳಿಗಿರಲಿ, ಶಿಕ್ಷಕರಿಗೂ ವಿಜ್ಞಾನದ ವಿಧಾನ – ತಾತ್ವಿಕತೆಯ ಅರಿವು, ತರಬೇತಿ ನೀಡಬೇಕು. ಶಾಲಾ ಪಠ್ಯದಲ್ಲೂ ಈ ವಿಷಯಗಳನ್ನು ಅಳವಡಿಸಬೇಕು. 'ವೈಜ್ಞಾನಿಕ ಮನೋಭಾವ' ಅಂದರೆ ಏನು,ವಸ್ತು ನಿಷ್ಠತೆಗೆ ಬದ್ಧರಾಗುವುದು ಹೇಗೆ, ಎಂಬುದನ್ನು ತಿಳಿಸಬೇಕು. 'ವಿಜ್ಞಾನ ಶಿಕ್ಷಣ'ಎಂದರೆ ಕೇವಲ ಮಾಹಿತಿ ಕೊಡುವುದಷ್ಟೇ ಅಲ್ಲ. ಇದನ್ನೆಲ್ಲಾ ಶಿಸ್ತುಬದ್ಧವಾಗಿ ಮಾಡಬೇಕಾಗುತ್ತದೆ.



ವಿಜ್ಞಾನದ ಮೆಟ್ಟಿಲುಗಳು ಯಾವುವು ? ಮೊದಲಿಗೆ ಸಂಗತಿಗಳ ಸತ್ಯಾಂಶವನ್ನು ಖಚಿತಪಡಿಸಿಕೊಳ್ಳಬೇಕು. ಯಾವುದೇ ಘಟನೆಯು ಹಾಗೆ ನಡೆಯುವುದೇಕೆ ಎಂಬ ಪ್ರಶ್ನೆ ಹಾಕಿಕೊಳ್ಳಬೇಕು. ಸೇಬು ಕೆಳಗೆ ಬಿದ್ದಿದ್ದನ್ನು ಕಂಡು ನ್ಯೂಟನ್ ಒಂದು ನಿಯಮವನ್ನು ಪ್ರತಿಪಾದಿಸಿದನೆಂಬ ಮಾತಿದೆ. ಇದರಲ್ಲಿ ಗಮನಿಸಬಹುದಾದ ಅಂಶವೇನೆಂದರೆ, ಆಸರೆಯಿಲ್ಲದ ಯಾವುದೇ ಪದಾರ್ಥವಾದರೂ ಕೆಳಗೆ ಬೀಳಲೇಬೇಕು. ಸರಿ; ಆದರೆ ಏಕೆ ಬೀಳುತ್ತದೆಂಬುದನ್ನು ತಿಳಿಯಬೇಕು. ಇದನ್ನು ಚರ್ಚಿಸುವಾಗ ನಾನು ಸಾಮಾನ್ಯವಾಗಿ ವಿದ್ಯಾರ್ಥಿಗಳಿಗೆ ಹಾಕುವ ಪ್ರಶ್ನೆ ಒಂದಿದೆ: ಬೀಳುತ್ತದೆ, ಆದರೆ ಕೆಳಕ್ಕೇ ಏಕೆ ಬೀಳಬೇಕು, ಮೇಲಕ್ಕೇಕೆ ಹಾರಿ ಹೋಗಬಾರದು ? ಕೆಳಗೆ ನೆಲದ ಆಸರೆ ದೊರೆಯುತ್ತದೆಂದು ಸೇಬಿಗೆ ಮೊದಲೇ ತಿಳಿದಿರುತ್ತದೆಯೆ ? ನಿಯಮಗಳನ್ನು ವಿವರಿಸಿ ಹೇಳುವ ಒಂದು ಪದ್ಧತಿ ಇದೆ. ಅದನ್ನು ಕ್ರಮವಾಗಿ ಅನುಸರಿಸದೆ ಕೇವಲ ಮಾಹಿತಿ ಕೊಡುವುದು ವಿಜ್ಞಾನದ ಬೋಧನೆಯಲ್ಲಿ ಒಂದು ನ್ಯೂನತೆ. ವೈಜ್ಞಾನಿಕ ಮನೋಭಾವಕ್ಕೆ ಇನ್ನೊಂದು ಮುಖ್ಯ ಲಕ್ಷಣವೆಂದರೆ ವಸ್ತುನಿಷ್ಠತೆ. ಅನುಭವಗಳನ್ನಾಧರಿಸಿ ಅಭಿಪ್ರಾಯಗಳನ್ನು ತಾಳುವುದು, ಬದಲಿಸಿ ಕೊಳ್ಳುವುದು, ಇವೆಲ್ಲಾ ಸಾಧ್ಯವಾಗಬೇಕು.

**ಹೊ** : ಈಗ ಹಳೆಯ ಜೀವನ ಕ್ರಮ, ಮೌಲ್ಯಗಳನ್ನು ಪುನಃ ಸ್ಥಾಪಿಸುವ ಪ್ರಯತ್ನ ಹೆಚ್ಚಾಗಿ ನಡೆಯುತ್ತಿದೆಯಲ್ಲಾ, ಈ ಸಂದರ್ಭದಲ್ಲಿ ವೈಜ್ಞಾನಿಕ ಮನೋಭಾವದ ಕೊರತೆಯೇ ಇದಕ್ಕೆ ಕಾರಣಾಂತ ಅನ್ನಿಸುತ್ತದೆಯೆ ? ವೈಜ್ಞಾನಿಕ ಮನೋಭಾವದ ಕೊರತೆಯು ಕಾರಣ ಅಂತ ಹೇಳಬಹುದಾದರೂ ಈ ರಿವೈವಲಿಸ್ಟ್ ಮನೋಧರ್ಮಕ್ಕೆ ಒಂದು ರಾಜಕೀಯ ಆಯಾಮವಿರುವುದು ಪರಿಸ್ಥಿತಿಯನ್ನು ಹೆಚ್ಚು ಗಂಭೀರಗೊಳಿಸುತ್ತದೆ. ಇವತ್ತು ನಾವು ಗಮನಿಸುತ್ತಿರುವ ಮತ್ತೊಂದು ಆತಂಕದ ವಿಷಯವೆಂದರೆ, 'ಜಾತಿ'ಯ ಚಿಹ್ನೆಗಳು ಹೆಚ್ಚಾಗಿ ಕಾಣಬರುತ್ತಿವೆ. ಚುನಾವಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾತ್ರವೇ ಇದನ್ನೆಲ್ಲಾ ಮಾಡುತ್ತಿದ್ದಾರೆ ಎನ್ನಬಹುದೆ ? ಮಾರ್ಕ್ಸ್‌ವಾದಿ ನೆಲೆಯಲ್ಲಿ ಈ ಸಮಸ್ಯೆಯನ್ನು ಹೇಗೆ ಪರಿಹರಿಸಬಹುದು ?

ಲ : ಇದು ಅತ್ಯಂತ ಕಠಿಣವಾದ ಪ್ರಶ್ನೆ. ವೈಜ್ಞಾನಿಕ ವಿಶ್ಲೇಷಣೆಯನ್ನು ಅನ್ವಯಿಸಿ ಹೇಳಬಹುದು. ಈಗ ಒಬ್ಬ ವ್ಯಕ್ತಿಯ ಜಾತಿ, ಸಮುದಾಯ ಅಥವಾ ಮತಕ್ಕೆ ಅನ್ವಯಿಸಿ ಹೇಳುವಂತಹ ಸ್ವಭಾವ, ಗುಣ ವಿಶೇಷಗಳು ಇರುವುದೇ ಇಲ್ಲ. 'ರಾಷ್ಟ್ರೀಯ ಹುಟ್ಟುಗುಣ' ಎಂಬುದು ಯಾವುದೂ ಇಲ್ಲ. ಜನಾಂಗೀಯ ಲಕ್ಷಣಗಳನ್ನು ವೈಜ್ಞಾನಿಕವಾಗಿ ವ್ಯಾಖ್ಯಾನಿಸ ಬೇಕು. ಆದ್ದರಿಂದ ಯಾವುದೇ ಒಂದು ಗುಂಪನ್ನು ಉದ್ದೇಶಿಸಿ ಕಮ್ಯೂನಲ್ ಅಂತಾನೋ, ಭಯೋತ್ಪಾದಕರು ಅಂತಲೋ ಹೇಳುವುದು ಸರಿಯಲ್ಲ. ಕೆಲವರ ಕೃತ್ಯಕ್ಕೆ ಒಂದು ಹಿನ್ನೆಲೆ, ಸನ್ನಿವೇಶ ಕಾರಣವಾಗಿರುತ್ತದೆ. ಸದ್ದಾಂ ಹುಸೇನ್, ಭಿಂದ್ರನ್‌ವಾಲೆಯಂಥವರ ಕೃತ್ಯಗಳಿಗೆ ಅಮೆರಿಕಾದ ದುಷ್ಕೃತ್ಯ ಅಥವಾ ಇನ್ನಾವುದೋ ಪ್ರಚೋದನೆ ಕಾರಣವಾಗಿರುತ್ತದೆ ಎಂದು ವೈಜ್ಞಾನಿಕ ವಿಶ್ಲೇಷಣೆಯನ್ನು ಕೊಡ ಬಹುದು. ಇದನ್ನೆಲ್ಲಾ ಆಮೂಲಾಗ್ರವಾಗಿ ಅಭ್ಯಾಸ ಮಾಡಿ ಹೇಳಬೇಕಾದ ಅಗತ್ಯವಿದೆ.

**ಹೊ** : ಈಗ ಚರ್ಚೆಯಾಗುತ್ತಿರುವ ನ್ಯೂಕ್ಲಿಯರ್ ಡೀಲ್ ಬಗ್ಗೆ ಏನು ಹೇಳುತ್ತೀರಾ ?

ಲ : ಇದನ್ನು ವಿಶೇಷವಾಗಿ ಅಧ್ಯಯನ ಮಾಡೋಕೆ ಆಗಿಲ್ಲ. ಆದರೂ ನನಗೆ ಇದು ಫೇರ್ ಡೀಲ್ ಅಂತ ಅನ್ನಿಸಲ್ಲ. ಸಮಾಜದ ಬುದ್ಧಿವಂತರು, ವಿವೇಚನೆಯುಳ್ಳವರು ಈ ಒಪ್ಪಂದವನ್ನು ವಿರೋಧಿಸುತ್ತಿದ್ದಾರೆ. ಅಷ್ಟೇ ಅಲ್ಲ, ಅಮೆರಿಕಾಕ್ಕೆ ನಮ್ಮ ದೇಶದ ಹಿತದ ಬಗ್ಗೆ ಇಷ್ಟೊಂದು ಕಾಳಜಿ ಏಕೆ, ಅಂತ ಅನುಮಾನ ಹುಟ್ಟುತ್ತದೆ. ಇದರ ಹಿಂದಿನ ವ್ಯಾಪಾರದ ಗುಟ್ಟನ್ನೆಲ್ಲಾ ತಿಳಿದುಕೊಂಡು ಒಪ್ಪಂದವನ್ನು ತಿರಸ್ಕರಿಸುವುದು ಯೋಗ್ಯವಿರುತ್ತದೋ ಏನೋ.

**ಹೊ** : ವಿದ್ಯುದುತ್ಪಾದನೆಗೆ ಅಣುಶಕ್ತಿ ಬಳಕೆಯ ಅಗತ್ಯದ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಲ : ನನ್ನ ದೃಷ್ಟಿಯಲ್ಲಿ ದೇಶದ ಭವಿಷ್ಯದ ದೃಷ್ಟಿಯಿಂದ ಹಾಗೂ ಆರ್ಥಿಕತೆಯ ದೃಷ್ಟಿಯಿಂದ ಅಣುಶಕ್ತಿಯ ಅಗತ್ಯವೇ ಇಲ್ಲ. ಅಣುಶಕ್ತಿಯನ್ನು ಯಾವತ್ತೂ ನವೀಕರಿಸಲು ಆಗಲ್ಲ. ಹಾಗೆಯೇ ಅದರ ಉತ್ಪತ್ತಿ ಮತ್ತು ಬಳಕೆ ಪರಿಸರ ವಿನಾಶಕಾರಿಯಾದುದು.

**ಹೊ** : ಇಂದಿನ ಔದ್ಯೋಗೀಕರಣದ ಸಂದರ್ಭದಲ್ಲಿ ವಿದ್ಯುದುತ್ಪಾದನೆ ಅನಿವಾರ್ಯವಾಗಿ ಹೆಚ್ಚಬೇಕು ಮತ್ತು ಅದಕ್ಕಾಗಿ ನ್ಯೂಕ್ಲಿಯರ್ ಎನರ್ಜಿಗೆ ಒತ್ತುಕೊಡ ಬೇಕಾಗುತ್ತದೆಂಬ ವಾದವಿದೆ: ಬಂಡವಾಳದ ಹೂಡಿಕೆ ಅಧಿಕ, ಅದಕ್ಕೆ ಸಮನಾಗಿ ವಿದ್ಯುದುತ್ಪಾದನೆ ಆಗುವುದಿಲ್ಲ, ಎಂಬುದೆಲ್ಲಾ ನಿಜವಾದರೂ ನಮ್ಮ ದೇಶ ಆ ದಿಕ್ಕಿನಲ್ಲಿ ಹೋಗಲೇಬೇಕಾಗಿದೆ ಎನ್ನುತ್ತಾರೆ.

ಲ : ಶಾಂತಿಯುತವಾದ ಉದ್ದೇಶಗಳಿಗೆ ನ್ಯೂಕ್ಲಿಯರ್ ತಂತ್ರಜ್ಞಾನ ಅವಶ್ಯಕವೆಂದು ಹೇಳುವುದರಲ್ಲಿ ದಾರಿತಪ್ಪಿಸುವ ಮಾತಿದೆ. ಏಕೆಂದರೆ, ಅದರಲ್ಲಿ ಶಾಂತಿಯುತವಾದದ್ದು ಏನೂ ಇರುವುದಿಲ್ಲ. ಪರಮಾಣು ಇಂಧನದಿಂದ ವಿದ್ಯುದುತ್ಪಾದನೆ ಮಾಡುವುದೆಂದರೆ ಪರಿಸರಕ್ಕೆ ಹಾನಿಯುಂಟು ಮಾಡುವುದು ಅನಿವಾರ್ಯ. ಪರ್ಯಾಯ ಮಾರ್ಗ ಗಳನ್ನು ನಾವು ಕಂಡುಕೊಳ್ಳಬೇಕು. ಅದಕ್ಕೆ ಸಂಶೋಧನೆಗಳೂ ನಡೆದಿವೆ. ಮುಖ್ಯವಾಗಿ ನಮಗಿರುವುದು ಎರಡು ಸಂಪನ್ಮೂಲಗಳು: ಸೂರ್ಯ ಮತ್ತು ಗಾಳಿ. ಕಲ್ಲಿದ್ದಲು ಮತ್ತು ಎಣ್ಣೆಯ ನಿಕ್ಷೇಪಗಳಂತೆ ಯುರೇನಿಯಂ ನಿಕ್ಷೇಪವೂ ಎಂದಾದರೊಮ್ಮೆ ಖಾಲಿಯಾಗುತ್ತದೆ. ಖಾಲಿಯಾಗದಿರುವುವು ಸೂರ್ಯ ಮತ್ತು ಗಾಳಿ. ಇವು ಸದಾ ನವೀಕರಿಸಲ್ಪಡಬಹುದಾದಂಥವು.

**ಹೊ** : ಆದರೆ, ತಂತ್ರಜ್ಞಾನವಿನ್ನೂ ಆ ಮಟ್ಟಕ್ಕೆ ಬೆಳೆದಿಲ್ಲವಲ್ಲ!

ಲ : ಬೇರೆಯದಕ್ಕೆ ವ್ಯಯಮಾಡಿರುವಷ್ಟು ಈ ಕ್ಷೇತ್ರದಲ್ಲಿ ಮಾಡಿದ್ದರೆ ಸನ್ನಿವೇಶವು ಬೇರೆಯೇ ಇರುತ್ತಿತ್ತು. ಫೋಟೋ ವೋಲ್ಟೇಜ್ ತೆಗೆದುಕೊಳ್ಳಿ: ನೀರು ಕಾಯಿಸುವಂತಹ ದಿನನಿತ್ಯದ ಅಗತ್ಯಗಳನ್ನು ಬಿಡಿ; ವಿದ್ಯುದುತ್ಪಾದನೆ ಸಹ ಸಾಧ್ಯ. ಈಗ ೪೦ ವರ್ಷಗಳ ಹಿಂದೆ ಒಂದು ಕಿಲೋವಾಟ್ ಅವರ್‌ಗೆ ೫೦ ಡಾಲರ್ ಖರ್ಚು ಬೀಳುತ್ತಿತ್ತು, ಈಗ ೫೦ ಸೆಂಟ್‌ಗಳು ಸಾಕು. ವಿಶ್ವದಲ್ಲೆಲ್ಲಾ ಈ ತಂತ್ರಜ್ಞಾನವು ಬಳಕೆಯಾಗುತ್ತಿದೆ. ನಮ್ಮ ರಾಜ್ಯದಲ್ಲಿ ಬೆಂಗಳೂರಿನ ಹೆವಿ ಇಲೆಕ್ಟ್ರಿಕಲ್ಸ್ ನೋಡಿ: ಅಲ್ಲಿ ಈ ತಂತ್ರಜ್ಞಾನವನ್ನು ಬಳಸಲಾಗುತ್ತಿದೆ. ಫೋಟೋ ವೋಲ್ಟಾಯಿಕ್ ಪದ್ಧತಿಯಿಂದ ಅಪಾರವಾದ ವಿದ್ಯುದುತ್ಪಾದನೆ ಸಾಧ್ಯವೆಂಬುದು ಈಗ ಸ್ಥಿರವಾಗಿದೆ. ಅದಕ್ಕೆ ಬಂಡವಾಳದ ಹೂಡಿಕೆಯು ಮೊದಲಿನಷ್ಟು ಬೇಕಾಗಿಲ್ಲ. ಒಂದು ಅಗಲವಾದ ಪ್ಲೇಟಿಗೆ ಶುದ್ಧ ಸಿಲಿಕಾನ್‌ನ ಲೇಪದಿಂದ ಅಥವಾ ಜರ್ಮೇನಿಯಂ ಲೇಪದಿಂದ ವಿದ್ಯುತ್ ಪಡೆಯಬಹುದು ; ಆ ಪ್ಲೇಟನ್ನು ಸೂರ್ಯನ ಬೆಳಕಿಗೆ ಒಡ್ಡಿದರೆ ಸಾಕು. ಪ್ಲೇಟಿಗೆ ಒಂದು ತಂತಿ ಜೋಡಿಸಿದರೆ ಆಯಿತು, ಅಷ್ಟೆ. ಹಿಂದೆ ಸೆಟಲೈಟ್‌ಗಳಿಗೆ ಮಾತ್ರ ಈ ಬಳಕೆ ಸೀಮಿತವಾಗಿತ್ತು. ಈಗ ಅದಕ್ಕೆ ಕ್ರಿಸ್ಟಲೈನ್ ಸಿಲಿಕಾನ್ ಬೇಕಿಲ್ಲ, ಶುದ್ಧ ಸಿಲಿಕಾನ್ ಬೇಕಿಲ್ಲ. ಕೆಲವು ಹಿತಾಸಕ್ತಿಗಳು ಇದರ ವ್ಯಾಪಕ ಬೆಳವಣಿಗೆಗಳಿಗೆ ಅಡ್ಡಿಯುಂಟುಮಾಡುತ್ತಿವೆ. ಇದಕ್ಕೆ ತಂತ್ರಜ್ಞಾನದ ಕೊರತೆಯು ಖಂಡಿತ ಕಾರಣವಲ್ಲ. ಆದ್ದರಿಂದ ನ್ಯೂಕ್ಲಿಯರ್ ಎನರ್ಜಿಯ ಕಲ್ಪನೆಯನ್ನು ಕೈಬಿಡುವುದು ಆರೋಗ್ಯಕರ ಮತ್ತು ಸಾಧ್ಯ. ನಮ್ಮ ಮರಳಿನಲ್ಲಿ ಬೇಕಾದಷ್ಟು ಸಿಲಿಕಾನ್ ಇದೆ.

ಜರ್ಮೇನಿಯಂ ಅಷ್ಟು ಸುಲಭವಲ್ಲ. ಆದರೆ ಮರಳು ಬೇಕಾದಷ್ಟಿದೆಯಲ್ಲವೆ ? ಕಡಿಮೆ ಖರ್ಚಿನಲ್ಲಿ ಸಿಲಿಕಾನ್ ಪಡೆಯುವುದು ಏನೂ ಕಷ್ಟವಲ್ಲ.

**ಹೊ** : ನೀವು ಬೆಂಗಳೂರಿನಲ್ಲಿ ವೃತ್ತಿಯಲ್ಲಿದ್ದಾಗ 'ಅಧ್ಯಯನ ಗೋಷ್ಠಿ'ಯನ್ನು ಮಾಡಿಕೊಂಡಿದ್ದಿರಿ. ಅದರಿಂದ ಏನು ಪ್ರಯೋಜನ ಆಯಿತು ?

ಲ : ಹೌದು, ನಾವು ಏಳೆಂಟು ಜನ ಸೇರಿ ವಾರಕ್ಕೊಮ್ಮೆ ಭೇಟಿಯಾಗುತ್ತಿದ್ದೆವು. ನಮ್ಮ ಅಧ್ಯಯನ ಗೋಷ್ಠಿಯಲ್ಲಿ ಸತೀಶ್ ಧಾವನ್, ವಾಸುದೇವ ಮೂರ್ತಿ, ಶೇಷಾದ್ರಿ (ಆಮೇಲೆ ಅವರು ಅಮೆರಿಕಾಕ್ಕೆ ಹೋದರು), ಎಂ. ಸಿ. ನರಸಿಂಹನ್, ಶ್ರೀನಿವಾಸನ್, ಸೇತುರಾವ್, ಎ. ಕೆ. ಎನ್. ರೆಡ್ಡಿ – ಹೀಗೆ. ನಾವು ಓದುಕೊಂಡಿದ್ದನ್ನು, ನಮ್ಮ ಅಭಿಪ್ರಾಯಗಳನ್ನು

ವಿನಿಮಯ ಮಾಡಿಕೊಳ್ಳುತ್ತಿದ್ದೆವು. ಅದರಿಂದ ನಮ್ಮ ಮಾನಸಿಕಲೋಕ ವಿಸ್ತರಿಸೋಕೆ ಕಾರಣವಾಯಿತು. ನಮ್ಮಗಳ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಈ ಅಧ್ಯಯನ ಗೋಷ್ಠಿ ಪ್ರಮುಖ ಪಾತ್ರ ವಹಿಸಿದೆ. ವಾರಕ್ಕೊಮ್ಮೆ ಭೇಟಿಯಾದಾಗ ಮುಂದಿನ ವಾರ ನಾವು ಚರ್ಚಿಸಬಯಸುವ ವಿಷಯವನ್ನು ನಿರ್ಧರಿಸಿಕೊಂಡುಬಿಟ್ಟಿರುತ್ತಿದ್ದೆವು. ಕೆಲವೊಮ್ಮೆ ಯಾವುದಾದರೂ ಪುಸ್ತಕದ ಕುರಿತು ಚರ್ಚೆ. ಹೆಚ್ಚು ಕಡಿಮೆ ನಾವೆಲ್ಲರೂ ಎಡ ವಿಚಾರಗಳನ್ನು ಬೆಂಬಲಿಸುವವರಾಗಿದ್ದರಿಂದ ಒಂದು ಸಮಾನ ಒಲವು, ಆಸಕ್ತಿ ಇರುತ್ತಿತ್ತು. ಯಾರಾದರೂ ದೊಡ್ಡ ವಿದ್ವಾಂಸರೋ, ನಾಯಕರೋ ಹೊರಗಿನಿಂದ ಬರುವವರಿದ್ದರೆ, ಅವರನ್ನೂ ನಮ್ಮ ಗೋಷ್ಠಿಗೆ ಆಹ್ವಾನಿಸುತ್ತಿದ್ದೆವು. ಈ ತರಹ ನಮ್ಮ ಗೋಷ್ಠಿಯಲ್ಲಿ ಕೋಸಾಂಬಿ, ನಂಬೂದ್ರಿಪಾಡ್, ಪಿ. ರಾಮಮೂರ್ತಿ, ಅಜಯ್ ಘೋಷ್, ಮುಂತಾದವರು ಭಾಗವಹಿಸಿದ್ದರು.

**ಹೊ :** ನೀವು ಅಷ್ಟೊಂದು ಕಡಿಮೆ ಸಂಖ್ಯೆಯಲ್ಲಿದ್ದರೂ ಹೊರಗಿನಿಂದ ಬರುತ್ತಿದ್ದ ಈ ಗಣ್ಯ ವ್ಯಕ್ತಿಗಳು ಬಿಗುಮಾನವಿಲ್ಲದೆ ಗೋಷ್ಠಿಯಲ್ಲಿ ಭಾಗವಹಿಸುತ್ತಿದ್ದರಾ ?

**ಲ :** ಹೌದು. ನಾವು ಎಂಟು, ಹತ್ತು ಜನ ಇರುತ್ತಿದ್ದೆವು. ಬಹುಶಃ ಅಕೆಡೆಮಿಕ್ ಆಗಿ ಉನ್ನತಸ್ಥಾನಗಳಲ್ಲಿದ್ದವರು ಇದ್ದುದರಿಂದ ಸಂಖ್ಯೆ ಅಷ್ಟೊಂದು ಮುಖ್ಯವಾಗುತ್ತಿರಲಿಲ್ಲ.

**ಹೊ :** ಬೆಂಗಳೂರಿನಲ್ಲಿ ಇಂತಹ ಪ್ರಯತ್ನವಾದ ಮೇಲೆ ಮತ್ತೆ ನೀವು ಇಂತಹ ಅಧ್ಯಯನ ಗೋಷ್ಠಿಗಳನ್ನು ಮಾಡಿಕೊಳ್ಳಲಿಲ್ಲವೆ ?

**ಲ :** ಇಲ್ಲ ಸಮಾನಮನಸ್ಕರು ಇರಬೇಕು, ಜೊತೆಗೆ ವ್ಯವಧಾನವಿರಬೇಕು.

**ಹೊ :** ನಿಮ್ಮ ಜೀವನದಲ್ಲಿ ಬಂದ ಹಲವಾರು ಸಾಹಿತಿಗಳನ್ನು ಕುರಿತು ಬರೆದಿದ್ದೀರಿ ಅವರು...

**ಲ :** ಹೌದು, ನೋಡಿ ಅದೊಂದು ನನ್ನ ಸೌಭಾಗ್ಯ. ನನ್ನ ಬದುಕಿನಲ್ಲಿ ಹಲವಾರು ಸ್ಮರಣೀಯ ವ್ಯಕ್ತಿಗಳ ಸ್ನೇಹ ನನಗೆ ಒದಗಿಬಂದಿರುವುದು ನನ್ನ ಪುಣ್ಯವಿಶೇಷ. ಉದಾಹರಣೆಗೆ, ಪು.ತಿ.ನ., ಎ. ಎನ್. ಮೂರ್ತಿರಾಯರು, ಶಿವರಾಮ ಕಾರಂತರು, ಹೀಗೆ. ಮೂರ್ತಿರಾಯರಂತೂ ಮೈಸೂರಿಗೆ ಬಂದಾಗಲೆಲ್ಲ ಇಲ್ಲಿ ಅವರ ನೆಂಟರ ಮನೆಯಲ್ಲಿ ಉಳಿದುಕೊಳ್ಳುತ್ತಿದ್ದರು. ಆದರೆ ಬಂದ ತಕ್ಷಣ ನನಗೆ ಫೋನ್ ಮಾಡಿ, ಯಾವಾಗ ಸಿಕ್ಕೋಣ, ಅಂತ ವಿಚಾರಿಸಿ ಇಲ್ಲಿಗೆ ಬಂದುಬಿಡುತ್ತಿದ್ದರು. ಶಿವರಾಮ ಕಾರಂತರೂ ಹಾಗೆಯೇ ನನಗೆ ತುಂಬ ನಿಕಟವಾಗಿದ್ದರು.

**ಹೊ :** ಇದಕ್ಕೆ ನಿಮ್ಮ ವ್ಯಕ್ತಿತ್ವದ ಸ್ವಭಾವ ಕಾರಣಾನೋ ? ಅಥವಾ ನಿಮ್ಮ ಅವರ ನಡುವಿನ ಸಮಾನ ಆಸಕ್ತಿಗಳು ಕಾರಣವೋ ?

**ಲ :** ಏನೋ, ನನ್ನ ಸ್ವಭಾವವಿರಬಹುದೇನೊ ! ಕೆಲವೊಮ್ಮೆ ನಮ್ಮ ಅಭಿಪ್ರಾಯಗಳು, ವಿಚಾರಗಳು ಭಿನ್ನವಾಗಿದ್ದರೂ ಅದು ಸ್ನೇಹಕ್ಕೇನೂ ತೊಂದರೆ ಕೊಡುತ್ತಿರಲಿಲ್ಲ. ಉದಾಹರಣೆಗೆ, ನಾನು ಪು.ತಿ.ನ. ಅವರ ವಿಚಾರಗಳನ್ನು ಒಪ್ಪದಿದ್ದರೂ ಅವರೊಡನೆ ಸ್ನೇಹಕ್ಕೇನೂ ಅಡ್ಡಿಯಿರಲಿಲ್ಲ. ಅವರೂ ಅಷ್ಟೆ, ಅವರಿಗೆ ಬಹುಮಟ್ಟಿಗೆ ನನ್ನ ವಿಚಾರದಲ್ಲಿ ಸಹಮತವಿಲ್ಲದಿದ್ದರೂ 'ನೀವು ಏನೇ ಓದಿರಿ, ನೀವು ಇಂಡಿಯನ್ ಕಣ್ರೀ' ಅಂತ ಅನ್ನುತ್ತಿದ್ದರು. ಶಿವರಾಮ ಕಾರಂತರೂ ನನ್ನೊಂದಿಗೆ ಬಹಳ ಸ್ನೇಹದಿಂದ ಇರುತ್ತಿದ್ದರು. ಮತ್ತೆ, ಮೂರ್ತಿರಾಯರು, ಅವರು ಮಾರ್ಕ್ಸಿಸ್ಟ್ ಅಲ್ಲದಿದ್ದರೂ ಅವರು ವಿಚಾರವಾದಿಗಳಾಗಿದ್ದರು.





ಉಂಗ್ರ ಗ್ರಾಮದಲ್ಲಿ ಗೋಬರ್ ಅನಿಲ ತಯಾರಿಕೆ

ಅವರ ಮತ್ತು ನನ್ನ ವಿಚಾರಗಳಲ್ಲಿ ಪರಸ್ಪರ ಹೊಂದಾಣಿಕೆಯಿರುತ್ತಿತ್ತು.

**ಹೊ :** ಬೆಂಗಳೂರಿನ ಭಾರತೀಯ ವಿಜ್ಞಾನ ಮಂದಿರದಲ್ಲಿ ನೀವೆಲ್ಲಾ ಒಟ್ಟಾಗಿ ಒಂದು ಸಂಸ್ಥೆಯನ್ನು ಕಟ್ಟಿದ್ದಿರಿ: ಗ್ರಾಮೀಣ ಪ್ರದೇಶಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಅಳವಡಿಕೆಯು ಅದರ ಮೂಲೋದ್ದೇಶ. ನಿರ್ದೇಶಕರಾಗಿದ್ದ ಡಾ॥ ಸತೀಶ್ ಧಾವನ್, ಪ್ರೊ॥ ಎ. ಕೆ. ಎನ್. ರೆಡ್ಡಿ, ಪ್ರೊ॥ ಎಂ. ಎ ಸೇತುರಾವ್, ನೀವು, ಮುಂತಾದವರೆಲ್ಲಾ ಅದರಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದಿರಿ. ತುಮಕೂರು ಜಿಲ್ಲೆಯ ಉಂಗ್ರ ಎಂಬ ಗ್ರಾಮದಲ್ಲಿ ಅನೇಕ ಪ್ರಯೋಗಗಳನ್ನು ನಡೆಸಿದ್ದಿರಿ. ಆ ಸಂಸ್ಥೆಯು ಈಗ ಹೇಗಿದೆ ಮತ್ತು ಅದರ ಕಾರ್ಯಕ್ರಮಗಳೇನು ?

**ಲ :** ನನಗೆ ಈಗಿನ ಪರಿಸ್ಥಿತಿಯ ಪೂರ್ಣ ಪರಿಚಯವಿಲ್ಲ. ಇತ್ತೀಚಿನವರೆಗೆ ಪ್ರೊ॥ ಜಗದೀಶ್ ಅದರ ನೇತೃತ್ವ ವಹಿಸಿದ್ದರು. ಈಗ ಅವರು ನಿವೃತ್ತರಾಗಿದ್ದಾರೆ. ನಂತರ ಯಾರು ಅದನ್ನು ಮುನ್ನಡೆಸುತ್ತಿದ್ದಾರೋ ನನಗೆ ಗೊತ್ತಿಲ್ಲ. ಹಿಂದೆ ಅದು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನ ಒಂದು ಭಾಗವಾಗಿಯೇ ಇತ್ತು. ಆಗ್ಗೆ ಪ್ರೊ॥ ಎ. ಕೆ. ಎನ್. ರೆಡ್ಡಿ ಅದರ ಕಾರ್ಯಭಾರ ನೋಡಿಕೊಳ್ಳುತ್ತಿದ್ದರು. ಅವರಿಗೆ ಗ್ರಾಮೀಣ ಪ್ರದೇಶದಲ್ಲಿ ಹೊಸ ತಂತ್ರಜ್ಞಾನದ ಅಳವಡಿಕೆಯಲ್ಲಿ ಎಷ್ಟು ಗಾಢ ನಂಬಿಕೆ ಇದ್ದಿತ್ತೆಂದರೆ ಕೆಲಕಾಲ ಇನ್‌ಸ್ಟಿಟ್ಯೂಟ್ ಬಿಟ್ಟು ಹಳ್ಳಿಗೇ ಹೋಗಿಬಿಡಬೇಕೆಂಬ ಕಾತುರತೆ ಅವರಲ್ಲಿತ್ತು. ಇನ್‌ಸ್ಟಿಟ್ಯೂಟ್‌ನಲ್ಲಿದ್ದುಕೊಂಡು ಕೆಲಸ ಮಾಡುವುದು ಹೆಚ್ಚು ಉಪಯುಕ್ತವೆಂದು ನಾವು ಅವರ ಮನವೊಲಿಸಿದೆವು. ಆ ಸಂಸ್ಥೆಯ 'ಅಸ್ತ್ರ ಒಲೆ' ಈಗ ಎಲ್ಲೆಲ್ಲೂ ಬಳಕೆಯಲ್ಲಿದೆ. ಗೋಬರ್ ಅನಿಲದ ತಯಾರಿಕೆಯು ಹಲವು ಹಳ್ಳಿಗಳಲ್ಲಿ ಉತ್ತಮವಾಗಿ ನಡೆಯುತ್ತಿದೆ. ಸುಡದ ಇಟ್ಟಿಗೆ ಬಗ್ಗೆ ಸಂಶೋಧನೆ ನಡೆಯುತ್ತಿತ್ತು. ಆದರೆ ಅದು ಪೂರ್ಣಗೊಳ್ಳಲಿಲ್ಲ. ಮಿಕ್ಕಂತೆ ಈಗ ಅದರ ಚಟುವಟಿಕೆಗಳ ಬಗ್ಗೆ ನನಗೆ ಗೊತ್ತಿಲ್ಲ.

**ಹೊ :** ಅಂದರೆ ಈಗ ವಿಜ್ಞಾನಿಗಳು ಗ್ರಾಮಾಂತರ ಪ್ರದೇಶಗಳಿಗೆ ಅನ್ವಯವಾಗುವಂತಹ ಸಂಶೋಧನೆಗಳಿಗೆ ಸಂಬಂಧಿಸಿದಂತೆ ಯೋಜನೆಗಳನ್ನು ಕೈಗೆತ್ತಿಕೊಳ್ಳುತ್ತಿಲ್ಲವೆ ?

**ಲ :** ಇದಕ್ಕೆಲ್ಲಾ ಅಮೂಲ್ಯ ರೆಡ್ಡಿಯವರಂತೆ ಪಟ್ಟುಹಿಡಿದು ಕೆಲಸ ಮಾಡುವವರು ಬೇಕು.

**ಹೊ :** ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಚಟುವಟಿಕೆಗಳು ಹೇಗಿವೆ ?

**ಲ :** ನನ್ನ ಅಭಿಪ್ರಾಯ ಬೇರೆಯವರಿಗೆ ಒಪ್ಪಿಗೆಯಾಗುತ್ತದೆಯೋ ಇಲ್ಲವೋ ಕಾಣೆ. ಹಿಂದೆಲ್ಲಾ ಕಾರ್ಯಾಗಾರಗಳು, ಪುಸ್ತಕ ಪ್ರಕಟಣೆ, ಇವೆಲ್ಲಾ ಚಳುವಳಿಯ ಭಾಗವಾಗಿ ನಡೆಯುತ್ತಿದ್ದುವು. ಈಗಲೂ ನಡೆಯುತ್ತಿವೆ. ಬೆಂಗಳೂರಿನಲ್ಲಿ ಅದಕ್ಕೆ ಒಂದು ಸೈಟು ದೊರಕಿ ಅಲ್ಲಿ ಕಟ್ಟಡ ಕಟ್ಟಲಾಗಿದೆ. ಅದಕ್ಕಾಗಿ ಬಹಳ ವೆಚ್ಚವಾಗಿದೆ. ಸಾಕಷ್ಟು ಸಾಲವೂ ಆಗಿದೆಯೆಂದು ತೋರುತ್ತದೆ. ಪರಿಷತ್ತಿನ ಹಣವೆಲ್ಲಾ ಆ ಸಾಲ ತೀರಿಸಲು ಬೇಕಾಗುತ್ತದೋ ಏನೋ. ಅದರಿಂದಾಗಿ ಚಟುವಟಿಕೆಗಳು ಕಡಿಮೆಯಾಗಿರಬಹುದು. ಈಗ ಸರ್ಕಾರದಿಂದ ಸ್ವಲ್ಪ ಸಹಾಯಧನ ಬರುತ್ತಿರುವುದರಿಂದ ಪ್ರಕಟಣೆಗಳ ಕೆಲಸ ಚೆನ್ನಾಗಿ ನಡೆಯುತ್ತಿದೆ. ಬೇರೆ ಕೆಲಸಗಳನ್ನೂ ಕೈಗೆತ್ತಿಕೊಳ್ಳುವ ಯೋಜನೆಗಳಿವೆ.

**ಹೊ :** ಅನೇಕ ವಿಷಯಗಳನ್ನು ತಿಳಿಸಿಕೊಟ್ಟಿದ್ದೀರಿ. ನಿಮಗೆ ಕೃತಜ್ಞರಾಗಿದ್ದೇವೆ. ನಮಸ್ಕಾರ

---

[illegible]

[illegible]

# ಕುಷ್ಠರೋಗಿಗಳ ಸಂಕಷ್ಟ ನಿವಾರಿಸಿದ



# ಬಾಬಾ ಆಮ್ಟೆ

ಕುಷ್ಠರೋಗಿಗಳ ಸೇವೆಗೆ ಮಾತ್ರ ತಮ್ಮನ್ನು ತೊಡಗಿಸಿಕೊಳ್ಳದೇ ಪರಿಸರಕ್ಕಾಗಿ, ಬುಡಕಟ್ಟು ಜನರ ಕಲ್ಯಾಣಕ್ಕಾಗಿ, ಕೋಮುವಾದ ತಡೆಗಟ್ಟಲು ಅನೇಕ ಜನಪರ ಹೋರಾಟಗಳನ್ನು ಮಾಡಿದ್ದಾರೆ. ಮಧ್ಯಪ್ರದೇಶ, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರದ ಗಡಿಯಲ್ಲಿರುವ ಮಾದಿರಿಯಾಗೊಂಡ ಬುಡಕಟ್ಟಿನವರ ಸುಧಾರಣೆಗೆ ಬಾಬಾ ಸಾಕಷ್ಟು ಶ್ರಮಿಸಿದ್ದಾರೆ. ಆಮ್ಟೆಯವರ ಶ್ರಮ ಸಾರ್ಥಕಗೊಂಡು ಇಂದು ಆ ಬುಡಕಟ್ಟು ಸಾಕಷ್ಟು ಮುಂದುವರಿದಿದೆ. (ಅವರ ಮಗ ಡಾ|| ಪ್ರಕಾಶ್ ವಿದರ್ಭದ ಮಾದಿಯಾ ಮತ್ತು ಗೊಂಡ ಬುಡಕಟ್ಟು ಮಂದಿಯ ಕಲ್ಯಾಣಕ್ಕಾಗಿ ದುಡಿಯುತ್ತಿದ್ದಾರೆ.) ಜೀವನದಲ್ಲಿ ಸಮಾನತೆ, ನ್ಯಾಯ ಹಾಗೂ ಶಾಂತಿಯನ್ನು ಪಡೆಯಲು ವಿಶಿಷ್ಟ ಪ್ರಯೋಗಗಳನ್ನು ನಡೆಸಿದ ಸಾಧಕರಿವರು. ಅವರ ವ್ಯಕ್ತಿತ್ವವೇ ಅವರಿಗೆ ಸಂತಸ, ಸ್ಥಾನಮಾನ ತಂದುಕೊಟ್ಟಿತ್ತು. ಈ ಅಮರ ಚೇತನ ೦೯.೦೨.೨೦೦೮ರಂದು ಇಹಲೋಕ ತ್ಯಜಿಸಿದರು. ಅವರ ನೆನಪಿಗಾಗಿ ಈ ಲೇಖನ.

ಪರಮೇಶ್ವರಯ್ಯ ಸೊಪ್ಪಿಮಠ

ದಲೈ ಲಾಮ ಅವರು 'ಪ್ರಾಯೋಗಿಕ ಸಹಾನುಭೂತಿ, ಸೈಜ ಸುಧಾರಣೆ ಹಾಗೂ ಭಾರತದ ಅಭಿವೃದ್ಧಿಗೆ ಸಮರ್ಪಕವಾದ ಹಾದಿ' ಎಂದು ಆಮ್ಟೆಯವರ ಬದುಕು-ಸೇವೆಯನ್ನು ಮನದುಂಬಿ ಹೊಗಳಿದ್ದಾರೆ. ಅದಕ್ಕೆ ತಕ್ಕದಾಗಿಯೇ ಬಾಬ ಜೀವನದ ಅಂತಿಮ ಕ್ಷಣದವರೆಗೂ ನಡೆದಿದ್ದಾರೆ. ರಾಷ್ಟ್ರದಲ್ಲೇ ಅತಿ ಹೆಚ್ಚು ಮನ್ನಣೆ ಪಡೆದ ಹಿರಿಯ ಸಮಾಜ ಸುಧಾರಕ, ಮಾನವತಾವಾದಿ, ಸ್ವಾತಂತ್ರ್ಯ ಹೋರಾಟಗಾರ, ಪರಿಸರವಾದಿ, ಕುಷ್ಠರೋಗಿಗಳ ಪಾಲಿನ ಆಶಾಕಿರಣ ಅಥವಾ ಜೀವಂತ ದೇವರು, ಸರಳ ಜೀವನ, ಅತ್ಯುನ್ನತ ಆದರ್ಶಗಳು ಹಾಗೂ ಸ್ವಾರ್ಥ ರಹಿತ ಸೇವೆಗಳ ಬದುಕು ಈ ಎಲ್ಲಂಶಗಳಿಂದ ಬಾಬಾ ಆಮ್ಟೆ ಜೀವಿತಕಾಲದಲ್ಲೇ ದಂತಕತೆಯಾದರು. ಜೀವನದಲ್ಲಿ ಸಮಾನತೆ, ನ್ಯಾಯ ಹಾಗೂ ಶಾಂತಿಯನ್ನು ಪಡೆಯಲು ವಿಶಿಷ್ಟ ಪ್ರಯೋಗಗಳನ್ನು ನಡೆಸಿದ ಸಾಧಕರಿವರು. ಅವರ ವ್ಯಕ್ತಿತ್ವವೇ ಅವರಿಗೆ ಸಂತಸ, ಸ್ಥಾನಮಾನ ತಂದುಕೊಟ್ಟಿತ್ತು. ಈ ಅಮರ ಚೇತನ (೦೯-೦೨-೨೦೦೮) ಇಹಲೋಕ ತ್ಯಜಿಸಿದ್ದು ನಮ್ಮ ದೇಶಕ್ಕೆ ತುಂಬಲಾರದ ನಷ್ಟ.

ಬಾಬಾ ಆಮ್ಟೆ ಎಂದೇ ಪ್ರಸಿದ್ಧರಾದ ಇವರ ನಿಜ ನಾಮ ಮುರಲೀಧರ ದೇವಿದಾಸ ಆಮ್ಟೆ. ಮಹಾರಾಷ್ಟ್ರದ ವರ್ಧಾ ಜಿಲ್ಲೆಯ ಹಿಂಗನಘಾಟಿನಲ್ಲಿ ೨೬ ಡಿಸೆಂಬರ್ ೧೯೧೪ರಂದು ಇವರು ಜನಿಸಿದರು. ತಂದೆ ದೇವಿದಾಸ್ ಸರ್ಕಾರಿ ಅಧಿಕಾರಿಯಾಗಿದ್ದರು. ಪ್ರೌಢ ಶಿಕ್ಷಣ ಮುಗಿದ ಮೇಲೆ ಕಾನೂನು ಶಿಕ್ಷಣ ಪೂರೈಸಿ ವರೋಡಾದಲ್ಲಿ ವಕೀಲಿ ವೃತ್ತಿ ಆರಂಭಿಸಿದರು. ಕುಸ್ತಿ, ಈಜು, ಕುದುರೆ ಸವಾರಿ, ಸಂಗೀತ ಹಾಗೂ ಕಾವ್ಯಗಳೆಂದರೆ ಇವರಿಗೆ ಬಲು ಆಸಕ್ತಿ. ಪ್ರಕೃತಿ ಪ್ರೇಮಿ, ಬಡವರನ್ನು ಕಂಡರೆ ಮರುಕ. ಬಾಲ್ಯದಿಂದಲೇ ಜಾತಿ ಹಾಗೂ ವರ್ಗಗಳ ಕಾರಣದಿಂದ ಸಮಾಜದಲ್ಲಿ ರೂಢಿಗತವಾಗಿರುವ ಅಸಮಾನತೆ ಹಾಗೂ ಅನ್ಯಾಯಗಳ ವಿರುದ್ಧ ಆಮ್ಟೆ ಸಿಡಿದು ನಿಂತರು. ಅದರ ಫಲವಾಗಿ ಬ್ರಿಟಿಷರ ದಬ್ಬಾಳಿಕೆ ವಿರೋಧಿಸಿ ಸ್ವಾತಂತ್ರ್ಯ ಚಳುವಳಿಗೂ ಧುಮುಕಿದರು. ನಂತರ ರಾಜಕೀಯಕ್ಕೂ ಸೇರಿ ೧೯೪೮ರಲ್ಲಿ ವರೋಡಾ ಪುರಸಭೆ ಉಪಾಧ್ಯಕ್ಷರಾದರು.

ಮಹಾತ್ಮಾ ಗಾಂಧಿ ಅವರ ಸೇವಾಶ್ರಮದಲ್ಲಿ ಕೆಲವು ಸಮಯ ಬಾಬಾ ಕಳೆದಿದ್ದರಿಂದ ಅವರ ಮೇಲೆ ಗಾಂಧೀ ಪ್ರಭಾವ ಅಚ್ಚೊತ್ತಿತ್ತು. ಗಾಂಧಿ, ವಿನೋಬಾ ಭಾವೆ, ಕ್ರೈಸ್ತರ ಆದರ್ಶವನ್ನು ಇಟ್ಟುಕೊಂಡ ಇವರು, ಮಾರ್ಕ್ಸ್, ಮಾವೋ, ರಸ್ಕಿನ್, ಟಾಲ್‌ಸ್ಟಾಯ್, ರವೀಂದ್ರನಾಥ ಟಾಗೋರ್, ಸಾನೆ ಗುರೂಜಿ ಮುಂತಾದವರಿಂದ ಪ್ರಭಾವಿತರಾದರು.

ಒಂದು ಸಾರಿ ಅನಿರೀಕ್ಷಿತವಾಗಿ ಕುಷ್ಠರೋಗಿಯ ಮುಖಾಮುಖಿಯಿಂದ ತಮ್ಮ ಜೀವನದ ದಿಕ್ಕನ್ನೇ ಬದಲಾಯಿಸಿಕೊಂಡರು. ಆ ರೋಗಿಗಳ ದೀನ ಸ್ಥಿತಿ ತಿಳಿದು ತಮ್ಮ ಪಿತ್ರಾರ್ಜಿತ ಆಸ್ತಿ ತ್ಯಾಗ ಮಾಡಿದರು. ಕುಷ್ಠರೋಗದ ಚಿಕಿತ್ಸಾ ವಿಧಾನವನ್ನು ಅರಿಯಲು ೧೯೪೯ರಲ್ಲಿ ಕಲ್ಕತ್ತೆಯ 'ಸ್ಕೂಲ್ ಆಫ್ ಟ್ರಾಪಿಕಲ್ ಡಿಸೀಸ್' ಸೇರಿ ಅಭ್ಯಸಿಸಿದರು. ಕುಷ್ಠರೋಗಿಗಳನ್ನು ಕಂಡರೆ ಜನರು ಮಾರುದ್ದ ನಿಲ್ಲುತ್ತಿದ್ದ ದಿನಗಳಲ್ಲಿ ಅವರನ್ನು ಬಾಬಾ ತಮ್ಮ ಮನೆಗೆ ಕರೆತಂದು ಆರೈಕೆ ಮಾಡಹತ್ತಿದ್ದರು. ಕುಷ್ಠರೋಗಿಗಳ ಬದುಕು ಹಸನು ಮಾಡಲು ಆನಂದವನ ಸ್ಥಾಪಿಸಿದರು. ಕುಷ್ಠರೋಗಿಗಳು ಸಮಾಜದಲ್ಲಿ ತಲೆ ಎತ್ತಿ ಬಾಳುವಂತೆ ಮಾಡಬೇಕೆಂದು ಅವರ ಸೇವೆ ಮತ್ತು ಕಲ್ಯಾಣಕ್ಕೆ ತಮ್ಮ ಬದುಕನ್ನು ಪೂರ್ಣವಾಗಿ ಮೀಸಲಿಟ್ಟರು. ತಮ್ಮ ಇಡೀ ಜೀವನವನ್ನು ಕುಷ್ಠರೋಗಿಗಳ ಜೊತೆಯಲ್ಲೇ ಕಳೆದ ತ್ಯಾಗಿಗಳು ಬಾಬಾ ಆಮ್ಟೆ.

ಕುಷ್ಠರೋಗಿಗಳ ಮೇಲೆ ಇವರಿಗೆ ಅದೆಷ್ಟು ಪ್ರೀತಿ ಎಂದರೆ ಒಮ್ಮೆ ಕುಷ್ಠರೋಗ ಬ್ಯಾಕ್ಟೀರಿಯಾ ನಿವಾರಣಾ ಲಸಿಕೆ ತಯಾರಿಸಲು ಸಹಾಯ ಮಾಡುವುದಕ್ಕಾಗಿ ತಮ್ಮ ದೇಹಕ್ಕೆ ಅದನ್ನು ಚುಚ್ಚಿಸಿಕೊಂಡು ತಮ್ಮನ್ನೇ ಪ್ರಯೋಗಕ್ಕೆ ಒಪ್ಪಿಸಿದಂತ ಧೀಮಂತ ವ್ಯಕ್ತಿ. ಹಾಗಾಗಿ ಮಹಾತ್ಮಾ ಗಾಂಧಿ ಇವರನ್ನು ನಿರ್ಭಯದ ವ್ಯಕ್ತಿ ಎಂದು ಬಣ್ಣಿಸಿದ್ದರು.

ಕುಷ್ಠರೋಗಿಗಳ ಸೇವೆಗೆ ಮಾತ್ರ ತಮ್ಮನ್ನು ತೊಡಗಿಸಿಕೊಳ್ಳದೇ ಪರಿಸರಕ್ಕಾಗಿ, ಬುಡಕಟ್ಟು ಜನರ ಕಲ್ಯಾಣಕ್ಕಾಗಿ, ಕೋಮುವಾದ ತಡೆಗಟ್ಟಲು ಅನೇಕ ಜನಪರ ಹೋರಾಟಗಳನ್ನು ಮಾಡಿದ್ದಾರೆ. ಮಧ್ಯಪ್ರದೇಶ, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರದ ಗಡಿಯಲ್ಲಿರುವ ಮಾದಿಯಾಗೊಂಡ ಬುಡಕಟ್ಟಿನವರ ಸುಧಾರಣೆಗೆ ಬಾಬಾ ಸಾಕಷ್ಟು ಶ್ರಮಿಸಿದ್ದಾರೆ. ಆಮ್ಟೆಯವರ

ಶ್ರಮ ಸಾರ್ಥಕಗೊಂಡು ಇಂದು ಆ ಬುಡಕಟ್ಟು ಸಾಕಷ್ಟು ಮುಂದುವರಿದಿದೆ. (ಅವರ ಮಗ ಡಾ|| ಪ್ರಕಾಶ್ ವಿದರ್ಭದ ಮಾದಿಯಾ ಮತ್ತು ಗೊಂಡ ಬುಡಕಟ್ಟು ಮಂದಿಯ ಕಲ್ಯಾಣಕ್ಕಾಗಿ ದುಡಿಯುತ್ತಿದ್ದಾರೆ.) ಪರಿಸರವಾದಿಯಾಗಿದ್ದ ಬಾಬಾ ಅವರು ಮೊದಲ ಬಾರಿಗೆ ನರ್ಮದಾ ಯೋಜನೆಯನ್ನು ವಿರೋಧಿಸಿ ಆಂದೋಲನ ಪ್ರಾರಂಭಿಸಿದರು. (ಮೇಧಾ ಪಾಟ್ಕರ್ ಇವರ ನಂತರ ಸೇರಿ ಖ್ಯಾತರಾದರು.) ಗೋದಾವರಿ ನದಿಗೆ ಅಡ್ಡಲಾಗಿ ಇಂಚಂಪಳ್ಳಿ ಹಾಗೂ ಭೂಪಾಲ ಪಟ್ಟಣಂ ಅಣೆಕಟ್ಟುಗಳನ್ನು ಕಟ್ಟಲು ಸರ್ಕಾರ ನಿರ್ಧರಿಸಿತು. ಇದರಿಂದ ೧.೨೦ ಲಕ್ಷ ಹೆಕ್ಟೇರ್‌ನಷ್ಟು ವಿಸ್ತೀರ್ಣದ ಸಮೃದ್ಧ ಅರಣ್ಯ ಜಲ ಸಮಾಧಿಯಾಗಲಿತ್ತು. ಇದರಿಂದ ಕೆರಳಿದ ಆಮ್ಟೆ ಅಂದಿನ ಪ್ರಧಾನಿ ಇಂದಿರಾ ಅವರಿಗೆ ಪತ್ರ ಬರೆದು ''ಯೋಜನೆಯು ಮಾದಿಯಾಗೊಂಡ ಮೂಲ ನಿವಾಸಿಗಳ ನೆಲ ಮುಳುಗಿಸುತ್ತದೆ. ಲಕ್ಷಗಟ್ಟಲೆ ಮರಗಳ ನಾಶದೊಂದಿಗೆ, ೪೦ ಸಾವಿರ ಜನರು ಅತಂತ್ರರಾಗಲಿದ್ದಾರೆ. ತಮ್ಮ ಬದುಕಿನ ಏಕೈಕ ಆಧಾರವಾದ ಕಾಡನ್ನು ಕಾಪಾಡಿಕೊಳ್ಳಲು ಆ ಜನರು ಬೀದಿಗಿಳಿಯುತ್ತಾರೆ'' ಎಂದು ಎಚ್ಚರಿಸಿರುವುದು ಆಮ್ಟೆ ಆ ಜನರನ್ನು ಎಷ್ಟು ಪ್ರೀತಿಸುತ್ತಿದ್ದರು ಎಂಬುದಕ್ಕೆ ಸಾಕ್ಷಿ.

ಬಾಬಾ ಆಮ್ಟೆಯವರು ದೇಶದಾದ್ಯಂತ ನಡೆಸಿದ ಹಲವಾರು ಶಾಂತಿ ಯಾತ್ರೆಗಳು ಹಾಗೂ ಸತ್ಯಾಗ್ರಹಗಳು ಅವರನ್ನು ಸದಾ ನೆನೆಯುವಂತೆ ಮಾಡಿವೆ. ಅವುಗಳಲ್ಲಿ ಪ್ರಮುಖವಾದುದೆಂದರೆ ೧೯೮೫ರಲ್ಲಿ ಕೋಮುವಾದಿ ಹಿಂಸಾಚಾರವನ್ನು ತಡೆಗಟ್ಟಿ ರಾಷ್ಟ್ರೀಯ ಏಕತೆ ವರ್ಧಿಸುವುದಕ್ಕಾಗಿ ಹಾಗೂ ಧಾರ್ಮಿಕ ಮೂಲಭೂತವಾದ, ಭಾಷಿಕ ಹಾಗೂ ಪ್ರಾಂತೀಯ ಮೂಲಭೂತವಾದಗಳನ್ನು ವಿರೋಧಿಸಲು ಕನ್ಯಾಕುಮಾರಿಯಿಂದ ಜಮ್ಮುವರೆಗೂ ಭಾರತ ಜೋಡೆಯಾತ್ರೆ ನಡೆಸಿದ್ದು ಎಲ್ಲರ ಮನದಲ್ಲಿ ಇನ್ನೂ ಹಸಿರಾಗಿಯೇ ಇದೆ.

ಬಾಬಾರವರ ಆರೋಗ್ಯ ಸದಾ ಕೈಕೊಡುತ್ತಲೇ ಇತ್ತು. ಎರಡು ಬಾರಿ ಶಸ್ತ್ರಚಿಕಿತ್ಸೆಯಾಗಿದ್ದರೂ ಅವರ ಚಟುವಟಿಕೆ, ಚುರುಕುತನ ಸ್ವಲ್ಪವೂ ಕುಗ್ಗಿದ್ದಿಲ್ಲ. ಪ್ರತಿದಿನ ಕಾಡಿನಲ್ಲಿ ಕೆಲವು ಕಿ.ಮೀ.ಗಳಷ್ಟು ಸುತ್ತಾಡಿದರೆ ನೆಮ್ಮದಿ. ಇತ್ತೀಚೆಗೆ ಬೆನ್ನು ನೋವು ಹೆಚ್ಚಾಗಿತ್ತು. ಆ ಕಾರಣಕ್ಕಾಗಿ ಇವರು ಹೆಚ್ಚು ಹೊತ್ತು ನಿಂತೇ ಇರುತ್ತಿದ್ದರು. ಇಲ್ಲವೇ ಮಂಚದ ಮೇಲೆ ಆಸೀನರಾಗಬೇಕಾಗಿತ್ತು. ಎಷ್ಟೋ ಬಾರಿ ಸಮಾರಂಭಗಳಲ್ಲಿಯೂ ಅವರು ಮಂಚದ ಮೇಲೆ ಮಲಗಿರುತ್ತಿದ್ದರು. ಇವುಗಳ ಜೊತೆ ರಕ್ತ ಕ್ಯಾನ್ಸರ್ ಕೂಡ ಕಾಡುತ್ತಿತ್ತು. ಅಂತಿಮವಾಗಿ ಬಾಬಾ ಆಮ್ಟೆ ೯೪ನೇ ವಯಸ್ಸಿನಲ್ಲಿ ತಮ್ಮ ಆನಂದವನದಲ್ಲೇ (೯-೦೨-೨೦೦೮) ಕೊನೆಯುಸಿರೆಳೆದರು.

ಮಹಾ ಮಾನವತಾವಾದ, ಗ್ರಾಮೋದ್ಯೋಗ, ಶ್ರೀಸಾಮಾನ್ಯನ ಸಶಕ್ತೀಕರಣ, ಬಡವರ ಉದ್ಧಾರ, ಸರಳ ಜೀವನವನ್ನು ಕೊನೆಯವರೆಗೂ ಪ್ರತಿಪಾದಿಸಿದ ಬಾಬಾ ಆಮ್ಟೆ ನಮ್ಮಿಂದ ಕಣ್ಮರೆಯಾಗಿದ್ದಾರೆ. ಆದರೆ ಅವರು ಸಾಧಿಸಿದ ಹಾದಿ ನಮಗೆ ಮಾರ್ಗದರ್ಶಕವಾಗಿ ಅವರನ್ನು ಸದಾ ಸ್ಮರಿಸುವಂತೆ ಮಾಡಿದೆ.

**ಬದುಕಿಗೊಂದು ತಿರುವು**

ಸಾವು-ರೋಗಗಳ ಸ್ಥಿತಿ ನೋಡಿ ಮರುಗಿದ ಸಿದ್ದಾರ್ಥ ಬುದ್ಧನಾದ ಹಾಗೆ ಕುಷ್ಠರೋಗಿಯೊಬ್ಬರ ಆಕಸ್ಮಿಕ ಭೇಟಿ ಬಾಬಾ ಆಮ್ಟೆ ಅವರ ಬದುಕಿನ ದಿಕ್ಕನ್ನೇ ಬದಲಿಸಿತು.

೬೦ ವರ್ಷಗಳ ಹಿಂದಿನ ಮಾತು. ಲಾಯರ್ ವೃತ್ತಿ ನಡೆಸುತ್ತಿದ್ದ ಶ್ರೀಮಂತರ ಮಗನಾದ ಆಮ್ಟೆ ಒಂದು ದಿನ ಅನಾಥವಾಗಿ ಬೀದಿಯಲ್ಲಿ ಬಿದ್ದಿದ್ದ ಕುಷ್ಠರೋಗಿಯೊಬ್ಬನು ದಯನೀಯ ಸ್ಥಿತಿಯಲ್ಲಿ ಇದ್ದದನ್ನು ಕಂಡ. ಆರೈಕೆಯಿಲ್ಲದೆ ಆತನ ಮೈಯಿಂದ ವಾಸನೆ ಬರುತ್ತಿತ್ತು. ಬೆರಳುಗಳು ಇಲ್ಲವಾಗಿದ್ದವು. ಮೈಮೇಲೆ ಹುಳುಗಳು ಹರಿದಾಡುತ್ತಿದ್ದವು. ಆತ ಮಳೆಯಲ್ಲಿ ತೋಯುತ್ತಿದ್ದ. ಆತನ ಭೀಕರ ಸ್ಥಿತಿ ಕಂಡು ವಕೀಲ ಮುಖ ತಿರುಗಿಸಿಕೊಂಡು ಮನೆಗೆ ಹೋದ.

ಮನೆಗೆ ಹೋದ ಮೇಲೆ ಅವರಿಗೊಂದು ಚಿಂತೆ ಹುಟ್ಟಿತು. ಇದೇ ಸ್ಥಿತಿ ನನಗೆ ಅಥವಾ ನನ್ನ ಕುಟುಂಬದವರಿಗೆ ಬಂದಿದ್ದರೆ ಏನಾಗುತ್ತಿತ್ತು? ಈ ಅಂಶವೇ ಅವರ ಜೀವನದ ದಿಕ್ಕನ್ನು ಬದಲಿಸಿತು. ಕೂಡಲೆ ಆತನಲ್ಲಿಗೆ ಮರಳಿ, ಮಳೆಯಿಂದ ಕಾಪಾಡಲು ಬಿದಿರಿನ ಶೆಡ್ ರಚಿಸಿ ಆರೈಕೆ ಮಾಡಲಾರಂಭಿಸಿದರು. ಆಮ್ಟೆಯ ಉಪಚಾರದಲ್ಲಿ ಆ ರೋಗಿ (ತುಳಸಿರಾಮ್) ಕೊನೆಯುಸಿರೆಳೆದ.

''ನಾನು ಬ್ರಿಟಿಷರಿಗೂ ಹೆದರಲಿಲ್ಲ, ಅವರ ಗೂಂಡಾಗಳಿಗೂ ಬೆದರಲಿಲ್ಲ. ಗಾಂಧೀಜಿ ನನ್ನನ್ನು ಅಭಯಸಾಧಕ ಎಂದು ಕರೆದಿದ್ದರು. ಆದರೆ ಕುಷ್ಠರೋಗಿಗಳ ಸ್ಥಿತಿ ನೋಡಿ ನನ್ನಲ್ಲಿ ಭಯ ಉಂಟಾಯಿತು. ಭಯವಿದ್ದಲ್ಲಿ ಪ್ರೀತಿಯಿಲ್ಲ, ಪ್ರೀತಿ ಇಲ್ಲದಿದ್ದಲ್ಲಿ ದೇವರು ಇಲ್ಲ. ಅದಕ್ಕಾಗಿಯೆ ನಾನು ಕುಷ್ಠರೋಗಿಗಳ ಆರೈಕೆ ಮಾಡತೊಡಗಿದೆ. ಇದು ಯಾರಿಗೂ ಸಹಾಯ ಮಾಡಲಲ್ಲ. ನನ್ನ ಭಯವನ್ನು ನಾನು ಮೀರಲು'' ಎಂದು ಬಾಬಾ ಹೇಳುತ್ತಾರೆ.

**ಆನಂದವನ**

ಆಮ್ಟೆ ಕುಷ್ಠರೋಗಿಗಳಿಗೆ ಚಿಕಿತ್ಸೆ ನೀಡುವುದರ ಜೊತೆ ರೋಗಿಗಳ ಪುನರ್ ವಸತಿ ಕಲ್ಪಿಸಲು ೧೯೫೧ರಲ್ಲಿ ವಡೋರಾದಲ್ಲಿ ಆನಂದವನ ಆಶ್ರಮ ಪ್ರಾರಂಭಿಸಿದರು. ೨೫ ಎಕರೆ ಪ್ರದೇಶದಲ್ಲಿ ಆಶ್ರಮವನ್ನು ಪ್ರಾರಂಭಿಸಿ ನಂತರದ ದಿನಗಳಲ್ಲಿ ಅದು ೪೫೦ ಎಕರೆಯುಳ್ಳ ವಿಶಾಲ ಪ್ರದೇಶವಾಗಿ ಸಮೃದ್ಧಿಯಾಗಿದೆ. ಅದರಲ್ಲಿ ೩೦೦ ಎಕರೆ ಪ್ರದೇಶದಲ್ಲಿ ಬೆಳೆ ಬೆಳೆಯುತ್ತಾರೆ. ಅದಕ್ಕಾಗಿ ಆಮ್ಟೆ ಅವರು ೧.೫ ಕೋಟಿ ರೂ.ನಷ್ಟು ನೆರವು ನೀಡಿದ್ದಾರೆ. ಅಂದು ಅವರ ಪತ್ನಿ ಸಾಧನ, ಇಬ್ಬರು ಮಕ್ಕಳು ಹಾಗೂ ೬ ಕುಷ್ಠರೋಗಿಗಳು ಮಾತ್ರ ಇದ್ದರು. ಆದರೆ ಇಂದು ೧೫೦೦ ವಿದ್ಯಾರ್ಥಿಗಳಿರುವ ಆರ್ಟ್ಸ್, ಸೈನ್ಸ್ ಹಾಗೂ ಕಾಮರ್ಸ್ ಕಾಲೇಜು, ೫೦೦ ವಿದ್ಯಾರ್ಥಿಗಳಿರುವ ಕೃಷಿ ಕಾಲೇಜು, ಕುರುಡ-ಅಂಗವಿಕಲರ ಶಾಲೆಗಳು ಇವೆ.

ಆಮ್ಟೆ ಕುಷ್ಠರೋಗಿಗಳ ಚಿಕಿತ್ಸೆಗಾಗಿ ವಿವಿಧೆಡೆ ೧೧ ಆಸ್ಪತ್ರೆಗಳನ್ನು ಸ್ಥಾಪಿಸಿ, ಅವರು ಇತರರಂತೆ ಬಾಳಲು ಆನಂದವನದಲ್ಲಿ ಕೃಷಿ, ಹೈನುಗಾರಿಕೆ, ಕುರಿ, ಹಂದಿ, ಜೇನುಸಾಕಣೆ ಮುಂತಾದವನ್ನು ಆರಂಭಿಸಿದರು.

ಬಾಬಾರವರು ಶ್ರಮಿಕ ವಿದ್ಯಾಪೀಠ ಎಂಬ ಸಂಸ್ಥೆ ಸ್ಥಾಪಿಸಿದರು. ಬಡವ-ಬಲ್ಲಿದ, ರೋಗಿ-ನಿರೋಗಿ, ಅಕ್ಷರಸ್ಥ-ನಿರಕ್ಷರಸ್ಥ ಎಲ್ಲರೂ ಒಂದುಗೂಡಿ ಪರಸ್ಪರ ಭೇದಭಾವ ಇಟ್ಟುಕೊಳ್ಳದೇ ಒಗ್ಗಟ್ಟಿನಿಂದ ದುಡಿಯಲು ತೊಗಿಸುವುದೇ ಈ ಪೀಠದ ಗುರಿ. ದೈಹಿಕ ಶ್ರಮವೇ ಇಲ್ಲಿ ಮುಖ್ಯ. ಪ್ರತೀ ವರ್ಷ ಮೇ ತಿಂಗಳಲ್ಲಿ ಇದರ ವತಿಯಿಂದ ಅಂತರ-ಭಾರತಿ ಶ್ರಮ ಸಂಸ್ಕಾರ ಶಿಬಿರ ನಡೆಸಲಾಗುತ್ತಿತ್ತು.

ಆನಂದವನದಲ್ಲೇ ಉತ್ಪಾದಿಸಿದ ಖಾದಿ ಧರಿಸಿ, ಅಲ್ಲೇ ಬೆಳೆದ ಹಣ್ಣು-ತರಕಾರಿಗಳನ್ನು ಮಾತ್ರ ಬಾಬಾ ಸೇವಿಸುತ್ತಿದ್ದರು. ಅವರ ಆಶಯದಂತೆ ಮರಣದ ನಂತರ ಪಾರ್ಥಿವ ಶರೀರವನ್ನು ಆಶ್ರಮದಲ್ಲೇ ಸಮಾಧಿ ಮಾಡಲಾಗಿದೆ. ಅವರ ಮಗ ಡಾ|| ವಿಕಾಸ್ ಆನಂದವನದ ಉಸ್ತುವಾರಿ ನೋಡಿಕೊಳ್ಳುತ್ತಿದ್ದಾರೆ.

**ನನಸಾಗದ ಪಾಕ್ ಭೇಟಿಯ ಕನಸು**

ಕಾರ್ಗಿಲ್ ಕದನದ ನಂತರ ಶಾಂತಿ ಸಂದೇಶದೊಂದಿಗೆ ಪಾಕಿಸ್ತಾನಕ್ಕೆ ಭೇಟಿ ನೀಡಬೇಕು

**ಅರಸಿ ಬಂದ ಪ್ರಶಸ್ತಿಗಳು**

೧೯೭೧ ಭಾರತ ಸರ್ಕಾರದಿಂದ ಪದ್ಮಶ್ರೀ
೧೯೭೯ ಜಮ್ನಾಲಾಲ್ ಬಜಾಜ್ ಪ್ರಶಸ್ತಿ
೧೯೮೦ ನಾಗಪುರ ವಿ.ವಿ.ಯಿಂದ ಡಿ.ಲಿಟ್. ಪದವಿ
೧೯೮೩ ಕುಷ್ಠರೋಗ ನಿರ್ಮೂಲನಾ ಕ್ಷೇತ್ರದ ಅತ್ಯುನ್ನತ ಪ್ರಶಸ್ತಿ, ಅಮೆರಿಕಾದ ಡೇಮಿಯನ್ ಡಟ್ಟನ್ ಪ್ರಶಸ್ತಿ
೧೯೮೫ ಸಾಮಾಜಿಕ ಸೇವೆಗೆ ಏಷ್ಯಾ ಖಂಡದ ನೊಬೆಲ್ ರಾಮನ್ ಮ್ಯಾಗ್ಸೆಸೆ ಪ್ರಶಸ್ತಿ
೧೯೮೬ ಭಾರತ ಸರ್ಕಾರದ ಪದ್ಮವಿಭೂಷಣ (೮-೧-೧೯೯೧ರಲ್ಲಿ ಪ್ರಶಸ್ತಿ ವಾಪಸ್)
೧೯೮೮ ಮಾನವೀಯ ಸೇವೆಗೆ ಜಿ.ಡಿ. ಬಿರ್ಲಾ ಅಂತಾರಾಷ್ಟ್ರೀಯ ಪ್ರಶಸ್ತಿ.
೧೯೮೮ ಮಾನವೀಯ ಹಕ್ಕುಗಳ ಕ್ಷೇತ್ರದ ಕೊಡುಗೆಗೆ ವಿಶ್ವಸಂಸ್ಥೆಯ ಮಾನವ ಹಕ್ಕು ಪ್ರಶಸ್ತಿ.
೧೯೯೦ ವಿಶ್ವದ ಅತಿ ದೊಡ್ಡ ನಗದು ಪ್ರಶಸ್ತಿ (೮.೮೪ ಸಾವಿರ ಡಾಲರ್)ಯಾದ ಟೆಂಪ್ಲೆಟಾಗ್ ಪ್ರಶಸ್ತಿ.
೧೯೯೦ ಅಂತರರಾಷ್ಟ್ರೀಯ ಜಿರಾಫೆ ಪ್ರಶಸ್ತಿ
೧೯೯೧ ಪರಿಸರ ಕ್ಷೇತ್ರಕ್ಕೆ ನೀಡಿದ ಕೊಡುಗೆಗಾಗಿ ವಿಶ್ವಸಂಸ್ಥೆ ಪ್ರಶಸ್ತಿ
೧೯೯೨ ಸ್ವೀಡನ್‌ನಿಂದ ರೈಟ್ ಲೈವ್ಲಿಹುಡ್
೧೯೯೯-೨೦೦೦ ಗಾಂಧಿ ಶಾಂತಿ ಪ್ರಶಸ್ತಿ.
೨೦೦೪ ಮಹಾರಾಷ್ಟ್ರ ಸರ್ಕಾರದ ಅತ್ಯುನ್ನತ ಮಹಾರಾಷ್ಟ್ರ ಭೂಷಣ ಪ್ರಶಸ್ತಿ. ಕರ್ನಾಟಕ ಸರ್ಕಾರದ ನ್ಯಾಯಮೂರ್ತಿ ಕೆ. ಎಸ್. ಹೆಗಡೆ ಪ್ರಶಸ್ತಿ.

ಎಂಬ ಆಮ್ಟೆ ಅವರ ಕನಸು ನನಸಾಗಲಿಲ್ಲ. ಭಾರತ ಪಾಕ್‌ನ ವಾಘಾ ಗಡಿ ದಾಟಿ ಪಾಕಿಸ್ತಾನದ ಜನತೆಗೆ ಶಾಂತಿ ಸಂದೇಶ ನೀಡಬೇಕು ಎಂದು ಬಯಸಿ ಎರಡು ಬಾರಿ ಸಲ್ಲಿಸಿದ ಅವರ ಮನವಿ ತಿರಸ್ಕೃತವಾಯಿತು. ಅವರ ಈ ಕನಸು ನನಸಾಗಿಸಲು ಅಂಬುಲೆನ್ಸ್ ಮಾದರಿಯ ವಾಹನ ನೀಡಲು ಟಾಟಾ ಮೋಟಾರ್ಸ್ ಮುಂದಾಗಿತ್ತಾದರೂ ತೀವ್ರ ಅನಾರೋಗ್ಯ ಹಾಗೂ ಬಲಹೀನತೆಯಿಂದ ಅವರ ಯಾತ್ರೆ ಕೈಗೂಡಲಿಲ್ಲ.

ನೊಬೆಲ್ ಶಾಂತಿ ಪ್ರಶಸ್ತಿಗಾಗಿಯೇ ಪಾಕಿಸ್ತಾನಕ್ಕೆ ಭೇಟಿ ನೀಡಲು ಆಮ್ಟೆ ಯತ್ನಿಸುತ್ತಿದ್ದಾರೆಂದು ಕೆಲ ಮಾಧ್ಯಮಗಳು ಇವರ ಮೇಲೆ ಆರೋಪ ಮಾಡಿದ್ದವು!

**ಪ್ರಶಸ್ತಿ ಹಿಂತಿರುಗಿಸಿದ ಬಾಬಾ**

ಗಾಂಧಿಯಂತೆ ಆಮ್ಟೆಯವರು ಕೂಡ ಮಹಾ ಹೋರಾಟಗಾರರು. ಕುಷ್ಠ ರೋಗಿಗಳ ಸೇವೆ ಅಲ್ಲದೆ ಮೂಲ ನಿವಾಸಿಗಳನ್ನು ಒಕ್ಕಲೆಬ್ಬಿಸುವ ದೊಡ್ಡ ಅಣೆಕಟ್ಟು ಯೋಜನೆಗಳನ್ನು ಪ್ರಬಲವಾಗಿ ವಿರೋಧಿಸಿದವರು.

ತೋಳಿಲ್ಲದ ಬಿಳಿ ಖಾದಿ ಅಂಗಿ ತೊಟ್ಟು ಶುಭ್ರ ನಗೆ ಬೀರುತ್ತಿದ್ದ ಅವರ ಮೃದು ವಾದ ವ್ಯಕ್ತಿತ್ವ, ಪ್ರಭುತ್ವದ ವಿರುದ್ಧ ನಿಲ್ಲಬೇಕಾಗಿ ಬಂದಾಗ ವಜ್ರದಂತೆ ಕಠಿಣವಾಗಿ ಬಿಡುತ್ತಿತ್ತು. ನರ್ಮದಾ ನದಿಗೆ ಕಟ್ಟುತ್ತಿದ್ದ ಸರ್ದಾರ್ ಸರೋವರ ಅಣೆಕಟ್ಟು ಯೋಜನೆಯಿಂದ ಸಂತ್ರಸ್ತರಾಗಲಿದ್ದ ಸಾವಿರಾರು ಮೂಲನಿವಾಸಿಗಳನ್ನು ಅಮಾನವೀಯವಾಗಿ ನಡೆಸಿಕೊಳ್ಳುತ್ತಿದ್ದ ಸರಕಾರದ ವಿರುದ್ಧ ತಿರುಗಿಬಿದ್ದರು. ಸರ್ಕಾರ ತಮಗೆ ನೀಡಿದ್ದ ಪದ್ಮಶ್ರೀ ಹಾಗೂ ಪದ್ಮವಿಭೂಷಣ ಪ್ರಶಸ್ತಿಗಳನ್ನು ಮರಳಿಸಿದರು.

**ಬಾಬಾ ಆಮ್ಟೆ ಉವಾಚ**

''ನಾನು ಸದಾ ಕಾರ್ಯನಿರತ, ಪ್ರಾರ್ಥಿಸಲು ಸಮಯವೇ ಇಲ್ಲ, ದೇವರು ದೊಡ್ಡವನು'', ''ದಾನ ನಾಶಗೊಳಿಸುತ್ತದೆ, ಪರಿಶ್ರಮ ಸದೃಢಗೊಳಿಸುತ್ತದೆ''. ''ಗಾಂಧೀಜಿ ಯವರಿಗೆ ಯಾವುದೇ ಪರ್ಯಾಯವೇ ಇಲ್ಲ. ಚರಕ ಹಾಗೂ ನೂಲಿನೊಂದಿಗೆ ಆ ಮಹಾತ್ಮ ಶ್ರೀ ಸಾಮಾನ್ಯನ ಜೊತೆ ಶಾಶ್ವತ ಸಂಪರ್ಕ ಸಾಧಿಸಿದ್ದರು. ಒಂದು ಚಿಟಿಕೆ ಉಪ್ಪಿನಿಂದ ಬೃಹತ್ ಚಳುವಳಿಯನ್ನೇ ಸಂಘಟಿಸಬಲ್ಲವರಾಗಿದ್ದರು.''

**ಪರಮೇಶ್ವರಯ್ಯ ಸೊಪ್ಪಿಮಠ**
ಶಿಕ್ಷಕರು, ಕೆ.ವಿ.ಓ. ಆರ್. ಕಾಲೋನಿ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ - ೫೮೩ ೨೧೨

# ರೇಣುಕೆ



ಇವತ್ತು ನೀ ಬಂದದ್ದು ಚಂದವಾಯಿತು ರೇಣುಕೇ
ತುಸು ನಿರಾಳವಾಗಿ ಕುಳಿತುಕೋ ಈ ಫ್ಯಾನಿನಡಿ
ಮತ್ತೆ ನೀರನು ಕುಡಿ ಗ್ಲಾಸು ತುಂಬ
ಬರ್ಫದ ತುಂಡನು ಹಾಕಿಕೋ
ಈಚೆಗೆ ಸರಕಾರ ನಳವನ್ನಿತ್ತಿದೆ ಮನೆಮನೆಗೆ
ಸುಮ್ಮನೆ ನದಿಯವರೆಗೆ ಹೋಗಿ
ಕೊಡಗಳನ್ನೊಡೆದುಕೊಳುವುದು ಬೇಡವೆಂದು

ನಿನಗೆ ಗೊತ್ತುಂಟಲ್ಲ ರೇಣುಕೇ
ನಮ್ಮ ಸಂಸ್ಕೃತಿಯ ಕೆಲವು ಪುಟಗಳು
ತುಂಬಿಕೊಂಡಿರುವುದು
ನಿನ್ನ ಆಯುಷ್ಯದ ಮೇಲೆ ಹಚ್ಚೆಹಾಕಿದ ಸ್ಥಳಗಳಿಂದ ?
ಆದಾಗಿಯೂ ಎಲ್ಲಮ್ಮನಾಗಿಕೊಂಡು
ನೀನು ಕುಳಿತಿರುವೆ ಸಂತೆಯಲ್ಲಿ
ಕೋಮಲ ಚಿಗುರುಗಳನು ಲಿಲಾವು ಮಾಡಲೆಂದು ?
ರೇಣುಕೇ,
ಎಲ್ಲ ಕೊಡಗಳೂ
ಹಾಗೇನು ಕಚ್ಚಾ ಇರುವುದಿಲ್ಲ ತಾಯೀ
ಅವುಗಳನು ತುಂಬಲು ಬಿಡಬೇಕು ಹೂಹಣ್ಣುಗಳಿಂದ
ತುಳುಕುವಂತೆ.

ಈಗಂತೂ ಬಂದೇ ಇರುವಿಯಲ್ಲ
ಇನ್ನು ಉಳಿದುಕೋ ಇಲ್ಲೇ
ನಿನ್ನ ಮುಖವಾಡಗಳನು
ಕಳಚು ಇಡು ಸೂಟ್‌ಕೇಸಿನೊಳಗೆ
ಮತ್ತು ಹೊರಡು ನನ್ನ ಜೊತೆಯಲಿ
ನಿನ್ನ ಪುತ್ರನ ಪಿತೃಭಕ್ತಿಯ ಮೇಲಿನ
ಕೀರ್ತನೆಯನು ಕೇಳಲು.

ಇಲ್ಲ ತಾಯೀ.
ನಾನಲ್ಲಗಳೆಯುತ್ತಿಲ್ಲ
ಅವನಿಗೆ ನಿನ್ನ ಮೇಲಿದ್ದ ನಿತಾಂತ ಮಮತೆಯನು
ಆತನೇ ಅಲ್ಲವೆ ಸಜ್ಜುಗೊಳಿಸಿದವನು
ಕತ್ತಲೆಯ ಪಲ್ಲಕ್ಕಿಗಳನು
ನಿನಗಾಗಿ
ಅವನೇ ಹರಡಿಲ್ಲವೆ ಮತ್ತೆ
ನಿನ್ನ ದಾರಿಗುಂಟ
ಚೀತ್ಕರಿಸುವ ನಿಷ್ಪಾಪ ಚಕ್ಷುಗಳನು

ಅದೆಂತಿದ್ದರೂ ರೇಣುಕೇ
ನಿನ್ನ ಕಣ್ಣುಗಳ ಸುತ್ತ ಹಬ್ಬಿದೀ ಕಾಡಿಗೆ
ಗರ್ಭದೊಳಗಿನ ಕೆಸರನು
ಒಮ್ಮೆ ತೊಡೆದುಹಾಕಲಿದ್ದರೆ
ಅಂತೆಯೇ ನಿನಗೆ ಅರಿಯಲಿದ್ದರೆ –
ಬೆಳಕಿನ ಹೂಗಳನು ಹೊಟ್ಟೆಯಲಿ ಮಡಗಿಕೊಂಡು
ಬಾಡಿದ ಮೊಗಗಳ ದುಗುಡಗಳನ್ನು
ಹಾಗಿದ್ದರೆ ನನ್ನ ತಾಯೀ
ಸಭಾ ಮಂಟಪದ ಪ್ರಖರ ಪ್ರಭೆಯಲಿ
ಒಮ್ಮೆ ನೀನು ಮಿಂದುಕೋ
ಒಮ್ಮೆ ಮಿಂದುಕೋ.

ಮರಾಠೀ ಮೂಲ : **ನೀರಜಾ**
ಕನ್ನಡಕ್ಕೆ : **ರತ್ನಾಕರ ಶೆಟ್ಟಿ**
ಎ-೨೦೩, ರಶ್ಮೀ ಪ್ಯಾಲೇಸ್, ಶಾಂತಿ ಆಶ್ರಮ
ಬೊರಿವಿಲಿ ವೆಸ್ಟ್, ಮುಂಬಯಿ - ೪೦೦ ೧೦೩

# ಕನ್ನಡ ಶಾಸನಗಳಲ್ಲಿ ಗುಲಾಮಿ (ತೊತ್ತು)

ಎಸ್. ಎಸ್. ಹಿರೇಮಠ

ಜಗತ್ತಿನ ಮಾನವ ಪೀಳಿಗೆಯ ಪ್ರಗತಿಯನ್ನು

೧) ಪ್ರಥಮ ಹಂತದ ಸಮತಾವಾದಿ ವ್ಯವಸ್ಥೆ

೨) ಗುಲಾಮ ಸಮಾಜ

೩) ಊಳಿಗಮಾನ್ಯ ಕಾಲ (ಫ್ಯೂಡಲಿಸಂ)

೪) ಬಂಡವಾಳಶಾಹಿ ವ್ಯವಸ್ಥೆ

೫) ಸಮಾಜವಾದಿ ವ್ಯವಸ್ಥೆ

–ಎಂದು ಐದು ಘಟ್ಟಗಳಾಗಿ ಪರಿಗ್ರಹಿಸಲಾಗುತ್ತದೆ. ನಾಗರಿಕತೆಯ ಪ್ರಾರಂಭ ಹಂತದಲ್ಲಿದ್ದ ಸಮಾನತೆಯ ಬುಡಕಟ್ಟು ಸಮಾಜಗಳು ನಾಶವಾಗಿ 'ಗುಲಾಮ ಸಮಾಜ' ಅಂದರೆ ಖಾಸಗಿ ಒಡೆತನ ಮತ್ತು ಶೋಷಣೆಯ ಆಧಾರದ 'ವರ್ಗವ್ಯವಸ್ಥೆ' ಜಾರಿಗೆ ಬಂತೆಂದು ಓದುತ್ತೇವೆ. ಗ್ರೀಸ್, ರೋಮ್, ಚೀನ, ಇಜಿಪ್ತ, ಬ್ಯಾಬಿಲೋನ್ ಮುಂತಾದ ಪ್ರಾಚೀನ ನಾಗರಿಕತೆಗಳ ಕಾಲದಲ್ಲಿ ಇದು ಅಸ್ತಿತ್ವದಲ್ಲಿತ್ತು.

ಭಾರತದ ಎಡಪಂಥೀಯ ಚರಿತ್ರಕಾರರು ಗುಲಾಮಗಿರಿ ಜಾಗತಿಕ ವಿದ್ಯಮಾನವಲ್ಲ, ಭಾರತದಲ್ಲಿ 'ಶೂದ್ರ ಗುಲಾಮಗಿರಿ' ಇತ್ತು; ಗುಲಾಮರು ಮನೆಗಳಲ್ಲಿ ಮಾತ್ರ ಇರುತ್ತಿದ್ದರು; ಗ್ರೀಸ್ ದೇಶದಲ್ಲಿದ್ದಂತೆ ಗುಲಾಮರು ಮತ್ತು ಒಡೆಯರು ಎಂಬ ಪ್ರಧಾನ ವರ್ಗಗಳಿರಲಿಲ್ಲ; ಇಲ್ಲಿ ಗುಲಾಮರ ಮಾರಾಟ ನಡೆಯುತ್ತಿದ್ದಿಲ್ಲ ಎಂದು ವಾದಿಸುತ್ತಾರೆ. (ಉದಾ : ಆರ್. ಎಸ್. ಶರ್ಮ)

ಚಾತುರ್ವರ್ಣ್ಯ ಸಿದ್ಧಾಂತದ ಮೂಲಕ ಇತಿಹಾಸದ ವ್ಯಾಖ್ಯಾನ ಮಾಡುವಾಗ ಈ ವಿಚಾರಗಳು ನಿಜವೆನಿಸುತ್ತವೆ. ಚಾತುರ್ವರ್ಣ್ಯ ಮತ್ತು ಜಾತಿಪದ್ಧತಿಯಿಂದಾಗಿ ಇಲ್ಲಿ ಗುಲಾಮಗಿರಿಯ ಸ್ವರೂಪವೇ ಭಿನ್ನವಾಗಿತ್ತು. ಆದರೆ ಕರ್ನಾಟಕದಲ್ಲಿ ದೊರಕುವ ಸುಮಾರು ೩೦,೦೦೦ ಶಾಸನಗಳಲ್ಲಿ 'ಶೂದ್ರ' ಎಂಬ ಪದ ಕಾಣಬರುವುದೇ ಕಡಿಮೆ. ಅಂದರೆ ಕರ್ನಾಟಕದ ಸಂದರ್ಭದಲ್ಲಿ ಈ ಸಿದ್ಧಾಂತ ಎಷ್ಟರಮಟ್ಟಿಗೆ ನಿಜ ?

ಬುಡಕಟ್ಟು ವ್ಯವಸ್ಥೆಗೂ ಚಾತುರ್ವರ್ಣ್ಯ ಸಿದ್ಧಾಂತಕ್ಕೂ ಇರುವ ಅಂತರವನ್ನು ಗಮನಿಸಿದಾಗ ಈ ಪ್ರಶ್ನೆ ಉದ್ಭವವಾಗುತ್ತದೆ. ಕರ್ನಾಟಕದ ಕುರುಬ, ಗೊಲ್ಲ, ಬೇಡ, ಗೌಡ, ಲಿಂಗಾಯತ ಮುಂತಾದ ಪ್ರಬಲ ಪಶುಪಾಲಕ ಕುಲಗಳು, ಹೊಲೆಯ-ಮಾದಿಗರಂಥ ಕೃಷಿ ಪ್ರಧಾನ ಕುಲಗಳು, ಜಾತಿಗಳಾದ ನಂತರವೂ ಬ್ರಾಹ್ಮಣರ ದೃಷ್ಟಿಯಲ್ಲಿ ಮಾತ್ರ 'ಶೂದ್ರ'ರಾಗಿದ್ದರು. ಆದರೆ, ಈ ದೃಷ್ಟಿ ಸಂಪೂರ್ಣ ಸಮರ್ಪಕವಾಗಿರಲಿಲ್ಲ. ಈ ಎಲ್ಲ ಜನಕುಲಗಳು ತಮ್ಮನ್ನು ಶೂದ್ರರೆಂದು ಭಾವಿಸಿಕೊಂಡಿದ್ದರೇ ?

ಅಲ್ಲದೆ ಕನ್ನಡ ಶಾಸನ, ಕಾವ್ಯ ಮತ್ತು ಶಾಸ್ತ್ರಗಳನ್ನು ಆಧರಿಸಿ ಹೇಳುವುದಾದರೆ ಗುಲಾಮರ ಮಾರಾಟ ಇಲ್ಲಿ ನಡೆಯುತ್ತಿತ್ತು.

ಕರ್ನಾಟಕದ ಲಿಖಿತ ಚರಿತ್ರೆ ಪ್ರಾರಂಭವಾಗುವುದೇ ಕ್ರಿ.ಶ.ದ ಈಚೆಯಿಂದ. ಆಗ ಗುಲಾಮ ವ್ಯವಸ್ಥೆ ನಾಶವಾಗಿ ಊಳಿಗಮಾನ್ಯ ವ್ಯವಸ್ಥೆಯ ಪ್ರಾಬಲ್ಯವಿತ್ತು. ಭಾರತದಲ್ಲಿ ಊಳಿಗಮಾನ್ಯ (ಫ್ಯೂಡಲ್) ವ್ಯವಸ್ಥೆಯ ವಿಪುಲ ವಿವರಗಳು ಲಭ್ಯವಿರುವಂತೆ ಗುಲಾಮ ಸಮಾಜದ ವಿವರಗಳು ದೊರಕಲಾರವು. ನಿದರ್ಶನಕ್ಕೆ– ಸಿಂಧೂ ನಾಗರಿಕತೆಯಲ್ಲಿ ಗುಲಾಮಗಿರಿ ಇತ್ತೇ ಎಂಬ ಪ್ರಶ್ನೆ. ಅಂದಿಗೂ ಅಂಥ ಸಮಾಜವಿತ್ತು ಮತ್ತು ಕಾಲವಿತ್ತು ಎಂಬುದಕ್ಕೆ ಊಳಿಗಮಾನ್ಯ ಕಾಲದಲ್ಲೂ ಅವಶೇಷಗಳಂತೆ ಸಿಗುವ ಸಾಕ್ಷಿಗಳು ಆಧಾರವಾಗುತ್ತವೆ.

ಕನ್ನಡ ಲಿಖಿತ ಪರಂಪರೆಯಲ್ಲಿ ಅಲ್ಲಲ್ಲಿ ಕಾಣಸಿಗುವ 'ತೊತ್ತು' ಎಂಬ ಪದವೇ 'ಗುಲಾಮ' ಸಮಾಜ ಅಸ್ತಿತ್ವದಲ್ಲಿದ್ದುದಕ್ಕೆ ನಿದರ್ಶನವಾಗಿದೆ. 'ತೊತ್ತು' ಎಂದರೆ ಸ್ತ್ರೀ ಅಥವಾ ಪುರುಷ 'ಗುಲಾಮ'.

ದ್ರಾವಿಡ ಸೋದರಿ ಭಾಷೆಗಳಲ್ಲಿ 'ತೊತ್ತು' ಪದದ ಕುರಿತು ವಿಶೇಷ ಸಂಗತಿಗಳು ಲಭ್ಯವಿದ್ದು ''ದ್ರಾವಿಡಿಯನ್ ಎಟಿಮೊಲೊಜಿಕಲ್ ಡಿಕ್ಷನರಿ'', 'ತೊಳಿಲ್' ಎಂಬ ಪದದ ಕೆಳಗೆ ಈ ಮಾಹಿತಿ ಒದಗಿಸುತ್ತದೆ. ತಮಿಳಿನ ಈ ಪದಕ್ಕೆ ಕೆಲಸ, ಕೌಶಲ್ಯ ಎಂಬರ್ಥ. ಕನ್ನಡದ 'ತೊತ್ತು' ಪದದ ಮೂಲವನ್ನು ಹುಡುಕಹೊರಟರೆ ತಮಿಳಿಗೆ ಕರೆದೊಯ್ಯುತ್ತಾನೆ ಈ ಪದಕೋಶಕಾರ. ಪ್ರತಿಯೊಂದು ಪದಕ್ಕೂ ಹೀಗೆ ತಮಿಳಿನಲ್ಲೇ ಮೂಲವನ್ನು ಹುಡುಕುವ ಹಟ. ಅನೇಕ ಸಲ ಈ ಕ್ರಮ ಈ ಪದಕೋಶದ ಗಂಭೀರ ಮಿತಿ.

ಗುಲಾಮ ಮತ್ತು ಗುಲಾಮಿ ಎಂಬ ಪುಲ್ಲಿಂಗ ಸ್ತ್ರೀಲಿಂಗ ರೂಪಗಳಿಗೆ ತೊಜುಕ್ಕನ್, ತೊಜುತ್ತೈ, ತೊಜುಂಪನ್, ತೊಜುಂಪಿ, ತೊಂಟು, ತೊತ್ತು ಈ ಪದಗಳು ತಮಿಳಿನಲ್ಲಿರುವುದನ್ನು ಗುರುತಿಸಲಾಗಿದೆ. ತೊಜುತ್ತೈಗೆ ಗುಲಾಮಿ ಎಂಬರ್ಥವಲ್ಲದೆ ಅನೈತಿಕ ಹೆಂಗಸು, ಸೇವಕಿ ಎಂಬರ್ಥಗಳನ್ನೂ ಹೇಳಲಾಗಿದೆ. ತೊಜುಂಪು ಎಂದರೆ ಗುಲಾಮಗಿರಿ; ದೇವರಿಗೆ ಭಕ್ತಿಯ ಸೇವೆ ಸಲ್ಲಿಸುವುದು ಎಂಬರ್ಥವೂ ಇರುವುದು ಗಮನಾರ್ಹ. ತೊಜುವರ್ ಎಂದರೆ ಕೃಷಿಕರು, ಸೇವಕರು; ನೇಗಿಲುಕಾರರು. ಕನ್ನಡದಲ್ಲಿ ತುಜಿಲ್ ಎಂದರೆ ಕೆಲಸ, ಸೇವೆ, ಗುಲಾಮಗಿರಿ. ತೊರ್ಜು, ತೊತ್ತು ಎಂದರೆ ಗುಲಾಮ; ಅದರಲ್ಲೂ ವಿಶೇಷವಾಗಿ 'ಗುಲಾಮಿ' ಎಂಬರ್ಥ. ತೆಲಗಿನಲ್ಲಿ 'ತೊತ್ತು' ಇದೆ. ಇದಕ್ಕೆ 'ಸೂಳೆ' ಎಂಬರ್ಥವೂ ಇದೆ.

'ಕೆಲಸ' ಎಂಬರ್ಥದ ತೊಜಿಲ್, ತುಯಿಲ್ ಎಂಬ ಮೂಲ ಪದಗಳಿಂದ 'ತೊತ್ತು' ಎಂಬ ಪದವಲ್ಲದೆ ಇತರ ಪದಗಳು ಹುಟ್ಟಿರುವುದು ಸ್ಪಷ್ಟ. ವರ್ಗ ಸಮಾಜ ಹುಟ್ಟಿದನಂತರ ದೈಹಿಕ ಶ್ರಮಕ್ಕೆ, ಚರಿತ್ರೆಯಲ್ಲಿ ಎಷ್ಟೊಂದು ಕೀಳುಸ್ಥಾನ ಲಭಿಸಿತು ಎಂಬುದನ್ನು ಗಮನಿಸಿದರೆ 'ತೊತ್ತು' ಪದದ ಹೀನಾರ್ಥಕ್ಕೆ ಕಾರಣ ದೊರಕುತ್ತದೆ.

ಇನ್ನೊಂದು ಮಹತ್ವದ ಸೂಚನೆ ಎಂದರೆ ಕೃಷಿಗೂ ಗುಲಾಮಗಿರಿಗೂ ಇರುವ ನಂಟು. ಪಶುಪಾಲನೆಯಲ್ಲ, ಬೇಸಾಯ ವೃತ್ತಿಯು, ಸಮಾಜದಲ್ಲಿ ಪ್ರಧಾನವಾದಾಗ ವರ್ಗ-ಶೋಷಣೆ ಶುರುವಾಯಿತು. ರೈತರು ಮತ್ತು ಕೂಲಿಕಾರರ ಮೇಲೆ ಯಜಮಾನರು ಬಂದು ಕೂತರು. ಸಣ್ಣ ಬೇಸಾಯಗಾರರು, ಕೃಷಿ ಕೂಲಿಕಾರರು ಗುಲಾಮರಾಗಬೇಕಾಯಿತು.

ಕನ್ನಡ ಶಾಸ್ತ್ರ ಮತ್ತು ಕಾವ್ಯಗಳಲ್ಲಿ ತೊತ್ತುಗಳ ಬಗ್ಗೆ ಸಿಗುವ ವಿವರಗಳು ವಿಶೇಷ ಮಹತ್ವದ ಮಾಹಿತಿಗಳನ್ನು ಒದಗಿಸುತ್ತವೆ. ಆದರೆ ಅದು ದೊಡ್ಡ ಲೇಖನದ ವಿಷಯ. ಇಲ್ಲಿ ಶಾಸನಗಳಲ್ಲಿ ಕಂಡುಬರುವ ತೊತ್ತುಗಳ ಕುರಿತು ಮಾತ್ರ ವಿವೇಚನೆ ಮಾಡಲಾಗಿದೆ.

ಸ್ಥೂಲವಾಗಿ ಹೇಳುವುದಾದರೆ ಶಾಸನಗಳಲ್ಲಿ ಮೂರು ವಿಧದಲ್ಲಿ 'ತೊತ್ತು' ಎಂಬ ಪರಿಭಾಷೆಯ ಬಳಕೆ ಇದೆ.

೧) ದೇವರ, ದೊರೆಗಳ ಅಥವಾ ಮಹಾಜನರ 'ತೊತ್ತು' ಎಂಬ ಸಾಂಪ್ರದಾಯಿಕ ಹೇಳಿಕೆಯಲ್ಲಿ ಕಾಣಬಹುದಾಗಿದೆ.

೨) ಆರ್ಥಿಕ ವಿಷಯಗಳಲ್ಲಿ ಬರುವ 'ತೊತ್ತು', ತೆರಿಗೆ, ಸುಂಕ, ಕರಗಳಲ್ಲಿ ಪ್ರಸ್ತಾಪವಾಗುವುದರಿಂದ, ತೊತ್ತುಗಳ ಒಡೆಯರು, ವ್ಯಾಪಾರಸ್ಥರು, ತೊತ್ತುಗಳನ್ನು ಇಟ್ಟುಕೊಂಡುದಕ್ಕೆ, ಪ್ರಭುತ್ವಕ್ಕೆ ತೆರಿಗೆ ನೀಡಬೇಕಾಗುತ್ತಿತ್ತು. ಈಚಿನ ಕೆಲವು ಶಾಸನಗಳ ಪ್ರಕಾರ ಒಡೆಯರು ತಮ್ಮ ಆಸ್ತಿಯನ್ನು ತಮ್ಮ ಸಂಬಂಧಿಗಳ ಮಧ್ಯೆ ಹಂಚುತ್ತಿದ್ದಾಗ, ತಮ್ಮ ತೊತ್ತುಗಳ ಮಕ್ಕಳಿಗೂ ಪಾಲು ದೊರಕುವಂತೆ ನೋಡಿಕೊಳ್ಳುತ್ತಿದ್ದರೆಂಬ ವಿಶೇಷವಾದ ಅಂಶ.

೩) ಸಾಮಾಜಿಕ ಸಂಬಂಧದಲ್ಲಿ: ತೊತ್ತುಗಳು ಅತ್ಯಂತ ಕೀಳು. ಪ್ರಾಣಿಗಳಿಗೆ ಸಮಾನ ಎಂಬ ಭಾವನೆ ಇದ್ದುದರಿಂದ ಅವರ ಹೆಣಗಳನ್ನು ಎಳೆದು ಬಿಸಾಡುವುದು ಎಂದು ಕೆಲವು ಶಾಸನಗಳು ಸೂಚಿಸುತ್ತವೆ.

**(೧) ಸಾಂಪ್ರದಾಯಿಕ ಹೇಳಿಕೆಯಾಗಿ 'ತೊತ್ತು' ಎಂಬುದು**

೧. 'ಸಂಟರ ತೊಳ್ತು' ಎಂದು ಸಾಮಂತನೊಬ್ಬನ ಬಿರುದು. ದೊಡ್ಡ ಬೆಟ್ಟದ ೪೩೪ನೇ ಶಾಸನದಲ್ಲಿದೆ. (E.C. 2. ೧೦ನೇ ಶತಮಾನ)

೨. ಬಾಗಳಿಯ (ಹರಪನಹಳ್ಳಿ ತಾಲೂಕು) ಕ್ರಿ.ಶ. ೧೦೩೫ರ ಒಂದು ಶಾಸನದಲ್ಲಿ ನಾಗವೆಯ ಮಗಳು ಹಾಡುವ ಕಾಮವೆ 'ಕಲಿದೇವರ ತೊತ್ತು' ಎಂದಿದೆ. [illegible]

ಬಿಟ್ಟ ಸೂಳೆಯರಲ್ಲಿ ಒಬ್ಬಳು ಈ ಕಾಮವ್ವೆ.

೩. ನೀಲಗುಂದದ (ಹರಪನಹಳ್ಳಿ ತಾಲೂಕು) ''ಅಖಿಳ ಶಿವಭಕ್ತರ ತೊತ್ತು'' ಎಂದು ಚಿದ್ದಣ್ಣನೆಂಬ ಶ್ರೀಮಂತನನ್ನು ಸ್ತುತಿಸಲಾಗಿದೆ. ಈತ ಶಿವದೇಗುಲವನ್ನು ನಿರ್ಮಿಸಿ ಭೂಮಿ ದಾನ ಮಾಡುತ್ತಾನೆ. (ಕ.ವಿ. ಶಾ. ಸಂ. ೧, ೧೦೭೯ ಕ್ರಿ.ಶ.)

೪. ೧೧ನೇ ಶತಮಾನದ ಬಾಗಳಿಯ ಕಲ್ಲೇಶ್ವರ ದೇವಾಲಯದ ಒಂದು ಸಣ್ಣ ಶಾಸನದಲ್ಲಿ ಮಾನ್ಯನೊಬ್ಬನ ಬಿರುದಾವಳಿಯಲ್ಲಿ ಮೇಲಿನಂತೆ ''ನಂಟರ ತೋಟ್ಟು'' ಎಂಬ ಮಾತು ಬರುತ್ತದೆ. ಇದರ ಪೂರ್ಣಪಾಠ ಮುಂದೆ ಉಲ್ಲೇಖಿತವಾಗಿರುವ ಶಾಸನದಲ್ಲಿದೆ.

೫. ಇದೇ ಬಾಗಳಿಯ ದೇಗುಲದ ಮತ್ತೊಂದು ಶಾಸನದಲ್ಲಿ ''ನಂಟರ ತೊಟ್ಟಿ, ಬಂಟರ ದಾಸಿ'' ಎಂದು ಬಿರುದಿನ ಪೂರ್ಣ ರೂಪ ಪ್ರಸ್ತಾಪವಾಗಿದೆ. ಇದನ್ನು ಗಂಗರಸನ ಸೇನಬೋವ ಅಣ್ಣಮಯ್ಯನಿಗೆ ಅನ್ವಯಿಸಲಾಗಿದೆ (೧೧ನೇ ಶತಮಾನ).

ಚಕ್ರವರ್ತಿಯಿಂದ ಕೆಳಗಿನ ಪ್ರಭುವರ್ಗದವರ ಬಿರುದಾವಳಿಗಳಲ್ಲಿ ಭೃತ್ಯ, ತೊತ್ತು ಎಂಬ ಪರಿಭಾಷೆಗಳನ್ನು, ಅವರ ವಿಧೇಯತೆಯನ್ನು, ಸಂಪೂರ್ಣ ಶರಣಾಗತಿಯನ್ನು ಸೂಚಿಸುವ ಬಿರುದುಗಳಾಗಿ ಬಳಸುತ್ತಿದ್ದರು. ಇದು ಆ ಫ್ಯೂಡಲ್ ಕಾಲದ ರಾಜಕೀಯದಲ್ಲಿ ಅನಿವಾರ್ಯವಾಗಿತ್ತು.

ನಂಟರಿಗೆ ತೊತ್ತಾಗಿ, ಬಂಟರಿಗೆ ದಾಸಿಯಾಗಿ ಸೇವೆ ಮಾಡುವ ಅಂದರೆ ವಿಧೇಯರಾಗಿರುವ ಗುಣ ಬಿರುದಾವಳಿಯಾಗಿ ಬಳಕೆಯಾಗುತ್ತಿತ್ತು.

೬. ಕುಂದಗೋಳ ತಾಲೂಕು ಎಲಿವಾಳದಲ್ಲಿ ಸಾವಿರ ಮಹಾಜನರ (ಬ್ರಾಹ್ಮಣರು) ತೊತ್ತು ಚಿಕ್ಕಿಮಯ್ಯ ಅಂಗಡಿಗಳನ್ನು ಕಟ್ಟಿಸಿ ದಾನ ಕೊಡುವ ವಿಷಯವಿದೆ. (ಕ್ರಿ.ಶ. ೧೧೦೮, SII. XX) ಅನೇಕ ಅಗ್ರಹಾರಗಳಲ್ಲಿ ಬ್ರಾಹ್ಮಣೇತರರು ದಾನ ಧರ್ಮ ಮಾಡಿದಾಗ ಅಲ್ಲಿಯ 'ಬ್ರಾಹ್ಮಣರ ತೊತ್ತು' ತಾವು ಎಂದು ಹೇಳಿಕೊಳ್ಳಲು ಹೆಮ್ಮೆಪಡುತ್ತಿದ್ದರೇನೋ, ಹಲವಾರು ಶಾಸನಗಳಲ್ಲಿ ಈ ಸಂಗತಿಯಿದೆ.



೭. ಧಾರವಾಡ ತಾಲೂಕು ನರೇಂದ್ರದ (ಕ್ರಿ. ಶ. ೧೧೨೩) ಶಾಸನವೊಂದು ''ಸಂತರ ದೇವರಿಗೆ ಆ ದೇವರ ತೊತ್ತು ಮಹೇಶ್ವರ ಪ್ರಯಾಗೆ ಭಟ್ಟಯ್ಯ''ನನ್ನು ಪ್ರಸ್ತಾಪಿಸುತ್ತದೆ. ಬ್ರಾಹ್ಮಣರು ದೇವರ ತೊತ್ತಾಗಿರುತ್ತಿದ್ದರು !

೮. ಕಲಘಟಗಿ ತಾಲೂಕು ಕಾಮಧೇನು ಎಂಬ ಊರಲ್ಲಿ (ಕ್ರಿ.ಶ. ೧೧೭೯) ಮಲ್ಲಿಶೆಟ್ಟಿಯನ್ನು, ''ಶಿವಪದ ಭಕ್ತ, ಶಿವಲೆಂಕ, ಶಿವನ ತೊತ್ತು, ಶಿವಗಣ ಮಿತ್ರ'' ಎಂದು ಹೊಗಳಲಾಗಿದೆ.

೯. ಅಣ್ಣಿಗೇರಿಯ ಕ್ರಿ. ಶ. ೧೧೬೧ರ ಶಾಸನ ತ್ರುಟಿತವಿದ್ದು ಯಾವುದೋ ಒಬ್ಬ ವ್ಯಕ್ತಿಯನ್ನು ''ಅಮೃತೇಶ್ವರ ದೇವರ ತೊತ್ತು'' ಎಂದು ನಮೂದಿಸಿದೆ. (SI.I. XXV)

೧೦. ಚನ್ನರಾಯಪಟ್ಟಣ ತಾಲೂಕು ಕೆಂಬಾಳು (ಕ್ರಿ.ಶ. ೧೧೬೮) ಶಾಸನದ ಕೊನೆಗೆ ''ದೇವರ ತೊತ್ತು'' ಎಂಬ ಮಾತಿದೆ.

೧೧. ಅರಸಿಕೆರೆ ತಾಲೂಕು ಯಡವನಹಳ್ಳಿಯ ಕ್ರಿ.ಶ. ೧೧೭೭ರ ಒಂದು ಶಾಸನದ ಪ್ರಕಾರ ಕೇತಗವುಡ ಲಿಂಗಪ್ರತಿಷ್ಠೆ ಮತ್ತು ಕೆರೆಗಳನ್ನು ಮಾಡಿಸಿ ''ಶ್ರೀ ಕಲಿದೇವರ ತೊತ್ತು'' ಆಗಿದ್ದ.

೧೨. ೧೨ನೇ ಶತಮಾನದ ತೊಣ್ಣೂರಿನ (EC 6) ಎರಡು ಶಾಸನಗಳಲ್ಲಿ ಶಿವಭಕ್ತರ ತೊತ್ತು ಮಹದೇವಣ್ಣನ ಹೆಸರಿದೆ; ''...ಶಿಂಬುಕರ ತೊತ್ತು ಮಹದೇವಣ್ಣ''.

೧೩. ನೆಲಮಂಗಲ ತಾಲೂಕು ಶಿವಗಂಗೆ ಬೆಟ್ಟದ ಗಂಗಾಧರೇಶ್ವರ ಬೆಟ್ಟದ ಒಂದು ಶಾಸನದಲ್ಲಿ (೧೨ನೇ ಶತಮಾನ) ಬಲ್ಲಾಳ ದೇವನ ತೊತ್ತಿನ ಮಕ್ಕಳು ತಿಪ್ಪರಸ, ಭೈರವದೇವ, ಬೊಮ್ಮರಸರು ದಾನ ಕೊಟ್ಟ ವಿಷಯವಿದೆ.

೧೪. ೧೨ನೇ ಶತಮಾನದ ಬಾಗಳಿಯ ಒಂದು ಕಿರುಶಾಸನದಲ್ಲಿ ''ತೊಳ್ತು ಬದಿರದಾಸಿ'' ಎಂಬ ಅಸ್ಪಷ್ಟ ಮಾತಿದೆ.

೧೫. ತೊಟ್ಟಕಲ್ಲು ಚಾವೋಜ ''ಮಹಾಜನ ನೂರಿಪ್ಪದಿಂಬರ ತೊತ್ತು'' ಆಗಿದ್ದನೆಂದು ಕ್ರಿ.ಶ. ೧೨೬೨ರ ಶಾಸನದಲ್ಲಿದೆ. ಶಿಲ್ಪಿಯಂಥ ಕರಕುಶಲ ಕರ್ಮಿಗಳು ಅಗ್ರಹಾರದ ಬ್ರಾಹ್ಮಣರಿಗೆ ತೊತ್ತುಗಳಂತೆ ಸೇವೆ ಮಾಡಬೇಕಿತ್ತು.

೧೬. ಬೀದರದ ಒಂದು ತ್ರುಟಿತ ಶಾಸನದಲ್ಲಿ ''ಲಕ್ಷ್ಮಿ ತೊತ್ತಾಗಿ'' ಎಂಬ ಮಾತಿದೆ (೧೩ನೇ ಶತಮಾನ).

೧೭. ಮಂಡ್ಯ ತಾಲೂಕು ಮರಡಿಪುರದ ಕ್ರಿ.ಶ. ೧೩೦೫ರ ಶಾಸನ ಅಪರೂಪದ್ದು. ಎಮ್ಮೆಯ ಕೇತನಹಟ್ಟಿ ಎಂಬ ಹಳ್ಳಿಯನ್ನು ಶಿವಪುರವನ್ನಾಗಿ ಮಾಡಿ (ಅಗ್ರಹಾರದಂತೆ) ಕಲಿದೇವರಿಗೆ ಮತ್ತು ಅಲ್ಲಿಯ ಭಕ್ತರಿಗೆ ವೃತ್ತಿಗಳನ್ನು ಹಂಚುತ್ತಾನೆ, ಮಹಾಸಾಮಂತ ನಾಗಯ್ಯ. ಈತ ಶರಣರ ದಾಸನಾಗಿದ್ದ.

ದಾನ ಪಡೆದ ಭಕ್ತರಲ್ಲಿ ಒಬ್ಬ ವೀರಬಮ್ಮಯ್ಯ 'ಆಟಕೇಶ್ವರ ದೇವರ ತೊತ್ತಾ'ಗಿದ್ದ. ಹೀಗೆಯೇ ಬೇರೆ ಹಲವು ದೇವರುಗಳ ಜತೆ ಕೆಲವು ವ್ಯಕ್ತಿಗಳ ಹೆಸರಿದ್ದು, ಇವರು ಆಯಾ ದೇವರ ತೊತ್ತುಗಳಾಗಿದ್ದರೆಂದು ಗೊತ್ತಾಗುತ್ತದೆ. ಈ ಹೆಸರುಗಳು, – ಚೂಡಮ ದೇವರ ಅಂತಯ್ಯ, ಮಲ್ಲಿನಾಥ ದೇವರ ಜಕ್ಕಯ್ಯ, ಸೋಮನಾಥ ದೇವರ ಕೇತಯ್ಯ, ಅಪ್ಪಯ್ಯ, ಮಲ್ಲಿನಾಥ ದೇವರ ಏಚಯ್ಯ, ರಾಮನಾಥ ದೇವರ ಹೊಯಿಸಣದಾಸಿ, ಚೂಡಮ ದೇವರ ಮಾಚಯ್ಯ, ರಿಂಕನಾಥ ದೇವರ ಹೊನ್ನಯ್ಯ, ಚೂಡಮದೇವರ ಲೆಂಕ ಬೂವಣ್ಣ.

ಬಹುತೇಕ ಕೆಳಜಾತಿಗಳ ಈ ಶಿವಭಕ್ತರು ಶೈವದೇಗುಲಗಳ ಸೇವೆ ಮಾಡಿಕೊಂಡಿದ್ದವರು. ಆದರೆ ಈ ಸೇವೆಯ ಸ್ವರೂಪವೇನೆಂಬುದು ಗೊತ್ತಾಗುವುದಿಲ್ಲ. ಕೆಲವು ಸಲ 'ಮಿಲಿಟೆಂಟ್' ಕ್ರಮಗಳಿಗೂ ಇವರು ಮುಂದಾಗುತ್ತಿದ್ದರು. ಕಾಳಾಮುಖ ಮತ್ತು ವೀರಶೈವ ಚಳುವಳಿಯ ಪ್ರಭಾವದಿಂದ ಉಂಟಾದ ಆರ್ಥಿಕ ಪರಿವರ್ತನೆಯ ಪ್ರಕ್ರಿಯೆಯಲ್ಲಿ ಈ ತೊತ್ತುಗಳ ವಿಷಯ ಚರ್ಚಿಸಬೇಕಿದೆ. ಏಕೆಂದರೆ ಇವರಿಗೆ ವೃತ್ತಿಗಳು (ಖಾಸಗಿ ಆಸ್ತಿ) ದೊರಕುತ್ತಿವೆ. ಕೇತನಹಟ್ಟಿಯ ಇಡೀ ಆಸ್ತಿಯ ಆದಾಯದ ಹಂಚಿಕೆಯಲ್ಲಿ ಇವರೆಲ್ಲ ಪಾಲುದಾರರು. ಅಗ್ರಹಾರ ಪರಿಕಲ್ಪನೆಗೆ ಪ್ರತಿಯಾಗಿ ಶೈವವು ಕಂಡುಕೊಂಡ ಪರಿಕಲ್ಪನೆ 'ಶಿವಪುರ'. ಶಿವಪುರದ ವೃತ್ತಿಗಳನ್ನು ಜಾತಿ-ಭೇದವಿಲ್ಲದಂತೆ ಹಂಚಲಾಗುತ್ತಿತ್ತು. ಅಗ್ರಹಾರಗಳಲ್ಲಾದರೆ ಆಸ್ತಿಯ ಒಡೆಯರು ಬಹುತೇಕ ಬ್ರಾಹ್ಮಣರು.

೧೮. ಮಾಗಡಿ ತಾಲೂಕು ಹೆಬ್ಬಳಲಿನ ಕ್ರಿ.ಶ. ೧೩೧೫ರ ತ್ರುಟಿತ ಶಾಸನದಲ್ಲಿ ದೇವರ ತೊತ್ತಿನ ಪ್ರಸ್ತಾಪವಿದೆ.

೧೯. ದೇವನಹಳ್ಳಿ ತಾಲೂಕು ನಲ್ಲೂರಿನ ಕ್ರಿ.ಶ. ೧೩೮೬ರ ಶಾಸನ ಚಿಕ್ಕ ಅಂಕಿಯ ನಾಯಕ ತಿರುಮಲೆನಾಥ ದೇವರಿಗೆ ಮಾಡಿದ ತೊತ್ತು ಕೆಲಸವನ್ನು ನಿರೂಪಿಸುತ್ತದೆ.

ಈವರೆಗಿನ ದಾಖಲೆಗಳು ದೇವರು, ದೊರೆಗಳು, ಅಗ್ರಹಾರ ಬ್ರಾಹ್ಮಣರ ಸೇವೆಯನ್ನು ನಿಷ್ಠೆಯಿಂದ ಮಾಡಿಕೊಂಡಿದ್ದ ವಿಶೇಷ ವ್ಯಕ್ತಿಗಳಿಗೆ 'ತೊತ್ತು' ಎಂಬ ಪದ ಬಳಕೆಯಾಗಿರುವ ಸಾಧ್ಯತೆಯನ್ನು ಕಾಣಿಸುತ್ತವೆ. ಇವರು ಇತರ ಸೇವಕರಂತಲ್ಲ, ತಮ್ಮ ಪ್ರಾಣವನ್ನು ಲೆಕ್ಕಿಸದೆ ತಮ್ಮ ಒಡೆಯರ ಸೇವೆ ಮಾಡಿಕೊಂಡಿರುತ್ತ, ಅವರ ತೊತ್ತುಗಳು ಎಂದು ಕರೆಸಿಕೊಳ್ಳುವಲ್ಲಿ ಸಾರ್ಥಕತೆ ಪಡೆಯುತ್ತಿದ್ದರೆಂದು ತೋರುತ್ತದೆ. ತೊತ್ತು ಇಲ್ಲಿ ಸ್ವಾಮಿನಿಷ್ಠೆಯ ಅತಿರೇಕವನ್ನು ಸೂಚಿಸುತ್ತದೆ.

ಬಸವಣ್ಣ ಶಿವನಿಗೆ ಮತ್ತು ಶಿವಭಕ್ತರಿಗೆ ಈ ಬಗೆಯ ಸ್ವಾಮಿನಿಷ್ಠೆಯನ್ನು ತೋರಿಸುತ್ತಿದ್ದ



ಹಿನ್ನೆಲೆಯಲ್ಲಿ ತಾನು ಅವರ ತೊತ್ತು ಎಂದು ಪದೇ ಪದೇ ಹೇಳಿಕೊಳ್ಳುತ್ತಾನೆಂಬುದನ್ನು ಸ್ಮರಿಸಬಹುದು.

**ಆರ್ಥಿಕ ವಿಷಯದಲ್ಲಿ ತೊತ್ತು**

೧. ಕುಣಿಗಲ್ ತಾಲೂಕು ಕೊತ್ತಗೆರೆಯ ಕ್ರಿ.ಶ. ೧೧೫೭ರ ಒಂದು ಶಾಸನ ಸಮಸ್ತ ಸುಂಕಗಳಲ್ಲಿ ತೊತ್ತನ್ನು ಸೇರಿಸಿವೆ. ಎಮ್ಮೆ, ಎತ್ತು, ಪಶು, ತೊತ್ತು, ಕಟ್ಟಿನಬಂಡಿ ಇಲ್ಲಿರುವ ಸುಂಕಗಳ ಹೆಸರು.

೨. ಹುಣಸೂರು ತಾಲೂಕು ಧರ್ಮಾಪುರದಲ್ಲೂ ತೆರಿಗೆಗಳ ಪಟ್ಟಿಯಲ್ಲಿ 'ತೊತ್ತು ದೆರೆ'ಯನ್ನು ನಮೂದಿಸಿವೆ. (E.C. 4 ಕ್ರಿ.ಶ. ೧೧೬೨) ಇಲ್ಲಿರುವ ಇತರ ತೆರಿಗೆಗಳು ಕುಂಬಾರದೆರೆ, ಅಗಸದೆರೆ, ಭಂಡಿದೆರೆ, ವೊಡ್ಡದೆರೆ, ಮೇವದೆರೆ, ಸಾವದೆರೆ, ನಾವಿದದೆರೆ, ಉರುವಲುದೆರೆ ಮುಂತಾದುವು. ತೊತ್ತುಗಳನ್ನು ಇಟ್ಟುಕೊಂಡು ದುಡಿಸುತ್ತಿದ್ದ ಒಡೆಯರು ಕೊಡಬೇಕಿದ್ದ ತೆರಿಗೆ 'ತೊತ್ತುದೆರೆ'. ಇಲ್ಲಿರುವ ತೆರಿಗೆಗಳಲ್ಲಿ ಕುಂಬಾರ, ಮೇದ, ನಾವಿದ, ಅಗಸ, ಒಡ್ಡರು ಮೊದಲಾದ ಶ್ರಮಿಕರು ನೀಡುತ್ತಿದ್ದವೂ ಸೇರಿವೆ.

೩. ಚನ್ನಮಾನಹಳ್ಳಿಯನ್ನು ಪಟ್ಟಣವನ್ನಾಗಿ ಮಾಡಿ ಸಂತೆ ಕಟ್ಟಿಸಿದಾಗ 'ತೊತ್ತುನೆತ್ತು ಕೊಂಡು' ಎಂಬ ಅರ್ಥ ಗೊತ್ತಾಗದ ಮಾತು ಬರುತ್ತದೆ. (ಚನ್ನಪಟ್ಟಣ ತಾಲೂಕು ಕ್ರಿ.ಶ. ೧೩೧೭)

೪. 'ಹುಟ್ಟಿದ ತೊತ್ತಿಗೆ ಅರೆವಿಲ್ಲ' ಎಂಬ ವಾಕ್ಯ ಮಾಗಡಿ ತಾಲೂಕು ಕಲ್ಯದ ೧೩೪೧ರ ಶಾಸನದಲ್ಲಿದೆ.

೫. ಬೇಲೂರಿನ ಕ್ರಿ.ಶ. ೧೩೮೨ರ ಮಹತ್ವದ ಶಾಸನದಲ್ಲಿ ಕೇಶವ ದೇಗುಲಕ್ಕೆ ಸಾಲು ಮೂಲೆಯ ಹಲವು ವ್ಯಾಪಾರಿಗಳು ತಮ್ಮ ವಸ್ತುಗಳ ಮೇಲಿನ ಕರದ ಆದಾಯದಲ್ಲಿ ನಿರ್ದಿಷ್ಟ ಪಾಲನ್ನು ಕೊಡುವ ವ್ಯವಸ್ಥೆ ಮಾಡಿಕೊಂಡು ಪ್ರತಿವಸ್ತುವಿನ ವಿವರ ಕೊಡುತ್ತಾರೆ. ಬಟ್ಟೆ, ಕಿರಾಣಿ ಸಾಮಾನು, ಹುಲ್ಲು, ಕಟ್ಟಿಗೆ, ಬಂಡಿ, ಹೊಲೆಯ ಕುದುರೆ, ಖೆಡಿಲೆಯ ಕುದುರೆ, ನಾಡಕುದುರೆ, ಆನೆ, ಒಂಟೆ, ಎಮ್ಮೆ, ಎತ್ತು, ಆಡು, ಕುರಿಗಳ ಜತೆ, ''ತೊತ್ತಿರಿಗೆ ಪ್ರತಿಗದ್ಯಾಣ ಒಂದಕ್ಕಂ, ಬೇಳೆ'' ಎಂಬ ಪ್ರಸ್ತಾಪವಿದೆ.

ತೊತ್ತುಗಳನ್ನು ಮಾರಾಟ ಮಾಡಿದಾಗ ಬರುವ ಪ್ರತಿಗದ್ಯಾಣದಲ್ಲಿ ಬೇಳೆಯು (ಹಣದ ಭಾಗ) ದಾನವಾಗಿ ದೇವರಿಗೆ ಸಲ್ಲುತ್ತಿತ್ತು. ಅನೇಕ ದೇಶಗಳ ವ್ಯಾಪಾರಸ್ಥರು ಇದ್ದ ದೊಡ್ಡ ಪೇಟೆ ಬೇಲೂರು.

೬. ತೊತ್ತುಗಳು ಎತ್ತು, ಎಮ್ಮೆ, ಕುದುರೆ ಬಂಡಿಯಂಥ ಪ್ರಾಣಿ ಮತ್ತು ನಿರ್ಜೀವ ವಸ್ತುಗಳ ಜತೆ ಸೇರಿಸುವಷ್ಟು ನಿಕೃಷ್ಟರಾಗಿದ್ದರು. ಕುದುರೆ ಬಂಡಿಗಳಂತೆ ತೊತ್ತುಗಳಿಗೂ ಸುಂಕವಿರುತ್ತಿತ್ತು. ಕೊಳ್ಳೇಗಾಲ ತಾಲೂಕು ಸಿಂಗನಲ್ಲೂರು ಗ್ರಾಮದ (EC 4) ಕ್ರಿ.ಶ. ೧೪೩೮ರ ಶಾಸನದಿಂದಲೂ ತೊತ್ತುಗಳು ಮಾರಾಟದ ಸರಕಾಗಿದ್ದುದನ್ನು ತಿಳಿಯಬಹುದು. ಸಿಂಗನಲ್ಲೂರ ಶಿವನಂತಕಾರ ದೇವರಿಗೆ ೫೬ ದೇಶಗಳ ವ್ಯಾಪಾರಿಗಳು ಅನೇಕ ಸುಂಕಾದಾಯಗಳನ್ನು ದಾನ ನೀಡುತ್ತಾರೆ. ಅವುಗಳಲ್ಲಿ ''ಕುದುರೆ, ಬಂಡಿ, ತೊತ್ತು...'' ಸೇರಿದ್ದವು.

೭. ಮದಗಲ್ಲು ಸಂತೆಯಲ್ಲಿ ''ಎತ್ತು, ತೊತ್ತು, ಕುದುರೆ, ಕೊಂಡರೂ ಮಾರಿದರೂ ಸರ್ವಮಾನ್ಯ'' ಎಂದು ಸುಂಕ ರಿಯಾಯಿತಿಯನ್ನು ಸೂಚಿಸಿವೆ. (ಬೋರಿಂಗ ಪೇಟೆ ತಾಲೂಕು ೧೩ ನೇ ಶತಮಾನ)

೮. ಕ್ರಿ.ಶ. ೧೪೧೧ರ ಮಾಯಿಸಂದ್ರ (ಆನೇಕಲ್ ತಾಲೂಕು) ಶಾಸನದಲ್ಲೂ ಕೂಡ ಕತ್ತೆ, ಕುದುರೆ, ತೊತ್ತು, ಮದುವೆಯ ಸುಂಕ ಮುಂತಾದವು ಸರ್ವಮಾನ್ಯವೆಂದು ಸಂತೆಯನ್ನು ಕಟ್ಟಿಸಿದಾಗ ಮಾಡಿದ ವ್ಯವಸ್ಥೆಯನ್ನು ಹೇಳಿವೆ.

೯. ಕ್ರಿ.ಶ. ೧೪೧೭ರ ಒಂದು ತ್ರುಟಿತ ಶಾಸನ ರತ್ನಾಪುರದ (ಹುಣಸೂರು ತಾಲೂಕು, E.C. 4) ಕಾಯಿದೆ ಕಾನೂನನ್ನು ವಿವರಿಸುವಾಗ ಭಂಡಾರದ್ರೋಹ, ಎತ್ತ ಕದ್ದವ, ತೊತ್ತ ಕದ್ದವ, ಆವ ಕರವ ಕದ್ದವನಾದರೂ... ಎಂದು ಪ್ರಸ್ತಾಪಿಸುತ್ತದೆ.

ತೊತ್ತುಗಳನ್ನು ಕೂಡ ಎತ್ತು ಮುಂತಾದ ಪ್ರಾಣಿಗಳಂತೆ, ಕರಗಳಿಂದ ತಪ್ಪಿಸಲಿಕ್ಕೆ ಕುತಂತ್ರ (ಕದಿ) ಮಾಡುತ್ತಿದ್ದರು. ೧೦-೧೧. ಗೌನಿವಾರಿಪಲ್ಲಿ ಮತ್ತು ಕದಿರಿಯ ಶಾಸನಗಳಲ್ಲಿ (ಕ್ರಿ.ಶ. ೧೪೧೮, SII. IX-II) ಎತ್ತು, ಎಮ್ಮೆ ತೊತ್ತು, ಭಂಡಿಯ ಭತ್ತದ ಸುಂಕಗಳ ಉಲ್ಲೇಖವಿದೆ.

**ಸಾಮಾಜಿಕ ಸಂಬಂಧದಲ್ಲಿ**

೧. ಬೇಲೂರು ತಾಲೂಕು ಬಿಟ್ಟರವಳ್ಳಿಯ ೧೨ನೇ ಶತಮಾನದ ಒಂದು ಶಾಸನದಲ್ಲಿ ''ಅವರ ತೊತ್ತಿನ ಮಕ್ಕಳಿಗೆ ಭೂಮಿ ಸಲ್ಲುದು'' ಎಂದಿರುವುದು ಮಹತ್ವದ ದಾಖಲೆ. ಸ್ವಂತ ಮಕ್ಕಳಂತೆ, ತೊತ್ತಿನ ಮಕ್ಕಳನ್ನೂ ಆಸ್ತಿಯಲ್ಲಿ ಪಾಲುದಾರರನ್ನಾಗಿ ಮಾಡುವ ಮೂಲಕ, ಗೌರವದ ಬದುಕು ನಡೆಸಲು ಆಸ್ಪದ ಕಲ್ಪಿಸಲಾಗುತ್ತಿತ್ತು. ಆದರೆ ತೊತ್ತುಗಳಿಗೆ ಈ ಸ್ಥಿತಿ ಇರಲಿಲ್ಲ. (EC 9)

೨. ಇದೇ ತರದ ವಿಚಾರ ಬಳ್ಳೂರಿನ ಶಾಸನದಲ್ಲೂ ಇದೆ. (ಬೇಲೂರು ತಾಲೂಕು ೧೨ನೇ ಶತಮಾನ E.C.9) ಈ ತ್ರುಟಿತ ಶಾಸನದಲ್ಲಿ ''ಬುಮಿ ಹೆಣ್ಣಿನ... ತೊತ್ತಿನ ಮಕ್ಕಳಿಗೆ ಸಲು...'' ಎಂದು ಈ ಉಲ್ಲೇಖ.

೩. ಬೇಲೂರು ತಾಲೂಕು ಬಿಟ್ಟರವಳ್ಳಿಯ ೧೨ನೇ ಶತಮಾನದ ಮತ್ತೊಂದು ಶಾಸನದ ಕೊನೆಗೆ, ''ದೇವ ಗವುಡನ ಮಕ್ಕಳ್ ತೊತ್ತಿನ ಮಕ್ಕಳಿಗಂ...'' ಎಂದಿದ್ದು, ಮೇಲಿನ ಆಶಯವನ್ನೇ ಒಳಗೊಂಡಿರುವಂತಿದೆ.

ತೊತ್ತಿನ ಮಕ್ಕಳಿಗೆ ಆಸ್ತಿ ಸಲ್ಲಬೇಕು ಎಂಬ ಉಲ್ಲೇಖಗಳು ಅನೇಕ ಸಲ ಕಂಡುಬರುವುದನ್ನು ನೋಡಿದರೆ ಈ ಪದ್ಧತಿ ವ್ಯಾಪಕವಾಗಿತ್ತು ಎಂಬುದು ಗೊತ್ತಾಗುತ್ತದೆ. ಇದು ಅಪರೂಪದ, ಅಪವಾದಾತ್ಮಕ ಘಟನೆಯಾಗಿರಲಿಲ್ಲ. ಈ ಪದ್ಧತಿ ಬೆಳೆದುಬರಲು ಕಾರಣಗಳೇನು ? ಒಡೆಯರಿಗೆ ಗುಲಾಮ ಸ್ತ್ರೀಯರು ನಿಷ್ಠೆಯಿಂದಿರುತ್ತಿದ್ದರೇ ? ಒಡೆಯರ ಸ್ವಂತ ಹೆಂಡತಿಯರಿಗಿಂತ ಇಂಥ ತೊತ್ತುಗಳು ಪ್ರೀತಿಗೆ ಪಾತ್ರರಾಗಿರುತ್ತಿದ್ದರೇ ? ಇವೆಲ್ಲ ಬರಿಯ ಊಹೆ. ಊಳಿಗಮಾನ್ಯ ಕಾಲದ ಕೊನೆಯ ಭಾಗದಲ್ಲಿ ಆರ್ಥಿಕ ಸಂಬಂಧಗಳಲ್ಲಿ ಆಗುತ್ತಿದ್ದ ಸೂಕ್ಷ್ಮ ಬದಲಾವಣೆಗಳಿಗೆ ಇಂಥ ನಿದರ್ಶನಗಳು ಸಾಕ್ಷಿ.

೪. ಹಾಸನ ತಾಲೂಕು ದೊಡ್ಡಗದ್ದವಳ್ಳಿಯ (E.C. 8) ಕ್ರಿ.ಶ. ೧೨೧೬ರ ಶಾಸನದಲ್ಲಿ ಪೆರುಮಾಳ ದೇವಕೊಂಡ ಆಸ್ತಿಯನ್ನು ಮಕ್ಕಳು ತಪ್ಪದೆ, ತೊತ್ತಿನ ಮಕ್ಕಳಿಗೆ ಚಂದ್ರನುಳ್ಳನಕ ಭೂಮಿ ಸಲ್ಲಬೇಕು ಎಂದು ಪ್ರಸ್ತಾಪಿಸಲಾಗಿದೆ. ಅಂದರೆ ತೊತ್ತಿನ ಮಕ್ಕಳ ವಂಶಜರು ಹೀಗೆ ದೊರಕಿದ ಆಸ್ತಿಯ ಆನುವಂಶಿಕ ಹಕ್ಕುದಾರರಾಗುತ್ತಿದ್ದರು. ಹೀಗೆ ತೊತ್ತುತನದಿಂದ ಬಿಡುಗಡೆಗೊಳ್ಳಲು ಒಂದು ಅವಕಾಶವಿತ್ತೆಂದು ತೋರುತ್ತದೆ. ಆದರೆ ತೊತ್ತಿನ ಮಕ್ಕಳಿಗೆ, ಹೆಂಡತಿಯಲ್ಲಾದ ಮಕ್ಕಳಿಗೆ ದೊರಕುತ್ತಿದ್ದಷ್ಟೇ ಪ್ರಮಾಣದ ಪಾಲು ಸಿಗುತ್ತಿತ್ತೆ ಎಂಬುದು ಸ್ಪಷ್ಟವಿಲ್ಲ.

೫. ಮಂಡ್ಯ ತಾಲೂಕಿನ (E.C. 7) ಕ್ರಿ.ಶ. ೧೨೫೧ರ ಶಾಸನ ವಿಶೇಷವಾಗಿ ಗಮನ ಸೆಳೆಯುತ್ತದೆ. ಶಿವಪುರದ ಆರ್ಥಿಕತೆಯ ಒಂದು ಮಗ್ಗುಲನ್ನು ಈ ಶಾಸನ ಪರಿಚಯಿಸುತ್ತದೆ.

ವೀರಮಲಯ್ಯನೆಂಬ ಶಿವಭಕ್ತ ತನ್ನ ಪ್ರಾಣವನ್ನು ಸಮರ್ಪಿಸಿ ಮಾದೆಯ ನಾಯಕನೆಂಬವನಿಂದ ಈ ಶಿವಪುರವನ್ನು ಗೆಲ್ಲುತ್ತಾನೆ. ಈಗ ಇದು 'ಸೋಮನಾಥಪುರ'ವೆಂಬ ಹೊಸ ಅಭಿಧಾನ ಪಡೆಯುತ್ತದೆ. ಈ ಪುರದ ಆಸ್ತಿಯನ್ನು ೩೪ ಶಿವಭಕ್ತರಿಗೆ ವೃತ್ತಿಗಳನ್ನಾಗಿ ಹಂಚಲಾಗುತ್ತದೆ. ಈ ವೃತ್ತಿಗಳನ್ನು ವೃತ್ತಿವಂತರ ಹೆಣ್ಣು ಮಕ್ಕಳು. ಹೆಂಡಿರು, ತೊತ್ತಿನ ಮಕ್ಕಳು ಭಕ್ತರಾಗಿ ಅನುಭವಿಸುವರು ಎಂಬ ಉಲ್ಲೇಖ ವಿಶೇಷದ್ದು.

ತೊತ್ತುಗಳ ಮಕ್ಕಳನ್ನು ಹೆಂಡಿರು, ಹೆಣ್ಣುಮಕ್ಕಳ ಜತೆ ಭಕ್ತರಾಗಿ ಪರಿಗಣಿಸಬೇಕೆಂಬುದು ಮಹತ್ವದ ವಿಚಾರ. ತೊತ್ತುತನ ನಾಶವಾಗಿರಲಿಲ್ಲವಾದರೂ ಅವರ ಮಕ್ಕಳಿಗೆ ಆಸ್ತಿ ದೊರಕುವ ಮೂಲಕ ನಾಶವಾಗುತ್ತಿತ್ತು. ಸ್ತ್ರೀ ಅಸಮಾನತೆ ಮತ್ತು ತೊತ್ತುತನದಂಥ ವರ್ಗ ಶೋಷಣೆಯ ವಿರುದ್ಧ ಕೇಳುತ್ತಿರುವ ಇಂಥ ದನಿಗಳು ಅಪರೂಪದವೇ.

ಈ ಶಾಸನದಲ್ಲಿ ಉಕ್ತವಾದ ವೃತ್ತಿವಂತ ಭಕ್ತರ ಹೆಸರುಗಳು ಭಿನ್ನ ಜಾತಿಗಳನ್ನು ಒಳಗೊಂಡಿವೆ. ಈ ಪಟ್ಟಿಯಲ್ಲಿ ಅಕ್ಕಸಾಲಿಗನೂ ಇದ್ದಾನೆ. ಮಹಿಳೆಯೂ ಇದ್ದಾಳೆ. ಅಸಂಖ್ಯಾತ ಮಹಾ-ಗಣಂಗಳು ಎಂದು ಈ ವೃತ್ತಿವಂತ ಭಕ್ತರನ್ನು ಹೆಸರಿಸಿದೆ.

ಮಂಡ್ಯ ಜಿಲ್ಲೆಯಷ್ಟು ದೂರಕ್ಕೆ ಮತ್ತು ಶತಮಾನಗಳ ಅಂತರದಲ್ಲಿ ವೀರಶೈವ ಚಳುವಳಿಯ ಪ್ರಭಾವ ಕಂಡುಬರುತ್ತಿರುವುದಕ್ಕೆ ಈ ಶಾಸನವೂ ಒಂದು ಸಾಕ್ಷಿ.

೬. ಆದರೆ ತೊತ್ತುಗಳ ಸ್ಥಿತಿ ಎಷ್ಟು ಭೀಕರವಾಗಿತ್ತು ಎಂಬ ಅಂಶವನ್ನು ಮರೆಯುವಂತಿಲ್ಲ. ಇದುವೆ ತೊತ್ತುಗಳ ಜೀವನದ ಆ ಕಾಲದ ಮುಖ್ಯ ವೈರುಧ್ಯ. ಮೇಲಿನ ಶಾಸನದ ಕಾಲದ ಸುಮಾರಿನ (ಕ್ರಿ.ಶ. ೧೨೫೩) ಮಳವಳ್ಳಿ ತಾಲೂಕು ಗೌಡಗೆರೆ ಗ್ರಾಮದ ಶಾಸನ ಪಟ್ಟಣ ಸ್ವಾಮಿಗಳಿಗೆ ಕೊಟ್ಟ ದೇವಮಾನ್ಯದ ವಿಷಯವನ್ನು ತಿಳಿಸುತ್ತದೆ. ಕೊನೆಗೆ ''ಅಣ್ಣನೊಡನೆ ತಮ್ಮಂಗೆ'' ಮುಂತಾಗಿ ಹೇಳಿ ''ಬಿಸುಡುವುದು'' ಎಂಬ ಮಾತಿದೆ. ಇದು ತೊತ್ತಿನ ಹೆಣಕ್ಕೆ ಅನ್ವಯಿಸುತ್ತಿತ್ತು ಎಂಬುದನ್ನು ಇತರ ಸಂದರ್ಭಗಳಿಂದ ಖಚಿತವಾಗಿ ಊಹಿಸುವಂತಿದೆ (E.C.7).

೭. ಈ ವಿಚಾರ ಮಂಡ್ಯ ತಾಲೂಕಿನ ಹಲವಾರು ಗ್ರಾಮ ಶಾಸನಗಳಲ್ಲಿ ಪುನರುಕ್ತವಾಗುತ್ತದೆ. ಉದಾಹರಣೆಗೆ ಕ್ರಿ.ಶ. ೧೨೯೭ರ ಮಳವಳ್ಳಿ ತಾಲೂಕು ಸುಜ್ಜಲೂರು ಶಾಸನದಲ್ಲಿ ಹಳ್ಳಿಯನ್ನು ಶೆಟ್ಟಿಗುತ್ತಗೆ ಮಾಡುವ ಸಂದರ್ಭವನ್ನು ವಿವರಿಸುತ್ತ ''ಅಣ್ಣ ನೊಡವೆ ತಮ್ಮಂಗೆ'' (ಅಣ್ಣ ಸತ್ತರೆ) ''ತೊತ್ತುಗೆ ಹಸರದ ಯೆಳದಲೆ ನಾಟುವರು'' ಎಂಬ ಅರ್ಥ ಸ್ಪಷ್ಟವಿಲ್ಲದ ವಾಕ್ಯವಿದೆ. ಆದರೂ ತೊತ್ತಿನ ಅನಾಥ ಹೆಣದ ವಿವರ ಇಲ್ಲಿರುವಂತಿದೆ. ಮುಂದೆ ''ಸೆಟಿಕಾರನೆರ್ದು ಕೊಂಡು ನೀರು ಬಿಡು ಸರದಿ ಹೊರೆಯ ಹೊಯಿದು ಸುಡುವ'' ಎಂಬ ವಾಕ್ಯ ಗರತಿ-ಸಾಯುವಾಗ ಶೆಟ್ಟಿಕಾರ ಮೊದಲು ನೀರುಬಿಡುವುದು, ಬಾರಿಸುತ್ತ ಮೆರವಣಿಗೆಯಲ್ಲಿ ಹೆಣ ಒಯ್ದು ಸುಡುವುದು ಎಂಬ ಧ್ವನಿ ಇರುವಂತಿದೆ.

೮. ೧೩ನೇ ಶತಮಾನದಲ್ಲಿ ಆನೆಗೊಂದಿಯಲ್ಲಿ (ಗಂಗಾವತಿ ತಾಲೂಕು) ಕುಂಬಾರರ ಮಹತ್ವದ ತಾಮ್ರ ಶಾಸನವೊಂದು ಹುಟ್ಟಿತು. ಪುರಾಣ ಕತೆ ಹೇಳುವ ಶಾಸನ, ಕುಂಬಾರರನ್ನು ಸ್ತುತಿಸುತ್ತ ''ತೊತ್ತಿನಲಿರ್ದನನೆತ್ತಿ ಕಳವರುಂ'' ಎಂದು ಬಿರುದೆಂಬಂತೆ ವಿವರಿಸುತ್ತದೆ. ತೊತ್ತಾಗಿರುವವರನ್ನು ಮುಕ್ತರನ್ನಾಗಿ ಮಾಡುವ ಪುಣ್ಯ ಕೆಲಸ ಮಾಡುವವರು ಎಂದು ಇದಕ್ಕೆ ಅರ್ಥ. ತೊತ್ತುಗಳ ಋಣ ವಿಮೋಚನೆ ಮಾಡುವಂಥ ಮಾನವೀಯ ಗುಣವುಳ್ಳ ಕುಂಬಾರರು ಆರ್ಥಿಕವಾಗಿ ತುಂಬ ಪ್ರಬಲವೇ ಇರಬೇಕು.

೯. ಒಹಿಲಯ್ಯನೆಂಬವನ ಮಗಳು ಸೋಮನಾಥ ದೇವರಿಗೆ ''ತೊತ್ತುತನ ಮಾಡಿ ಉಂಬುದು'' ಎಂದು ಕುಷ್ಟಗಿ ತಾಲೂಕು ಪುರದ ೧೩ನೇ ಶತಮಾನದ ಶಾಸನ ಹೇಳುತ್ತದೆ. ಈ ತೊತ್ತುತನದ ಸ್ವರೂಪವೇನಿತ್ತೊ ತಿಳಿಯದು. (ಕೊಪ್ಪಳ ಜಿಲ್ಲೆ, ಕ.ವಿ.ಶಾ.ಸಂ. ೭)

೧೦. ಮಹಿಳೆಯರಿಗೆ, ಸ್ತ್ರೀ ತೊತ್ತುಗಳ ಮಕ್ಕಳಿಗೆ ಆಸ್ತಿ ದೊರಕಬೇಕೆಂಬ ರಿವಾಜು ಕೊಡಗಿನ ಭಾಗ ದಲ್ಲೂ ಅಸ್ತಿತ್ವದಲ್ಲಿತ್ತು. ಸೋಮವಾರಪೇಟೆ ತಾಲೂಕು ಚೌಡ್ಲು ಎಂಬಲ್ಲಿಯ ೧೩ನೇ ಶತಮಾನದ ಶಾಸನದಲ್ಲಿ ''ಕುಂದೂರಿಂಗೆ ಪೂರ್ವದಲ್ಲಿ ಹೆಣ್ಣಿಂಗೆ ಸಲುವ ಸ್ವಾಸ್ತೆ ಮರಿಯಾದೆ ಕೊಟ್ಟ ಕ್ರಮವೆಂತೆಂದಡೆ ಹೆಣ್ಣಿಂಗೆ, ಹೆಣ್ಣು ಮಕ್ಕಳಿಗೆ, ತೊತ್ತಿನ ಮಕ್ಕಳಿಗೆ ಸಲುವುದು.''

೧೧. ಮಳವಳ್ಳಿ ತಾಲೂಕು ಚಿಕ್ಕಮುಲಗೂಡಿನ ಕ್ರಿ.ಶ. ೧೩೦೦ರ ಶಾಸನ ಈ ಊರನ್ನು ಪಟ್ಟಣವನ್ನಾಗಿ ಮಾಡಿದ ಸಂದರ್ಭದಲ್ಲಿ ಹಾಕಿದ ಕಾನೂನುಗಳನ್ನು ತಿಳಿಸುತ್ತದೆ. ಒಡೆದಿರುವ ಈ ಶಾಸನದ ಪಾಠದ ಕೆಲಸಾಲು –

''ತೊತ್ತುನೆದು ಕೊಂ... ಸತ್ತಡೆ ಎಳದು ಹಾ...ದು. ಹೆಂಡತಿ ಸತ್ತಡೆ ಸುದ್ದಿ ಕಳಿಸುವುದು.'' ಬಹುಶಃ ಇದರ ಸರಿಯಾದ ಪಾಠ ''ತೊತ್ತನ್ನು ಕೊಂದರೆ ಅಥವಾ ಸತ್ತರೆ ಎಳೆದು ಹಾಕುವುದು. ಹೆಂಡತಿ ಸತ್ತರೆ ಅವಳ ಸಂಬಂಧಿ ಕರಿಗೆ ಸುದ್ದಿ ಕಳಿಸುವುದು.'' (ಮತ್ತು ಪದ್ಧತಿಯ ಪ್ರಕಾರ ಮರ್ಯಾದೆಯಿಂದ ಆಕೆಯ ಹೆಣ ಸಂಸ್ಕಾರ ಮಾಡಲಾ ಗುತ್ತಿತ್ತು). ತೊತ್ತನ್ನು ಕೊಲ್ಲುವುದು ಒಡೆಯರ ಹಕ್ಕೇ ಆಗಿತ್ತು. ಆದನ್ನು ಯಾರೂ ಪ್ರಶ್ನಿಸುತ್ತಿರುವಂತಿರಲಿಲ್ಲ.

೧೨. ಮದ್ದೂರು ತಾಲೂಕು (ಕ್ರಿ.ಶ. ೧೩೦೦) ತಿಪ್ಪೂರು ವ್ಯಾಪಾರಸ್ಥರು ತಮ್ಮ ಊರಿಗೆ ಹಾಕಿದ ಕಾನೂನುಗಳನ್ನು ತಿಳಿಸುತ್ತ – ಅಣ್ಣನ ಒಡವೆ... ಎಂಬ ಮಾಮೂಲು ಕಾನೂನುಗಳ ಜತೆ ''ಗಂಡನುಳ್ಳಡೆ ವಡವೆಯ ಹಳಿಗೆ, ಸುಡುವುದು. ತೊತ್ತಪ್ಪಡೆ ಎಳದು ಬಿಸುಡುವುದು'', ಎನ್ನುತ್ತಾರೆ. ಗಂಡನುಳ್ಳ ಗರತಿ ಸತ್ತರೆ ಆಕೆಯ ಒಡವೆಗಳನ್ನು ಹಳ್ಳಿಯ ಏಳ್ಗೆಗೆ ಕೊಟ್ಟು, ಮರ್ಯಾದೆಯಿಂದ ಆಕೆಯ ಹೆಣ ಸುಡುತ್ತಿದ್ದರು. ತೊತ್ತು ಸತ್ತರೆ ಹೆಣವನ್ನು ಎಳೆದು ತಗ್ಗುಗಿಗ್ಗುಗಳಲ್ಲಿ ಬಿಸಾಡುತ್ತಿದ್ದರು. ಪ್ರಾಣಿಗಳಂತೆ ಅನಾಥವಾದ ಆ ಹೆಣವನ್ನು ಹದ್ದು ಕಾಗೆ ಆಹಾರ ಮಾಡಿಕೊಳ್ಳುತ್ತಿದ್ದವಷ್ಟೇ.

೧೩. ಚನ್ನಪಟ್ಟಣ ತಾಲೂಕಿನ ಕ್ರಿ.ಶ. ೧೩೧೭ರ ಮಾಗೇನಹಳ್ಳಿಯ ಲಿಖಿತದ ಪ್ರಕಾರ ಹೊಯ್ಸಳ ವೀರ ಬಲ್ಲಾಳ ಈ ಊರನ್ನು ಪ್ರಭುಶೆಟ್ಟಿಗಳಿಗೆ ಕೊಡುತ್ತಾನೆ. ಮಾಮೂಲಿನಂತೆ ''ಅಣ್ಣನೊಡವೆ... ನಂತರ ಅಣ್ಣ ತಮ್ಮರಾರೂ ಇಲ್ಲದಿದ್ದರೆ ನೆಂಟರಿಷ್ಟರು, ತೊತ್ತಿನ ಮಗಂಗೆ ಮುಖ್ಯವಾಗಿ ಸಲುವುದು'' ಎಂದು ಬರುತ್ತದೆ. ಈ ಊರನ್ನು ಪಟ್ಟಣವನ್ನಾಗಿ ಮಾಡಿ ಸಂತೆಯನ್ನು ಕಟ್ಟುತ್ತಾರೆ. ಆಗ ಮಾಡಿದ ಕಟ್ಟಳೆಯಂತೆ ತಮ್ಮ ಸತ್ತರೆ ಅವನ ಒಡವೆ ಅಣ್ಣನಿಗೆ ಸಲ್ಲುವುದು, ಇಬ್ಬರೂ ಇಲ್ಲದಿದ್ದಾಗ ಸಮೀಪ ಬಂಧುಗಳಿಗೆ ಅಥವಾ ಅವರ ತೊತ್ತಿನ ಮಗನಿಗೆ ಆಸ್ತಿ ಸಲ್ಲುವುದು.

೧೪. ಚಿಕ್ಕಮಗಳೂರು ತಾಲೂಕು ಹಲಸಬಾಳು ಕ್ರಿ.ಶ. ೧೩೪೩ರ ಶಾಸನ. ಬಲ್ಲಾಳ ದೇವನಿಗೆ ಪಟ್ಟವಾದಾಗ ಹಲಸಬಾಳು, ಹಳ್ಳಿ ಹಿರೇಊರ ಗೌಡರುಗಳಿಗೆ ಕೊಟ್ಟ ಶಾಸನ : ''ಈ ಗೌಡಗಳಿಗೆ ಹಿದೌಠ ಇಲ್ಲೆಂದು ಬಾಳಿಕೆ ಸೇಸೆ ಇಲ್ಲೆಂದು, ಈ ಗೌಡುಗಳಿಗೆ ಮಕ್ಕಳು ಮಕ್ಕಳು, ತೊತ್ತಿನ ಮಕ್ಕಳಿಗೆ ಸಲುವುದೆಂದು'' ಹೇಳಿದೆ.

ಗೌಡರುಗಳಿಗೆ ಕೊಟ್ಟ ಸುಂಕ ತೆರಿಗೆ ವಿನಾಯಿತಿ ಅವರ ಮಕ್ಕಳು ತೊತ್ತುಗಳ ಮಕ್ಕಳಿಗೂ ಅನ್ವಯಿಸಿದೆ.

೧೫. ಮದ್ದೂರು ತಾಲೂಕು ಅರುವನಹಳ್ಳಿಯ ಕ್ರಿ.ಶ. ೧೩೭೪ರ ಶಾಸನದಲ್ಲಿ ದಾಯಾದಿಗಳ ಆಸ್ತಿಯ ಪಾಲುದಾರಿಕೆಯ ವಿವರಗಳಿವೆ.

''ಊರು, ಒಕ್ಕಲು, ಕೆರೆ, ತೋಟ, ಗದ್ದೆ, ಬೆದ್ದಲು, ವಸ್ತುವಾಹನ, ಬಂಗಾರ ಬೆಳ್ಳಿ, ಕಂಚು, ಮುಟ್ಟುಪತ್ರ, ಸಾಲ, ಎಮ್ಮೆ, ಎತ್ತು, ತೊತ್ತು, ದವಸ ಧಾನ್ಯ ಹಾಗೂ ಚಿನ್ನ ಮಾನಭತ್ತ'' ಈ ಎಲ್ಲ ವಸ್ತುಗಳನ್ನು ವಿಭಾಗಮಾಡಿ ಇಬ್ಬರ ನಡುವೆ ಹಂಚಲಾಗುತ್ತದೆ.

೧೬. ನಡಗಲ್‌ಪುರ ಶಾಸನದಲ್ಲಿ ''ತ... ಎಳೆದು ಬಿಸಾಡುವುದು...'' ಎಂಬ ಮಾತಿದೆ (ಮಳವಳ್ಳಿ ತಾಲೂಕು ೧೫೧೦ ಕ್ರಿ.ಶ.)

೧೭. ''ಗರತಿ ಸತ್ತಡೆ ಸುಡುವುದು ತೊತ್ತು ಸತ್ತರೆ ಹಕುದು'' ಎಂಬಲ್ಲಿ ಎಳೆದುಹಾಕುವುದು ಎಂದು ಅರ್ಥ. (ಮಳವಳ್ಳಿ ತಾಲೂಕು, ಬಸವನಪುರ ೧೫೧೩ರ ಶಾಸನ).

ಬ್ರಿಟಿಷರ ಆಗಮನ, ಆಧುನಿಕತೆಯ ಪ್ರವೇಶ (ಬಂಡವಾಳಶಾಹೀಕರಣ), ಸ್ವಾತಂತ್ರ್ಯಕ್ಕಾಗಿ ಹೋರಾಟ ಮುಂತಾದ ಚಾರಿತ್ರಿಕ ಘಟನೆಗಳಿಂದಾಗಿ ತೊತ್ತುತನ ನಾಶವಾಗುತ್ತ ಬಂದಿತು.

ಈ ಚರ್ಚೆಯುದ್ದಕ್ಕೂ ಬರುವ 'ತೊತ್ತು' ಗಂಡು ತೊತ್ತಲ್ಲ, ಹೆಣ್ಣು ತೊತ್ತು ಎಂಬುದು ತುಂಬ ಮುಖ್ಯ ವಿಚಾರ. ಬಸವಣ್ಣನ ವಚನಗಳಿಂದ ತಿಳಿದುಬರುವಂತೆ ಗಂಡಸರೂ ತೊತ್ತುಗಳಾಗುತ್ತಿದ್ದರು. ಆದರೆ ಹೆಣ್ಣುದೊತ್ತು ತುಂಬ ವ್ಯಾಪಕ ಪದ್ಧತಿಯಾಗಿತ್ತು.

ಎಸ್. ಎಸ್. ಹಿರೇಮಠ
ಪ್ರಾಂಶುಪಾಲರು, ಕೊಟ್ಟೂರೇಶ್ವರ ಕಾಲೇಜು
ಕೊಟ್ಟೂರು, ಬಳ್ಳಾರಿ ಜಿಲ್ಲೆ

## ನಂಬಿಕೆ

ಒಂಟಿತನ ನನ್ನ ಸುತ್ತೂ
ಹುಚ್ಚೆದ್ದು ಹರವಿದ ಕೂದಲಿನ ರಾಶಿಯಂತಿದೆ
ಸಾವಧಾನದಿ ನಿನ್ನ ಸಮಾಧಾನದ
ಬೆರಳುಗಳ ತುದಿಯಲ್ಲಿ
ಕೂದಲನ್ನು ನಯವಾಗಿ ಹೆಣೆದೆಯಾದರೇ
ನಿನ್ನ ಸನಿಹದ ಸವಿಯ ಬೆಂಬಲದಿ
ಕೆಚ್ಚೆದೆಯಲ್ಲಿ ಬಾನಲ್ಲಿ ತಾರೆಗಳ ಕೀಳಬಲ್ಲೆ
ಮಲ್ಲಿಗೆ ಮಾಲೆಯಾಗಿಸಿ
ಹೆರಳಲ್ಲಿ ಮುಡಿಯಬಲ್ಲೆ



ರೋಹಿಣೀ ಸತ್ಯ
ನಂ. ೩೫೦, ಸಂಪಿಗೆ ರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩



# ಈಶ್ವರ್ ಅಲ್ಲಾ ತೇರೋ ನಾಮ್

ಮಳೆಗಾಲದಲ್ಲಿ ತುಂಬಿಕೊಂಡು ಬೇಸಿಗೆಯಲ್ಲಿ ಸೊರಗಿ ಸಣ್ಣಗಾಗುವ ಘಟಪ್ರಭೆಯ ದಂಡೆಯ ಮೇಲೆ ಎದ್ದು ನಿಂತಿರುವ ಸಣ್ಣ ಗುಡ್ಡಕ್ಕೆ ಒರಗಿ, ಸ್ವಸ್ಥ ಕಾಲು ಚಾಚಿಕೊಂಡು ಕುಳಿತ ರಾಮಪುರ ತನ್ನ ಕಥೆಯನ್ನು ಬಹಳ ಹುರುಪಿನಿಂದ ಹೇಳುತ್ತಲೇ ಇರುತ್ತದೆ. ''ನನಗ ರಾಮಪುರ ಅಂತ ಹೆಸರ ಬರಲಿಕ್ಕೆ ಕಾರಣ ಸಾಕ್ಷಾತ್ ಆ ಶ್ರೀ ರಾಮಚಂದ್ರನ. ಹಿಂದ ರಾಮ, ಲಸುಮಣ್ಣ, ಸೀತವ್ವರು ವನವಾಸಕ್ಕ ಬಂದಾಗ ಇಲ್ಲಿಗೂ ಬಂದಿದ್ದರು. ರಣರಣ ಹೊಡಿಯೂ ಬಿಸಿಲಿನ ತಾಪಕ್ಕ ಪಾಪ ಸೀತವ್ವಗ ನೀರಡಿಕೆ ಆತು; ಆಗ ಶ್ರೀ ರಾಮಚಂದ್ರ ತನ್ನ ಬತ್ತಳಿಕೆಯೊಳಗಿಂದ ಒಂದ ಬಾಣ ತಗದು ನೆಲಕ್ಕೆ ಬಿಟ್ಟ. ಅಲ್ಲಿ ನೀರು ಚಿಲ್ಲನ ಅಂತ ಚಿಮ್ಮಿತು. ಅವ ಮಾಡಿದ ಆ ಹೊಂಡನ ಮುಂದ 'ರಾಮತೀರ್ಥ' ಅಂತ ಪ್ರಸಿದ್ಧಿಯನ್ನ ಪಡೀತು. ಅದರ ಹತ್ತಿರ ಇರೂ ನನಗ ರಾಮಪುರ ಅಂತ ಜನಾ ಕರದ್ರು. ಈಗಲೂ ಶ್ರಾವಣ ಮಾಸದಾಗ ದೂರದೂರದಿಂದ ಭಕ್ತಾದಿಗಳು ಬಂದು ಪುಣ್ಯಸ್ನಾನ ಮಾಡಿ ಇಲ್ಲಿಯ ನೀರನ್ನು ತೀರ್ಥ ಅಂತಂದು ಪ್ಲಾಸ್ಟಿಕ್ ಬಾಟ್ಲಿಯೊಳಗ ತುಂಬಿಕೊಂಡು ಹೋಗ್ತಾರ.'' ರಾಮಪುರ ಒಂದಿಷ್ಟು ಉಸಿರು ತೆಗೆದುಕೊಂಡು ಚಾಚಿದ ಎರಡೂ ಕಾಲಗಳಲ್ಲಿ ಒಂದನ್ನು ಮಡಿಚಿ ಮೊಳಕೈಯೂರಿ ಮತ್ತೆ ಮಾತು ಮುಂದುವರೆಸುತ್ತದೆ. ''ಹೊಳಿ ದಂಡಿ ಮ್ಯಾಲ ಎರಡೂ ಕಡೆ ಹಾಸುಗಲ್ಲ ಹಾಸ್ಯಾವಲ್ಲಾ ಅವುಗಳ ಮ್ಯಾಲ ತಟ್ಟೆಯಾಕಾರದ ಮೂರು ಗುಂಡಿ ಕಾಣ್ತಾವ. ಅಲ್ಲಿ ರಾಮ, ಲಸುಮಣ್ಣ, ಸೀತವ್ವರು ಊಟಾ ಮಾಡಿದ್ರಂತ. ಅಲ್ಲೇ ಪಕ್ಕದಲ್ಲಿ ಸಣ್ಣ ಗುಳಿಗಳದಾವಲ್ಲಾ, ಅಲ್ಲಿ ಅವರು ಎಲಿಯಡಿಕಿ ತಿಂದು ಉಗುಳಿದ್ರಂತ, ಅದರ ಗುರುತವು !!''

ಹೀಗೆ ರಾಮಾಯಣದ ಬೇರುಗಳನ್ನು ತನ್ನ ಎದೆಯಲ್ಲಿ ಹುದುಗಿಸಿಕೊಂಡು ಮಗ್ಗಲು ಬದಲಿಸುತ್ತ ಆರಾಮಾಗಿ ಮಲಗಿದ್ದ ರಾಮಪುರ ನಿದ್ದೆಗೆಟ್ಟು ಎದ್ದು ಕೂರುವಂಥ ಒಂದು ಘಟನೆ ನಡೆಯಿತು.

''ಕುದುಸಾಬನ ಮಗಳು ಶಬನವ್ವ ಗೌಡರ ರಮೇಶಪ್ಪನ ಜೊತಿ ಓಡಿ ಹೋಗ್ಯಾಳಂತ !!'' ಓಡಿ ಬಂದು ಏದುಸಿರು ಬಿಡುತ್ತಿದ್ದ ವಗ್ಗರ ಸೂರ್ಯಾ ಈ ಬಿಸಿ ಬಿಸಿ ಸುದ್ದಿಯನ್ನು ಊರಿನ ನೀರು ತುಂಬುವ ಪಂಪಿನ ಮುಂದೆ ಹೇಳಿಬಿಟ್ಟ. ಸುದ್ದಿ ಹುರುಕಿನಂತೆ ಊರಲ್ಲೆಲ್ಲಾ ಹಬ್ಬಿಬಿಟ್ಟಿತು. ಎಲ್ಲಿ ನೋಡಿದರೂ ಅದೇ ಸುದ್ದಿ, ಅದೇ ಮಾತು.

ಗೌಡರ ರಮೇಶಪ್ಪ ಇದ್ದುಳ್ಳವರ ಮಗ. ಹಾಗೆಂದು ಅವನಿಗೆ ಅಹಂಕಾರವಿರಲಿಲ್ಲ. ಕಾಲೇಜು ಕಲಿತವನಾದರೂ ಎಂದೂ ಡೌಲು ಮಾಡಿದವನಲ್ಲ. ಶಬನವ್ವನೂ ಹಾಗೆಯೇ ಬಹಳ ಜಾಣ ಹುಡುಗಿ. ಮನೆಯಲ್ಲಿ ಬೇಡವೆಂದರೂ ಹಟ ಮಾಡಿ ಪೇಟೆಗೆ ಹೋಗಿ ಕಾಲೇಜು ಕಲಿತವಳು. ರಮೇಶಪ್ಪ, ಶಬನವ್ವರು ಪ್ರೀತಿಸುವುದು ಕೆಲವರಿಗೆ ಗೊತ್ತಿದ್ದರೂ ಅದನ್ನು ಬಾಯಿಬಿಟ್ಟು ಹೇಳುವ ಧೈರ್ಯ ಯಾರಿಗೂ ಇರಲಿಲ್ಲ. ಏಕೆಂದರೆ ರಮೇಶಪ್ಪನ ತಂದೆ ಗೌಡರ ಮಾರುತೆಪ್ಪ ಮತ್ತು ಕುದುಸಾಬ ಇಬ್ಬರೂ ಊರ ಹಿರಿಯರು; ಪಂಚಾಯಿತಿಯಲ್ಲಿ ಕುಳಿತು ನ್ಯಾಯ ಹೇಳುವವರು. ಮೇಲಾಗಿ ಇಬ್ಬರೂ ಭಾರೀ ದೋಸ್ತರು. ಇವರ ಮನೆಯಲ್ಲಿ ಅಮಾವಾಸ್ಯೆ ಹುಣ್ಣಿಮೆಯಾದರೆ, ಅವರ ಮನೆಗೆ ಹೋಳಿಗೆ ಹೋಗಲೇಬೇಕು. ಅವರ ಮನೆಯಲ್ಲಿ ಉರುಸ, ಮೊಹರಂ ಅಂತ ಆದರೆ ಇವರ ಮನೆಗೆ ಚೊಂಗೆ, ಹುಂಜಿನ ಸಾರು ಬರಲೇಬೇಕು. ಇಂತಹ ಆತ್ಮೀಯ ವಾತಾವರಣದಲ್ಲಿ ಬೆಳೆದ ಮಕ್ಕಳ ಮನಸ್ಸನ್ನು ಅರಿಯುವ ಪುರುಸೊತ್ತು ಯಾರಿಗೂ ಸಿಗಲೇ ಇಲ್ಲ. ಎರಡು ವರುಷದ ಹಿಂದೆ ರಮೇಶಪ್ಪನಿಗೆ ದೂರದ ಬೆಳಗಾವಿಯಲ್ಲಿ ಎಲ್.ಆಯ್.ಸಿ. ಆಫೀಸಿನಲ್ಲಿ ನೌಕರಿ ಬಂದಿತ್ತು. ಎರಡೂ ಮನೆಯವರಿಗೂ ಒಂದು ಹಬ್ಬ ಆದಷ್ಟು ಸಂತೋಷವಾಗಿತ್ತು.

ರಮೇಶಪ್ಪ ಮತ್ತು ಶಬನವ್ವ ಇಬ್ಬರೂ ಮದುವೆಯಾಗುವ ನಿರ್ಧಾರವನ್ನು ಮಾಡಿದ್ದರು. ಆದರೆ ತಮ್ಮ ನಿರ್ಧಾರಕ್ಕೆ ಬೆಲೆ ಸಿಗದೆ ನಮ್ಮಿಂದ ನಮ್ಮ ಮನೆಗಳಲ್ಲಿ ಜಗಳದ ಬೆಂಕಿ ಹತ್ತಬಹುದೆಂಬ ಆತಂಕದಿಂದಾಗಿ ಯಾರಿಗೂ ಏನೂ ಹೇಳಲೇ ಇಲ್ಲ. ಈ ನಡುವೆ ಶಬನವ್ವನಿಗೆ ಎರಡು ತಿಂಗಳಾದದ್ದು ಇಬ್ಬರಿಗೂ ಆತಂಕವನ್ನು ತಂದಿತ್ತು. ಇಂಥ ಸಂದರ್ಭದಲ್ಲಿ ಏನು ಮಾಡಬೇಕೆಂದು ತಿಳಿಯದೇ ಅವರು ಎಲ್ಲೋ ಓಡಿಹೋಗಿದ್ದರು. ಈ ಘಟನೆಯಿಂದಾಗಿ ರಾಮಪುರದ ಹೊಟ್ಟೆಯಲ್ಲಿ ತಳಮಳ ಆರಂಭವಾಯಿತು.

ಹಾಗೆ ನೋಡಿದರೆ ರಾಮಪುರದ ಹಿಂದೂಗಳು ಮತ್ತು ಮುಸ್ಲಿಮರು ಹಿಂದಿನಿಂದಲೂ ಒಂದೇ ಮನೆಯವರಂತೆ ಬಂದವರು. ಹೋಳಿ ಹುಣ್ಣಿಮೆಯಲ್ಲಿ ಕಾಮಣ್ಣನನ್ನು ಸಿಂಗರಿಸುವವನು ಕಾಶೀಮಜ್ಜನೇ. ಅಲಾಹಬ್ಬದಲ್ಲಿ ಅಲ್ಲಾನ ಡೋಲಿ ಹೊರುವವರು ನಾಯ್ಕರ ಯಂಕಣ್ಣಜ್ಜ ಮತ್ತು ಮುತ್ತೆಪ್ಪಜ್ಜ. ಅಲಾಹಬ್ಬ ಬಂತೆಂದರೆ ಹುಡುಗರಿಗಂತೂ ಖುಷಿಯೋ ಖುಷಿ. ಊರ ಚಾವಡಿಯಲ್ಲಿ ಮುಸ್ಲಿಂ ದೇವರನ್ನು ಕೂರಿಸಿ ಲಾಡಿ ಕಟ್ಟಿಸಿಕೊಂಡು ಫಕೀರುಗಳಾಗುವುದೇನು. ಐಮ್ಯೋದಿನ್ ಎನ್ನುತ್ತ ಮನೆ ಮನೆಗೆ ಹೋಗಿ ಚೊಂಗೆ, ಹುಂಜಿನ ಸಾರು, ಉಣ್ಣುವುದೇನು. ಸಂತರ ಭಜನೆಯಲ್ಲೂ ಅಷ್ಟೇ. ಮರಿ ಸಂತರಾಗಿ ಮನೆ ಮನೆಗೆ ಹೋಗಿ ''ಬೋಲಾ ಪುಂಡಲೀಕ ವರದೇ ವಿಠ್ಠಲ್ ಸಿರಿ ಜ್ಞಾನದೇವ ತುಕಾರಾಮ'' ಎಂದು ರಾಗವಾಗಿ ಹೇಳಿ ನೈವೇದ್ಯ ಅರ್ಪಿಸಿ ಹೋಳಿಗೆ ಉಣ್ಣುವುದೇನು ! ಇಂಥ ಮರಿ ಫಕೀರುಗಳ, ಸಂತರುಗಳ ಗುಂಪಿನಲ್ಲಿ ಮುಂದಿರುವವರೆಂದರೆ ಸುರೇಶ, ಭಾಸ್ಕರ, ಪುಂಡಲೀಕ, ಅಕ್ಬರ್ ಮತ್ತು ಇಕ್ಬಾಲ್. ಸಂತರ ಭಜನೆಯಲ್ಲಿ ಸದಾಶಪ್ಪ ಮತ್ತು ಹುಸನವ್ವಜ್ಜಿಯರು ಮುತ್ತೆಪ್ಪಜ್ಜನೊಂದಿಗೆ ರಾತ್ರಿಯಿಡೀ ಕುಳಿತು ಕೀರ್ತನ ಪ್ರವಚನ ಕೇಳುತ್ತಿದ್ದರು. ಸದಾಶಪ್ಪ ಮತ್ತು ಮುತ್ತೆಪ್ಪನ ದೋಸ್ತಿಯಂತೂ ಸುತ್ತ ಹಾಲ್ಕು ಹಳ್ಳಿಗಳಲ್ಲಿ ಪ್ರಸಿದ್ಧವಾಗಿತ್ತು.

• • •

**ಮಾರುತಿ ದಾಸಣ್ಣವರ**

ಶಬನವ್ವ ಮತ್ತು ರಮೇಶಪ್ಪರ ಪ್ರೇಮ ಪ್ರಕರಣದಿಂದ ಅಸ್ವಸ್ಥಗೊಂಡ ರಾಮಪುರ ''ಎನೋ ತಿಳಿಲಾರ್ದ ಮಕ್ಕಳು ತಪ್ಪ ಮಾಡ್ಯಾವ'' ಅಂದುಕೊಂಡು ಅದನ್ನು ಮರೆಯಲು ಪ್ರಯತ್ನಿಸಿತು; ಒಂದೆರಡು ವರ್ಷಗಳಲ್ಲಿ ಮರೆತೂಬಿಟ್ಟಿತು. ಆದರೂ ಒಂದೊಂದು ಸಲ ಥಟ್ಟನೆ ಎದ್ದು ಕೂರುತ್ತಿತ್ತು. ಹೀಗಿರುವಾಗಲೇ ಇನ್ನೊಂದು ಪ್ರಕರಣ ನಡೆಯಿತು. ಅದರಿಂದ ಬರೀ ನಿದ್ದೆಗೆಡುವುದು ಮಾತ್ರವಲ್ಲ ರಾಮಪುರ, ಪ್ರಾಣಸಂಕಟದಿಂದ ಎದ್ದು ಓಡಾಡುವಂತಾಯಿತು.

ನಿನ್ನೆ ಮೊನ್ನೆಯವರೆಗೂ ಚೆಡ್ಡಿ ಹಾಕಿಕೊಂಡು ತಿರುಗುತ್ತಿದ್ದ ಹುಡುಗರು ರಾಜಕೀಯ ಮಾಡಲು ತೊಡಗಿದರು. ಓಟುಗಳಿಗಾಗಿ ರಾಜಕೀಯ ಮಂದಿ ಏನೇನೆಲ್ಲಾ ಮಾಡುತ್ತಾರೆಂದು ತಿಳಿದುಕೊಂಡು ತಾವೂ ಹೀರೋ ಆಗುವ ಕನಸು ಕಾಣುತ್ತ ಹಾಲಿನಂತಹ ರಾಮಪುರದ ಎದೆಯಲ್ಲಿ ವಿಷ ಹಿಂಡಿಬಿಟ್ಟರು.

* * *

ಇದಕ್ಕಿದ್ದಂತೆ ಒಂದು ದಿನ ಹುಡುಗರದೊಂದು ತಂಡ ಊರೊಳಗೆ ಹೊಕ್ಕಿತು. ರಾಮಪುರ ಗಬಕ್ಕನೆ ಎದ್ದು ಕೂತು ಆತಂಕದಿಂದ ಅವರನ್ನೇ ನೋಡ ತೊಡಗಿತು. ಅವರು ರಥಯಾತ್ರೆಯವರಂತೆ, ಅಯೋಧ್ಯೆಗೆ ಹೊರಟಿದ್ದರಂತೆ !! ಕೈಯಲ್ಲಿ ತ್ರಿಶೂಲ, ಬಿಲ್ಲು ಬಾಣಗಳಿದ್ದವು. ತಲೆಗೆ ಕೆಂಪು ವಸ್ತ್ರ ಕಟ್ಟಿದ್ದರು. ''ಶ್ರೀ ರಾಮ ಚಂದ್ರಕೀ ಜೈ'' ಎಂದು ಕೂಗುತ್ತಿದ್ದರು. ಅವರ ಕೂಗು ಕೇಳಿ ಒಂದು ರೀತಿಯ ಭಯವಾಗುತ್ತಿತ್ತು. ಅವರ ಧ್ವನಿ ಕೇಳಿ ಊರ ಮಂದಿಯೆಲ್ಲ ಹನುಮಪ್ಪನ ಗುಡಿಯ ಮುಂದೆ ಮುಗಿಬಿದ್ದಿತು. ಅವರಲ್ಲಿ ಒಬ್ಬ ಮಾತನಾಡಿದ. ''ಅಯೋಧ್ಯಾ ರಾಮ್ ಕಾ ಜನ್ಮಸ್ಥಾನ ಹೈ, ಹಮ್ ವಹ್ಞಾ ಮಂದಿರ್ ಬನಾಕರ್ ಹೀ ರಹೇಂಗೆ, ಹಮೇ ಕೋಯೀ ನಹೀ ರೋಕ್ ಸಕ್ತಾ; ಹಮ್ ಹಿಂದೂ ಹೈ, ಎ ಹಿಂದೂವ್ಞೋ ಕಾ ದೇಶ್ ಹೈ'', (ಅಯೋಧ್ಯೆಯು ರಾಮನ ಜನ್ಮಸ್ಥಾನ, ನಾವು ಅಲ್ಲಿ ದೇವಾಲಯವನ್ನು ಕಟ್ಟಿಯೇ ತೀರುತ್ತೇವೆ, ನಮ್ಮನ್ನು ತಡೆಯುವ ಶಕ್ತಿ ಯಾರಿಗೂ ಇಲ್ಲ. ನಾವು ಹಿಂದೂಗಳು, ಇದು ಹಿಂದೂಗಳ ದೇಶ.) ಡೊಳ್ಳಾರ ಮುತ್ತೆಪ್ಪಜ್ಜನಿಗೆ ಏನೂ ತಿಳಿಯಲಿಲ್ಲ. ಪಕ್ಕದಲ್ಲೇ ನಿಂತಿದ್ದ ಅವನ ಜೀವದ ಗೆಳೆಯ ನದಾಫಜ್ಜನನ್ನು ಕೇಳಿದ, ''ಏ ನದಾಪಾ ಅಂವ ಏನ ಹೇಳಾಕತ್ಯಾನು ?'' ನದಾಫಜ್ಜನ ಮುಖ ಬಿರ್ರssನೆ ಬಿಗಿಯಿತು. ಅವನು ವ್ಯಗ್ರನಾದಂತಾದ. ಮತ್ತೊಮ್ಮೆ ಮುತ್ತೆಪ್ಪಜ್ಜ ''ಏ ನದಾಪಾ ಅಂವ.. ಏನ..'' ಎನ್ನುವಷ್ಟರಲ್ಲಿ ಕೇಳಿಯೂ ಕೇಳದವರಂತೆ ನದಾಫಜ್ಜ ಸರಸರನೆ ಅಲ್ಲಿಂದ ಹೋಗಿಬಿಟ್ಟ, ಅವನ ಹಿಂದೆ ಕಾಶೀಮಜ್ಜ, ಹುಸನಪ್ಪ, ಕುದುಸಾಬ ಅವರೂ ಹೋದರು. ಮುತ್ತೆಪ್ಪಜ್ಜ, ಯಂಕಣ್ಣಜ್ಜ, ಮಾರುತೆಪ್ಪರಿಗೆ ಏನಾಯಿತೆನ್ನುವುದೇ ತಿಳಿಯಲಿಲ್ಲ.

ಮರುದಿನ ಮುಸ್ಲಿಂ ಯುವಕರ ಗುಂಪೊಂದು ರಾಮಪುರವನ್ನು ಹೊಕ್ಕಿತು. ಅವರೂ ಒಂದು ರೀತಿ ವ್ಯಗ್ರವಾಗೇ ಇದ್ದರು. ಅವರಲ್ಲಿಯೂ ಒಬ್ಬ ಮಾತನಾಡಿದ. ''ಹಮ್ ದೇಖೇಂಗೆ ವಹ್ಞಾ ಮಂದಿರ್ ಕೈಸೆ ಬನ್ತಾ ಹೈ, ಉಸ್ ಮಸ್ಜಿದ್ ಕೊ ತೋಡ್‌ಕರ್ ಇನ್ ಲೋಗೋನೆ ಅಚ್ಛಾ ನಹೀ ಕಿಯಾ, (ನಾವೂ ನೋಡುತ್ತೇವೆ. ಅಲ್ಲಿ ದೇವಾಲಯವನ್ನು ಹೇಗೆ ಕಟ್ಟುತ್ತಾರೆಂದು, ಆ ಮಸೀದಿಯನ್ನು ಒಡೆದು ಇವರು ಒಳ್ಳೆಯದು ಮಾಡಲಿಲ್ಲ.) ಈ ಬದಲಾವಣೆಗಳಿಂದ ರಾಮಪುರದ ಮುಸಲ್ಮಾನರ ಮುಖದ ಮೇಲಿನ ನರಗಳು ಬಿಗಿಯಾಗತೊಡಗಿದವು. ಹಾಗೆ ನೋಡಿದರೆ ರಾಮಪುರದ ಮಂದಿ ಹನುಮಪ್ಪ, ರಾಮ, ಅಲ್ಲಾಗಳ ಮಧ್ಯೆ ಎಂದೂ ಭೇದಭಾವ ಮಾಡಿದವರೇ ಅಲ್ಲ. ಅದು ಅವರಿಗೆ ಗೊತ್ತೂ ಇರಲಿಲ್ಲ.

ಮುಂದೆ ಹನುಮಂತ ದೇವರ ಓಕಳಿ ಬಂತು. ಹಳೆಯ ಹಿರಿಯರನ್ನು ಬಿಟ್ಟು ಹೊಸ ತಲೆಮಾರಿನ ಹುಡುಗರ್‍ಯಾರೂ ಉತ್ಸಾಹದಿಂದ ಭಾಗವಹಿಸಲಿಲ್ಲ. ರಾಮಪುರದಲ್ಲಾದ ಬದಲಾವಣೆಗಳ ಪ್ರಭಾವ ಹುಡುಗರ ಮೇಲೇ ಹೆಚ್ಚಿಗಾಗಿತ್ತು. ಹೋಳಿ ಹುಣ್ಣಿಮೆಯಲ್ಲಿ ಅಕ್ಬರ್, ಇಕ್ಬಾಲ್ ಮುಂತಾದ ಮುಸ್ಲಿಂ ಹುಡುಗರು ಬಣ್ಣ ಆಡಲು ಬರಲಿಲ್ಲ. ಅಲಾಹಬ್ಬದಲ್ಲಿ ಕರಬಲ್ (ಲೇಝೀಂ) ಆಡಲು, ಡೋಲಿ ಹೊರಲು ಹಿಂದೂ ಹುಡುಗರ್‍ಯಾರೂ ಬರಲಿಲ್ಲ. ಮುಂದಾಗಿ ಮಾಡಲು ಹೋದ ಯಂಕಣ್ಣಜ್ಜ ಮತ್ತು ಮುತ್ತೆಪ್ಪಜ್ಜರನ್ನು ಯಾರೂ ಮಾತನಾಡಿಸಲಿಲ್ಲ. ಹುಡುಗರ್‍ಯಾರೂ ಫಕೀರರುಗಳಾಗಲಿಲ್ಲ. 'ಅಯ್‌ಮ್ಯೋದಿನ್' ಅನಲಿಲ್ಲ. ಹುಂಜಿನ ಸಾರು ಉಣ್ಣಲಿಲ್ಲ. ಆದರೆ ಹಿಂದೂ ಗುಡಿಗಳ ಮೇಲೆ ಸ್ಪೀಕರುಗಳು ತಲೆಯೆತ್ತಿ ''ಓಂ ಜೈ ಜಗದೀಶ ಹರೇ'' ಎಂದು ಜೋರಾಗಿ ಕೂಗಾಡತೊಡಗಿದವು. ಮಸೀದಿಯ ಮೇಲೂ ಸ್ಪೀಕರುಗಳು ತಲೆಯೆತ್ತಿ ''ಅಲ್ಲಾ ಹೂ ಅಕ್ಬರ್'' ಎಂದು ಕೂಗತೊಡಗಿದರು.

'ಏದ್ರೀ ?' 'ಎದ್ದ್ಯಾ ಎದ್ರೀ', 'ಚಾ ಆತರೀ' ಎಂದು ದಿನ ಬೆಳಗಾದರೆ ಕುಶಲ ವಿಚಾರಿಸುವ ಜನ ಒಬ್ಬರನ್ನೊಬ್ಬರು ಕಂಡು ಗುರ್ರ ಎನ್ನತೊಡಗಿದ್ದರು. ಒಂದು ದಿನ ಹಿಂದೂ ಹುಡುಗನೊಬ್ಬ ಮಸೀದಿಯ ಹತ್ತಿರ ಏನೋ ಮಾಡಿದನೆಂದು ಮುಸಲ್ಮಾನರು ಅವನನ್ನು ಚೆನ್ನಾಗಿ ಥಳಿಸಿದರು. ಮತ್ತೊಂದು ದಿನ ಮುಸ್ಲಿಂ ಹುಡುಗನೊಬ್ಬ ಹನುಮಂತ ದೇವರ ಗುಡಿಯ ಮುಂದೆ ಏನೋ ಮಾಡಿದನೆಂದು ಹಿಂದೂ ಮಂದಿ ಅವನನ್ನು ಚೆನ್ನಾಗಿ ಥಳಿಸಿದರು. ಒಟ್ಟಿನಲ್ಲಿ ಊರಿಗೆ ಊರೇ ಆಕ್ರೋಶದ ಬೆಂಕಿಯಲ್ಲಿ ಬೇಯತೊಡಗಿತು.

ಡೊಳ್ಳಾರ ಮುತ್ತೆಪ್ಪಜ್ಜ, ನಾಯ್ಕರ ಯಂಕಣ್ಣಜ್ಜ, ಗೌಡರ ಮಾರುತೆಪ್ಪ ತಲೆಯ ಮೇಲೆ ಕೈ ಹೊತ್ತು ಕುಳಿತುಬಿಟ್ಟರು. ಸ್ವಸ್ಥವಾಗಿ ಉಂಡು ತಿಂದು ಹಾಯಾಗಿ ಮಲಗಿದ್ದ ರಾಮಪುರ ಬಾಲಕ್ಕೆ ಬೆಂಕಿ ಬಿದ್ದಂತೆ ಓಡಾಡತೊಡಗಿತು.

ಒಂದು ದಿನ 'ನಮ್ಮೂರು ಹ್ಯಾಂಗಿದ್ದದ್ದು ಹ್ಯಾಂಗಾತು !!' ಎಂಬ ಚಿಂತೆಯ ಚಿತೆಯಲ್ಲಿ ಸುಟ್ಟುಕೊಳ್ಳುತ್ತಾ ಯಂಕಣ್ಣಜ್ಜ ಮತ್ತು ಮುತ್ತೆಪ್ಪಜ್ಜರು ಎಲೆಯಡಿಕೆ ಮೆಲ್ಲುತ್ತ ರಬಗಲ್ ಕಟ್ಟೆಯ ಮೇಲೆ ಕುಳಿತಿದ್ದರು. ಆಗ ಒಮ್ಮಿಂದೊಮ್ಮೆಲೇ ಏಳೆಂಟು ಹುಡುಗರದೊಂದು ದಂಡು ಕೈಯಲ್ಲಿ ಕೋಲುಗಳನ್ನು ಹಿಡಿದುಕೊಂಡು ಓಡುತ್ತಾ ಬಂತು. ಇದನ್ನು ಕಂಡು ಹೌಹಾರಿದ ಅಜ್ಜಂದಿರು ''ಏ ಏನಾತ್ಯೋ ನಿಲ್ರ್ಯೋ...'' ಎಂದು ಕೂಗುತ್ತ ಗಡಬಡಿಸಿ ಎದ್ದುನಿಂತರು. ಆ ಹುಡುಗರ ಗುಂಪು ನಿಲ್ಲಲೇಯಿಲ್ಲ. ಅದರಲ್ಲೇ ಒಬ್ಬ ''ಯಜ್ಜಾ ಅಲ್ಲಿ ಹೊಡದಾಡಾಕತ್ಯಾರ !!!'' ಎಂದಷ್ಟೇ ಚುಟುಕಾಗಿ ಉತ್ತರಿಸುತ್ತ ಓಡಿದ. ''ಏ ನಿಲ್ರೋ ಏ ನೀ...'' ಎನ್ನುತ್ತಲೇ ಅಜ್ಜಂದಿರು ಎಡವುತ್ತ ತಡವುತ್ತ ಓಡಿದರು.

* * *

ಎರಡೂ ಕಡೆಯವರು ಮನಸ್ಸಿಗೆ ಬಂದಂತೆ ಹೊಡೆದಾಡಿದ್ದರು. ಕೆಲವರ ತಲೆ ಒಡೆದು ರಕ್ತ ಸೋರುತ್ತಿತ್ತು. ಒಬ್ಬನ ಕೈ, ಇನ್ನೊಬ್ಬನ ಕಾಲು, ಮುರಿದಿದ್ದವು. ಪೋಲಿಸ್ ಜೀಪ್ ಬಂದಿತ್ತು. ಬಿಳಿ ಗಾಡಿಯೊಂದು ಕೈ ಕಾಲು ಮುರಿದುಕೊಂಡವರನ್ನು ಹೊತ್ತು ಆಸ್ಪತ್ರೆಗೆ ಸಾಗಿಸುತ್ತಿತ್ತು. ಪಿ.ಎಸ್.ಆಯ್. ಇರ್ಫಾನ್ ಸಾಹೇಬರು ''ನಿಮಗೇನ ತಲಿಗಿಲಿ ಕೆಟ್ಟೈತೇನು ? ಎಂಥಾ ಊರಿದು ಹ್ಯಾಂಗ ಮಾಡೇರಿ'' ಎನ್ನುತ್ತಿದ್ದರು. ಅಷ್ಟರಲ್ಲಿ ಓಡಿ ಬಂದ ಮುತ್ತೆಜ್ಜಪ್ಪ ''ಸಾಹೇಬ್ರ ಅದಾರ್‍ಯೋ ಹಿಂದಿ ಮಂದಿ ಬಂದ ಒಂದ ದಿನ ಊರ ಹೊಕ್ಕು ಅದೇನೇನೋ ಹೇಳಿದರ್ರೀ, ಆವಾಗಿಂದ ನಮ್ಮೂರಿಗಿ ಅದೇನ ಬ್ಯಾನಿ ಬಂತೋ ಏನೋ ನೋಡ್ರಿ ಹ್ಯಾಂಗಿದ್ದವ್ರು



ಹ್ಯಾಂಗಾಗ್ಯಾರ' ಮುತ್ತೆಪ್ಪಜ್ಜನಿಗೆ ಅಳು ಒತ್ತರಿಸಿ ಬರುತ್ತಿತ್ತು. ತಡೆ ತಡೆದು ಹೇಳುತ್ತಲೇ ಇದ್ದ. ''ಈ ನದಾಪಾ ನೋಡ್ರೀ ಈ ಮಗಾ ನನ್ನ ನೋಡಿದರ ಇಷ್ಟ ದಪ್ಪ ಮುಖಾ ಮಾಡ್ಕೊಂಡ ಅಷ್ಟ ದೂರ ಹೊಕ್ಕಾನರೀ ನಾ ಅಂಥಾದೇನ್ ಮಾಡೇನ್ರೀ ಈ ಮಗ್ಗ? ನಾವಿಬ್ರೂ ಒಂದSS ತಾಟಿನ್ಯಾಗ ಉಂಡಾವ್ರೀ...'' ಮುತ್ತೆಪ್ಪಜ್ಜನಿಗೆ ಮುಂದೆ ಹೇಳಲು ಸಾಧ್ಯವಾಗಲಿಲ್ಲ. ತನ್ನ ಜೀವದ ಗೆಳೆಯ ನದಾಫನ ಸ್ನೇಹವನ್ನು ಕಳೆದುಕೊಂಡ ನೋವು ಎಲ್ಲಕ್ಕಿಂತಲೂ ಹೆಚ್ಚಾಗಿ ಅವನನ್ನು ಬಾಧಿಸುತ್ತಿತ್ತು. ಅಷ್ಟರಲ್ಲಿ ನಾವಿ ಮಾಸ್ತರು ಜನವನ್ನೆಲ್ಲ ಬಯಲು ಮಾಡುತ್ತ ಮುಂದೆ ಬಂದು ಮುತ್ತೆಪ್ಪಜ್ಜನನ್ನು ಸಮಾಧಾನ ಮಾಡಿದರು. ಊರಿನ ಪರಿಸ್ಥಿತಿಯನ್ನು ನೋಡಿ ಅವರಿಗೆ ತುಂಬಾ ಸಂಕಟವಾಗಿತ್ತು. ಹೊಡೆದಾಡಿದವರೆಲ್ಲ ಅವರ ಶಿಷ್ಯರೇ ಆಗಿದ್ದರು. ಅವರು ಹೇಳಿದರು. ''ನೋಡ್ರೆಪಾ ನಾನು ನಿಮಗೆಲ್ಲಾ ಸಾಲಿ ಕಲಿಸೇನಿ, ನಾ ಎಂದಾದರೂ ನಿಮ್ಮಲ್ಲಿ ಭೇದ ಭಾವ ಮಾಡೇನೇನು ? ಶ್ರೀರಾಮಚಂದ್ರ, ದೇವರು. ಅಂವಾ ಸರ್ವಾಂತರ್ಯಾಮಿ. ಅಂದರSS ಎಲ್ಲೆಲ್ಲಾ ಇರಾಂವಾ. ಅಂಥಾವಾ ಅಯೋಧ್ಯಾದಾಗS ಅದಾನೇನು ? ನಮ್ಮೂರಾಗ ಇಲ್ಲೇನು ? ರಾಮ ಇಲ್ಲೇ ಅದಾನ. ಅದಕ್ಕS ನಮ್ಮೂರ ಹೆಸರು ರಾಮಪುರ ಆಗಿಲ್ಲೇನು ? ಜಗತ್ತಿನ ತುಂಬ ತುಂಬಿಕೊಂಡಿರೂ ಆ ರಾಮನಿಗೆ ಅಯೋಧ್ಯಾದಾಗ ಗುಡಿ ಕಟ್ಟೂದಾದರೂ ಯಾಕ ? ಅದಕ್ಕಾಗಿ ನಾವೆಲ್ಲಾ ಜಿಡದಾಡಿ ಸಾಯೂದಾದರೂ ಯಾಕ ? ಮುಸಲ್ಮಾನ ಬಾಂಧವರು ಖಾಸ ನಮ್ಮ ಅಣ್ಣ ತಮ್ಮಂದಿರು. ಈಗ ಇಲ್ಲೇ ನೋಡಿರಿ, ನಮಗೆಲ್ಲಾ ಗೊತ್ತದ್ದಂಗನS ನಮ್ಮ ಮುತ್ತೆಪ್ಪಜ್ಜ, ನದಾಫಜ್ಜ ಎಂಥಾ ದೋಸ್ತರು !! ತನಗಾಗಿ ತನ್ನ ಮಕ್ಕಳು ಹೊಡೆದಾಡಿ ಸಾಯೂದನ್ನ ಅಲ್ಲಾ ಆಗಲಿ ರಾಮ ಆಗಲಿ ಸಹಿಸ್ತಾರೇನು ? ಇದರಿಂದ ಅವರಿಗೆ ಸಂತೋಷ ಆಗ್ತೈತೇನು ? ನೀವS ವಿಚಾರ ಮಾಡ್ರಿ, ಯಾವುದೋ ಒಂದ ಕೆಟ್ಟ ಗಳಿಗೆಯೊಳಗ ಏನೋ ಒಂದ ಆಗಿ ಹೋಗೇತಿ. ಎಲ್ಲರೂ ಒಂದಾಗಿ ಇರೂದನS ನಮ್ಮ ಪರಂಪರಾ ಇತಿ. ಅದನ್ನ ನಾವೆಲ್ಲಾ ಸೇರಿ ಉಳಿಸಿಕೊಂಡು ಹೋಗೂಣು, ಯಾರೋ ಏನೋ ಹೇಳಿದರೂ ಅಂತ ನಮ್ಮ ತಲಿ ಕೆಡಿಸಿಕೊಳ್ಳೂ ಅವಶ್ಯಕತಾಯಿಲ್ಲ'' ಎಂದು ಆವೇಶಭರಿತರಾಗಿ ಮಾತನಾಡಿದರು. ಕೂಡಿದ ಮಂದಿಯೆಲ್ಲ ಕಲ್ಲಿನ ಗೊಂಬೆಗಳಂತೆ ಹಾಗೆಯೇ ನಿಂತಿದ್ದರು.

ಅಷ್ಟರಲ್ಲಿ ಮತ್ತೊಂದು ಪೋಲಿಸ್ ಜೀಪು ಅಲ್ಲಿಗೆ ಬಂದಿತು. ಇಳಿದವರು ಪೊಲೀಸ್ ವರಿಷ್ಠಾಧಿಕಾರಿ ಕುಲಕರ್ಣಿ ಸಾಹೇಬರು. ಪೋಲೀಸ್ ಪೇದೆಯೊಬ್ಬರು ಜೀಪಿನ ಹಿಂದಿನ ಬಾಗಿಲನ್ನು ತೆರೆದರು. ಎಲ್ಲ ಮಂದಿಯ ಕಣ್ಣು ಆ ಕಡೆ ತಿರುಗಿದವು. ಓಹ್ !! ಏನಾಶ್ಚರ್ಯ ! ಜನರು ಬಾಯಿ ತೆಗೆದು ಹಾಗೆಯೇ ನಿಂತುಬಿಟ್ಟರು. ಜೀಪಿನಿಂದ ಇಳಿದವರು ಆ ಊರಿನ ಮಕ್ಕಳು. ರಾಮಪ್ಪನವ್ವ ಯಾವುದೇ ಭೇದ ಭಾವ ಮಾಡದೇ ಸಮಾನ ಪ್ರೀತಿಯಿಂದ ಬೆಳೆಸಿದ ರಾಮಪುರದ ಮಕ್ಕಳು. ಶಬನವ್ವ, ರಮೇಶಪ್ಪ !! ಶಬನವ್ವನ ಕೈಯಲ್ಲಿ ಒಂದು ಸುಂದರವಾದ ಕೂಸೂ ಇತ್ತು.

ಅವರಿಬ್ಬರನ್ನೂ ಊರಿಗೆ ಕರೆತರಲು ಇದೇ ಒಳ್ಳೆಯ ಅವಕಾಶವೆಂದು ತಿಳಿದು ಕುಲಕರ್ಣಿಯವರೇ ಸ್ವತಃ ಹೋಗಿ ಅವರನ್ನು ಕರೆತಂದಿದ್ದರು. ಅವರು ಹೇಳಿದರು. ''ನೋಡ್ರೀ ಇವರಿಬ್ರೂ ವಯಸ್ಸಿಗೆ ಬಂದವರು, ಒಬ್ರನ್ನೊಬ್ಬರು ಪ್ರೀತಿಸಿ ಕೋರ್ಟಿನ್ಯಾಗ ಕಾಯ್ದೆ ಪ್ರಕಾರ ಮದುವಿ ಆಗ್ಯಾರ, ಒಂದ ರೀತಿ ವಿಚಾರ ಮಾಡಿದರS ನಿಮ್ಮ ಕೈಯಿಂದ ಆಗಲಾರದ್ದನ್ನ ಇವರು ಮಾಡಿ ತೋರಿಸ್ಯಾರ. ನೀವೆಲ್ಲಾ ಮೊದಲಿನಾಂಗ ಒಂದಾಗಿ ಇರ್ತೀವಿ ಅಂದ್ರೀ ಇವರು ಈ ಊರಾಗ ಹೆಜ್ಜಿ ಇಡ್ತಾರ ಇಲ್ಲಾ ಅಂದ್ರ...SS'' ಅವರ ಮಾತು ಮುಗಿಯುವ ಮುನ್ನವೇ ''ಸಾಹೇಬ್ರSS'' ರಮೇಶಪ್ಪನ ತಂದೆ ಮಾರುತೆಪ್ಪ ಓಡಿ ಬಂದು ''ಸಾಹೇಬ್ರSS ಯಾಂವ ಏನರೆ ಹೇಳವಲ್ಯಾಕ ಶಬನವ್ವ ನನ್ನ ಸೊಸಿ, ನನ್ನ ಮಗಳಿದ್ದಂಗ'' ಎಂದುಬಿಟ್ಟ. ಅಷ್ಟರಲ್ಲಿ ಕುದುಸಾಬ ಓಡಿಬಂದು ಮೊಮ್ಮಗನನ್ನು ಎತ್ತಿಕೊಂಡ. ಅಲ್ಲಿ ಕೂಡಿದ ಜನಗಳ ಮುಖಗಳ ತುಂಬಾ ನಗುವಿನ ಹೂವು ಅರಳಿದವು. ಸಂತೋಷದ ಕಣ್ಣೀರು ಕಣ್ಣ ತುಂಬಾ ತುಂಬಿಕೊಂಡವು. ಇಡೀ ಜನಜಂಗುಳಿಯಲ್ಲಿ ಜೀವ ಬಂದಂತಾಯಿತು. ಮುತ್ತೆಪ್ಪಜ್ಜನ ಖುಷಿಗಂತೂ ದಿಕ್ಕು ದೆಸೆಯೇ ಇಲ್ಲದಂತಾಯಿತು. ಅವಸರವಸರವಾಗಿ ಹೋಗಿ ತನ್ನ ಖಾಸಾ ದೋಸ್ತ ನದಾಫಜ್ಜನ ಮುಂದೆ ನಿಂತುಕೊಂಡ. ನದಾಫಜ್ಜ ಮುಖ ಎತ್ತಲಿಲ್ಲ. ಮುತ್ತಪ್ಪಜ್ಜ ''ಏ ಈಗರ ಮುಖಾ ಎತ್ತಲೇ ನದಾಪಾ'' ಎಂದ... ನಿಧಾನವಾಗಿ ನದಾಫಜ್ಜ ಮುಖ ಎತ್ತಿದ. ಅವನ ಮುಖದ ಮೇಲಿನ ಬಿಳಿ ಗಡ್ಡದ ತುಂಬ ಕಣ್ಣೀರು ಹರಿದಾಡುತ್ತಿದ್ದವು. ಇಬ್ಬರೂ ಅಪ್ಪಿಕೊಂಡು ಸಣ್ಣ ಮಕ್ಕಳಂತೆ ಅತ್ತುಬಿಟ್ಟರು. ಯಂಕಣ್ಣಜ್ಜ ಕೂಗಿ ಹೇಳಿದ ''ಅಲಾ ದೇವರು ಮತ್ತ ಹನುಮಪ್ಪ ಈವತ್ತ ನಮ್ಮ ಊರ ಉಳಿಸ್ಯಾರ ಇಂದ ಅವರಿಬ್ಬರಿಗೂ ಕಾಯಿ ಕಪ್ಪುರ ಮಾಡೂಣು.'' ನೆರೆದಿದ್ದ ಜನಸ್ತೋಮವೆಲ್ಲಾ ಸಂತೋಷದಿಂದ ''ಓSSS....'' ಎಂದು ಕೂಗಿತು. ಹುಡುಗರು ಜೋರಾಗಿ ಸಿಳ್ಳೆ ಹಾಕಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಆಗ ನದಾಫಜ್ಜ, ಅಲ್ಲೇ ನಿಂತಿದ್ದ ತನ್ನ ಮೊಮ್ಮಗನನ್ನು ಕರೆದು ಅವನ ಕಿವಿಯಲ್ಲಿ ಹೇಳಿದ. ''ದೇಖೋ ಬೇಟಾ ಏಕ್ ಅಚ್ಛಾಸಾ ಮುರ್ಗಿ ಪಕಡೋ, ಔರ್ ಅಪನೀ ಅಮ್ಮೀ ಸೇ ಕಹೋ ಆಜ್ ನಿಮ್ದು ಕೆ ಅಜ್ಜ ಮುತ್ತೆಪ್ಪ ಖಾನೇಕೊ ಘರ್ ಆತಾ ಹೈ'' (ನೋಡು ಮಗು ಒಂದು ಒಳ್ಳೇ ಕೋಳಿ ಹಿಡಿ , ಮತ್ತು ಇಂದು ನಿಮ್ಮ ಅಜ್ಜ ಮುತ್ತೆಪ್ಪ ಊಟಕ್ಕೆ ನಮ್ಮ ಮನೆಗೇ ಬರುತ್ತಾನೆಂದು ನಿಮ್ಮ ಅಮ್ಮನಿಗೇ ಹೇಳು). ಹುಡುಗ ಖುಷಿಯಿಂದ ಮನೆಗೆ ಓಡಿದ. ರಾಮಪುರದ ಜನ ಹಿಂದಿನಂತೆಯೇ ಒಂದಾಗಿ ಹೊರಟರು. ಆಕಾಶವಾಣಿ ವಿವಿಧ ಭಾರತಿಯಿಂದ ''ಈಶ್ವರ್ ಅಲ್ಲಾ ತೇರೋ ನಾಮ್ ಸಬ್ ಕೋ ಸನ್ಮತಿ ದೇ ಭಗವಾನ್'' ಹಾಡು ತೇಲಿ ಬರುತ್ತಿತ್ತು. ರಾಮಪುರದ ಕಣ್ಣು ಸಂತೋಷದಿಂದ ತುಂಬಿ ಬಂದಿದ್ದವು. ಅದು ಏನನ್ನೂ ಹೇಳುವ ಸ್ಥಿತಿಯಲ್ಲಿರಲಿಲ್ಲ.

**ಮಾರುತಿ ದಾಸಣ್ಣವರ**
ಕನ್ನಡ ಅಧ್ಯಾಪಕರು, ಜವಾಹರ ನವೋದಯ ವಿದ್ಯಾಲಯ, ಗಾಳಿಬೀಡು, ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ - ೫೭೧ ೨೦೧

# ಸಾದರ ಸ್ವೀಕಾರ

**ಮೇಲೋಗರ** (ಬಿಡಿಬರಹಗಳು) ಎನ್. ಎಸ್. ಶಂಕರ್
ಪುಟ : ೨೧೩ ಬೆಲೆ : ರೂ. ೫೫

**ಹುಲಕುಂದ ಭೀಮಕವಿಯ ಸಾಹಿತ್ಯ** (ಲಾವಣಿಗಳು)
ಡಾ|| ಚೆನ್ನಕ್ಕ ಪಾವಟೆ
ಪುಟ : ೨೦೫ ಬೆಲೆ : ರೂ. ೫೫

**ಸೂಳೆಕೆರೆ ಸಾಂಗತ್ಯ** (ಶ್ರೀ ಸಿದ್ಧೇಶ್ವರ ಚರಿತೆ)
ಸಂ.: ಸಂತೇಬೆನ್ನೂರು ಸುಮತೀಂದ್ರ ನಾಡಿಗ್
ಪುಟ : ೧೨೨ ಬೆಲೆ : ರೂ. ೪೫

**ಚಂದನ** (ಲೇ. ಸಂಕಲನ) ಕಿಶನ್‌ರಾವ್ ಕುಲಕರ್ಣಿ
ಪುಟ : ೨೦೮ ಬೆಲೆ : ರೂ. ೫೫

**ಮಾಮೂಲಿ ಮಳೆಯಲ್ಲ** (ಕವನ ಸಂಕಲನ)
ಫಾಲ್ಗುಣಗೌಡ ಅಚವೆ
ಪುಟ : ೪೭ ಬೆಲೆ : ರೂ. ೩೦

**ಕಾಮಧೇನು** (ಕವನ ಸಂಕಲನ) ಸದಾನಂದ
ಪುಟ : ೬೯ ಬೆಲೆ : ರೂ. ೨೫

**ವಿಶ್ವ ಚೇತನ** (ಕವನ ಸಂಕಲನ) ಚಿನ್ಮಯ ಎಂ. ರಾವ್
ಪುಟ : ೧೦೦ ಬೆಲೆ : ರೂ. ೩೬

**ಸಂಬಂಧಗಳು** (ಕಥಾಸಂಕಲನ) ಬಿ. ಎ. ಷಂಶುದ್ದೀನ್
ಪುಟ : ೮೩ ಬೆಲೆ : ರೂ. ೩೦

**ಸ್ಪಂದನ** (ವಿಮರ್ಶಾ ಲೇಖನಗಳು) ಡಾ||ವ್ಹಿ. ಎಸ್. ಮಾಳಿ
ಪುಟ : ೮೪ ಬೆಲೆ : ರೂ. ೪೦

**ಜಲ-ತೀರ್ಥ** (ವೈಚಾರಿಕ ಪ್ರಬಂಧಗಳು) ಈಶ್ವರ ಕಮ್ಮಾರ
ಪುಟ : ೬೪ ಬೆಲೆ : ರೂ. ೩೦

**ಸಾವಿಲ್ಲದ ಪುಸ್ತಕಗಳು** (ಕವನ ಸಂಕಲನ) ಡಿ. ಗಣೇಶ್
ಪುಟ : ೪೮ ಬೆಲೆ : ರೂ. ೧೨

**ಕಾಗಿ - ಕೂಟ** (ಕಥಾ ಸಂಕಲನ) ಜಂಬುನಾಥ ಕಂಚ್ಯಾಣಿ
ಪುಟ : ೬೮ ಬೆಲೆ : ರೂ. ೩೦

**ವಸದ ರಾಮಲಿಂಗಾಂಕಿತ ವಚನಗಳು** ರಾಮಣ್ಣ ಬಿಲ್ವಪತ್ರಿ
ಪುಟ : ೯೩ ಬೆಲೆ : ರೂ. ೪೦

**ಚಿನ್ನದ ಚೆಂಡು/ವಿಷಮ ವಿವಾಹ** (ಗೀತರೂಪಕ)
ಎಚ್. ಎಂ. ತಿಮ್ಮಪ್ಪ ಕಲಸೆ
ಪುಟ : ೪೨ ಬೆಲೆ : ರೂ. ೧೫

**ಇಕ್ಕೇರಿ ಕ್ರಾಂತಿ** (ನಾಟಕ) ಉಳ್ಳೂರು ಸುಬ್ಬರಾವ್
ಪುಟ : ೪೮ ಬೆಲೆ : ರೂ. ೨೦

**ಕ್ಷಮಿಸು ತಂದೆ** (ಕವನ ಸಂಕಲನ) ಅಶೋಕ ಶೆಟ್ಟರ್
ಪುಟ : ೮೮ ಬೆಲೆ : ರೂ. ೪೦

**ಒಡಲುಗೊಂಡವ** (ವೈಚಾರಿಕ) ಡಾ|| ಕುಂಸಿ ಉಮೇಶ
ಪುಟ : ೧೨೮ ಬೆಲೆ : ರೂ. ೪೬

**ನೆಲದ ಅಳಲು** (ಕವನ ಸಂಕಲನ) ಮಂಜುನಾಥ ಗೊರಟ್ಟಿ
ಪುಟ : ೬೮ ಬೆಲೆ : ರೂ. ೨೪

**ಒಡೆಯಲಾರದ ಪ್ರತಿಮೆ** (ಕವನ ಸಂಕಲನ)
ಬಸವರಾಜ ವಕ್ಕುಂದ
ಪುಟ : ೧೦೬ ಬೆಲೆ : ರೂ. ೪೦

**ಪಾಂಚಾಲಿ** (ಪ್ರಬಂಧ ಸಂಕಲನ) ವೆಂಕಟರಾಜ ಪುಣಿಂಚತ್ತಾಯ
ಪುಟ : ೭೩ ಬೆಲೆ : ರೂ. ೩೦

**ಸ್ಥಳನಾಮ ವೀರರು** ಡಾ|| ಕೂಡ್ಲೂರು ವೆಂಕಟಪ್ಪ
ಪುಟ : ೧೦೮ ಬೆಲೆ : ರೂ. ೪೦

**ದ್ವೈತ್ಯದರ್ಶನ** ಎನ್. ಮಹಾಬಲೇಶ್ವರ ಭಟ್
ಪುಟ : ೭೧ ಬೆಲೆ : ರೂ. ೩೦

**ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಕಲಾವಂತೆಯರು**
ಡಾ|| ಕೆ. ಶ್ರೀಪತಿ ಹಳಗುಂದ
ಪುಟ : ೧೦೮ ಬೆಲೆ : ರೂ. ೩೮

ಮೇಲಿನ ಇಪ್ಪತ್ತಮೂರು ಕೃತಿಗಳ ಪ್ರಕಾಶಕರು
ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮



# ರಾಮನ ಕಟ್ಟೆ ಭೀಮನ ಕಟ್ಟೆ

'ಕಡಿದು ಕಟ್ಟೆ ಹಾಕುವದು' ಎನ್ನುವದು ಶ್ರಮ ಸಂಸ್ಕೃತಿಯನ್ನು ನಿರೂಪಿಸುವ ಕನ್ನಡದ ಅರ್ಥಗರ್ಭಿತ ನುಡಿಗಟ್ಟು. ವಿಶೇಷವಾಗಿ ಉತ್ತರ ಕರ್ನಾಟಕದಲ್ಲಂತೂ ಮಾತಿಗೆ ಮೊದಲು 'ಕಡಿದು ಕಟ್ಟೆ ಹಾಕೂ ಕೆಲಸ' ಎಂದು ಉಗ್ಗಡಿಸುತ್ತಿರುವದುಂಟು. ಇಲ್ಲಿ ಕಡಿಯುವದು ಎಂದರೆ ಭಾರವಾದ ಗುದ್ದಲಿಯಿಂದ ನೆಲ ಅಗೆಯುವದು ಎಂತಲೂ ಕಟ್ಟೆ ಹಾಕುವುದು ಎಂದರೆ ಹಾಗೆ ಅಗೆದು ಎಬ್ಬಿಸಿದ ತಕ್ಕೆ ಗಾತ್ರದ ಮಣ್ಣ ಹೆಂಟೆಯನ್ನು ಬದಿಗೆ ಎದೆಯ ಎತ್ತರಕ್ಕೆ ಒಡ್ಡು / ಕಟ್ಟೆಯಾಕಾರವಲ್ಲಿ ಒಟ್ಟಿ ನಿಲ್ಲಿಸುವದು ಎಂದೂ ಅರ್ಥ. ಕಡಿದು ಕಟ್ಟೆ ಹಾಕುವಂಥ ಕೆಲಸ ಯಾವನು ಮಾಡಿದ್ದಾನೋ ಅವನು ನಿಜವಾದ ಮಣ್ಣಿನ ಮಗ.

ನೆಲದ ಜತೆ ಕುಸ್ತಿ ಬಿದ್ದಂತೆ, ಬೆಳಗಿನ ತಂಪು ಹೊತ್ತಿನಲ್ಲಿ ಅಂಗೀ ಕಳೆದು, ಏರುಗಚ್ಚೆ ಹಾಕಿ, ಉಕ್ಕಿನ ನೀರು ಕುಡಿಸಿ ಚೂಪುಗೊಳಿಸಿದ್ದ ಭಾರವಾದ ಗುದ್ದಲಿಯನ್ನು ಉಸಿರ ಬಿಗಿಹಿಡಿದು ಮೇಲೆತ್ತಿ ನೆಲ ಕಡಿಯುವ ಸಾಹಸ ಹುಡುಗಾಟವಲ್ಲ. ಇಡೀ ದೇಹವನ್ನೇ ಹೆದೆಯೇರಿಸಿದ ಬಿಲ್ಲಿನಂತೆ ಬಾಗಿಸಿ, ನರನಾಡಿಗಳನ್ನು ಎಳೆದು ಹುರಿಗೊಳಿಸಿ ನೆಲ ಬಗೆಯುವಾಗ, ಪ್ರತಿ ಬಾರಿಯೂ ಉಸಿರಾಟದ ಗತಿಯನ್ನು ನಿಯಂತ್ರಣಕ್ಕೆ ತಂದುಕೊಂಡು, ದೇಹದ ತುಂಬ ರಕ್ತ ಉಕ್ಕುವಂತೆ ಮಾಡಿ, ದೇಹದ ಸಮಸ್ತ ಸ್ನಾಯುಗಳನ್ನು ಹಿಗ್ಗಿಸಿ, ಕುಗ್ಗಿಸಿ ಪ್ರತಿ ಏಟಿನ ನಂತರ ಮತ್ತೆ ಮೊದಲಿನ ತಹಬಂದಿಗೆ ತರುವದು. ಶರೀರದ ಉಸಿರಾಟದ ಲಯವನ್ನು ಆ ದೈಹಿಕ ಸಂಚಲನಕ್ಕೆ ತಕ್ಕಂತೆ ಒಗ್ಗಿಸಿಕೊಳ್ಳುವ ಬಗ್ಗಿಸಿಕೊಳ್ಳುವ 'ದೈಹಿಕ ಭಾಷೆ' ಅನುಭವಿಗಷ್ಟೇ ವೇದ್ಯವಾಗಬಲ್ಲ ಸಂಗತಿ. ಮಾಂಸಖಂಡಗಳ ಆ ಪರಿಯ ಸಂಚಲನಕ್ಕೆ ಏರುವ ದೇಹದ ತಾಪಮಾನವನ್ನು ನಿಯಂತ್ರಿಸಲು ಕುಡಿದ ನೀರೆಲ್ಲವೂ ಒಂದೇ ಸಮ ದೇಹದಿಂದ ಬಸಿದು ಹನಿಯುತ್ತಿರುತ್ತದೆ. ಕಾದ ರೇಡಿಯೇಟರನ್ನು ಆಗಾಗ ತಂಪುಗೊಳಿಸುವುದಕ್ಕಾಗಿಯೇ ಹತ್ತಿರದಲ್ಲಿ ತತ್ರಾಣಿ (ಮಣ್ಣಿನ ವಾಟರ್ ಬ್ಯಾಗ್) ಕಾದಿರುತ್ತದೆ.



ಇಷ್ಟೆಲ್ಲಾ ಯಾಕೆ ಹೇಳಿದೆನೆಂದರೆ, ನೆಲಮೂಲ ಸಂಸ್ಕೃತಿಯನ್ನೇ ಬಹುವಾಗಿ ನೆಚ್ಚಿರುವ ಭಾರತದಲ್ಲಿರುವ ಬಹುತೇಕ ಜನಸಮುದಾಯ ಕಟ್ಟೆ ಮೂಲದವರು. ಅಂದರೆ 'ಕಟ್ಟೆ ಸಂಸ್ಕೃತಿ'ಯನ್ನು ಹುಟ್ಟಾ ಮೈಗೂಡಿಸಿಕೊಂಡವರು. ಗ್ರಾಮ ಭಾರತದಲ್ಲಿ ಕಟ್ಟೆ ಸಂಸ್ಕೃತಿಗೆ ವಿಶೇಷ ಸ್ಥಾನ ಮಾನ. ಅನೇಕ ಗಟ್ಟಿ ನಿರ್ಧಾರಗಳನ್ನು ಕಟ್ಟೆಯ ಮೇಲೆ ತೆಗೆದುಕೊಳ್ಳುತ್ತಿರುವದಕ್ಕೆ ಬಹುದೊಡ್ಡ ಪರಂಪರೆಯಿದೆ. ಕಟ್ಟೆಗೆ 'ಜಗುಲಿ' ಎಂದೂ 'ಅಣೆಕಟ್ಟೆ' ಎಂದೂ ವಿಶೇಷ ಅರ್ಥಗಳಿರುವಂತೆಯೇ ಪಂಚಾಯಿತಿ ಕಟ್ಟೆ, ಸುಂಕದಕಟ್ಟೆ, ಅಗಸೆಕಟ್ಟೆ, ಗುಡಿಕಟ್ಟೆ ಅರಳೀಕಟ್ಟೆ, ಹರಟೆಕಟ್ಟೆ ಮುಂತಾದ ವ್ಯಾಪಕ ಸ್ಥಳ ಪರಂಪರೆಯೇ ಈ ಕಟ್ಟೆಗಿದೆ. ದಾಸ ಪರಂಪರೆಗೆ ಸೇರಿದ ಹೆಳವನಕಟ್ಟೆ ಗಿರಿಯಮ್ಮನನ್ನು ಆಕೆಯ 'ಪಟ ರಾಮಾಯಣ'ವನ್ನೂ ಇಲ್ಲಿ ಉದಾಹರಿಸಬಹುದು. 'ಜಗುಲಿ' ಎಂದರೆ ಒಂದು ಕಾಲದಲ್ಲಿ ಮನೆತನದ ಪೂರ್ವಿಕರ ಬೆಳ್ಳಿ ಮುಖವಾಡಗಳನ್ನಿಟ್ಟು ಹಿರಿಯರ ಹಬ್ಬದಂದು ಪೂಜೆ ಸಲ್ಲಿಸುವ ದೇವರ ಕೋಣೆಯಲ್ಲಿರುತ್ತಿದ್ದ ಎತ್ತರದ 'ಪೀಠ' ಆಗಿದ್ದದ್ದು; ಕಾಲಕ್ರಮೇಣ ಆಚರಣೆ ಕಳೆದುಕೊಳ್ಳುವುದರ ಜೊತೆಗೆ ಜಗುಲಿಗಿದ್ದ ವಿಶಿಷ್ಟ ಅರ್ಥವೂ ಮಹತ್ವವೂ ಮಾಸಿಹೋದವು. ಹಾಗೆಯೇ ಚಾವಡಿ ಕಟ್ಟೆಗೆ ಇದ್ದ ನ್ಯಾಯಿಕ ಮಹತ್ವವೂ ಕಳೆದುಹೋಗಿ, ಚಿಂತಕರ ಕಟ್ಟೆ, ಹರಟೆ ಕಟ್ಟೆ ಹೋಗಿ ಕಡೆಗೆ ಕಾಲಹರಣ ಮಾಡುವ ಸೋಮಾರಿಗಳ ಕಟ್ಟೆ ಎಂಬ ಸೀಮಿತ ಅರ್ಥದಲ್ಲಿ ಬಳಕೆಯಾಗುವ ದುರ್ಗತಿ ಈಗ ಕಟ್ಟೆಗೆ ಪ್ರಾಪ್ತವಾಯಿತು. ಇರಲಿ.

ರಾಮನಕಟ್ಟೆ, ಭೀಮನಕಟ್ಟೆಗಳಿರುವಂತೆ ನನ್ನ ಊರಲ್ಲಿ ಕಾಮನ ಕಟ್ಟೆಯಿದೆ. ಪ್ರತಿವರ್ಷ ಹೋಳಿ ಹುಣ್ಣಿಮೆಯಂದು ರತಿ-ಮನ್ಮಥರ ಸುಂದರ ಮೂರ್ತಿಗಳನ್ನು ಅಲ್ಲಿ ಕೂರಿಸಿ ಸಾಂಸ್ಕೃತಿಕ ಹಬ್ಬ ಆಚರಿಸುವ ರೂಢಿಯಿದೆ. ನಾನು ಇಷ್ಟೆಲ್ಲ ಪೀಠಿಕೆ ಹಾಕುತ್ತಿರುವುದು ಈ ಬಗೆಯ ಕಟ್ಟೆಯ ಬಗೆಗಲ್ಲ.

> ರಾಮಾಯಣ ಕತೆಯನ್ನಾಧರಿಸಿ ಕಾವ್ಯ ಬರೆದವರಲ್ಲಿ ಕವಿ ವಾಲ್ಮೀಕಿಯೇ ಮೊದಲಿಗನಲ್ಲ. ಪ್ರಾಕೃತದಲ್ಲಿ ಹರಿಷೇಣನಂಥ ಇನ್ನೂ ಪ್ರಾಚೀನರು, ಬೌದ್ಧರು, ರಾಮಾಯಣ ಕತೆಯನ್ನು ತಮ್ಮ ಕೃತಿಗಳಲ್ಲಿ ತಂದದ್ದಕ್ಕೆ ಉಲ್ಲೇಖಗಳು ಸಿಗುತ್ತವೆ. ಸೇತುವೆ ಪ್ರಸಂಗ ಬರುವದು ವಾಲ್ಮೀಕಿಯಿಂದ ಶುರುವಾಗುತ್ತದೆ. ಅಳಿಲು ಕೂಡ ಸೇತುವೆ ನಿರ್ಮಾಣದಲ್ಲಿ ತೊಡಗಿತ್ತೆಂದು ನಂಬುವದಾದರೆ ಅಂಥ ಅವಾಸ್ತವ, ಅತಿರೇಕದ ನಂಬಿಕೆಗೆ ಇಂಬುಕೊಡುವದೆಂದರೆ ವೈಜ್ಞಾನಿಕ, ವೈಚಾರಿಕ ಕುರುಡುತನವನ್ನು ಸ್ವತಃ ಆವಾಹಿಸಿಕೊಂಡಂತೆ. ಶ್ರದ್ಧೆ-ನಂಬಿಕೆಗೆ ಒಂದಿಷ್ಟಾದರೂ ನೆಲೆ ಇರಬೇಡವೆ? ಭಾರತೀಯ ಮಹಾಕಾವ್ಯಗಳಾದ ರಾಮಾಯಣ-ಮಹಾಭಾರತಗಳ ಬಗೆಗೆ ಗೌರವ ಇಟ್ಟುಕೊಂಡೇ ಈ ಮಾತು ಹೇಳಬೇಕಾಗುತ್ತದೆ.

**ಈರಪ್ಪ ಎಂ. ಕಂಬಳಿ**

'ಸೇತುವೆ ಕಟ್ಟೆ' - ಭಾರತದ ದಕ್ಷಿಣ ತುದಿಯಲ್ಲಿರುವ ರಾಮಸೇತು ಅರ್ಥಾತ್ ಆ್ಯಡಂ ಬ್ರಿಜ್ ಎಂದು ಕರೆಯಲಾಗುವ ನಿಸರ್ಗನಿರ್ಮಿತ ಕಟ್ಟೆಯನ್ನು ಕುರಿತು.

ಸೇತುಸಮುದ್ರಂ ಕಡಲ್ಗಾಲುವೆ ನಿರ್ಮಾಣ ಸಂಬಂಧದಲ್ಲಿ ಕೇಂದ್ರ ಸರ್ಕಾರದ ಸೂಚನೆಯಂತೆ ಪುರಾತತ್ವ ಇಲಾಖೆಯು ರಾಮಾಯಣದ ರಾಮನನ್ನು ಕುರಿತ ದಾಖಲೆಗಳು ತನ್ನ ಬಳಿ ಇಲ್ಲವೆಂದೂ ಅದೇ ರೀತಿ ರಾಮಸೇತು ನಿರ್ಮಿಸಿದ ಐತಿಹಾಸಿಕ ಪುರಾವೆಗಳೂ ತನ್ನ ಬಳಿ ಅಲಭ್ಯವೆಂದೂ ಅದೇನಿದ್ದರೂ ನಿಸರ್ಗ ನಿರ್ಮಿತ ಕಟ್ಟೆಯೆಂದೂ ವಸ್ತುಸ್ಥಿತಿಯನ್ನು ವಿವರಿಸಿದಂತೆ ಸರ್ವೋಚ್ಚ ನ್ಯಾಯಾಲಯಕ್ಕೆ ಅಫಿಡವಿಟ್ ಸಲ್ಲಿಸಿತ್ತು. ಅಷ್ಟೇ ನೆವ ಸಾಕಾಗಿತ್ತು. ಸಂಘ ಪರಿವಾರ ಹುಯಿಲೆಬ್ಬಿಸಿದ ಕೂಡಲೇ ಯು.ಪಿ.ಎ. ಸರ್ಕಾರದ ಹಿರಿಯ ಹುದ್ದರಿ ಕಾಂಗ್ರೆಸ್ ಸತ್ಯವನ್ನು ಅರಗಿಸಿಕೊಳ್ಳಲಾಗದೆ ಅಫಿಡವಿಟ್ ವಾಪಸ್ಸು ಪಡೆಯಲು ಮುಂದಾಯಿತು - 'ಅಯ್ಯೋ ರಾಮಾ' ತನಗೇಕೆ ಇಲ್ಲದ ಉಸಾಬರಿಯೆಂದು ತಾನು ಬಚಾವಾಗಲು ನೋಡಿತು. ಹಿಂದೆ ಯಾವ ಪಕ್ಷದ ನಾಯಕರು ಅದಕ್ಕೆ ಅಂಗೀಕಾರ ನೀಡಿದ್ದರೋ ಅದೇ ಪಕ್ಷದವರು ಈಗ ವಿರೋಧಿಸುತ್ತಿರುವುದು; ಗುಮ್ಮನ ಗುಸುಕನಂತೆ ಸುಮ್ಮನಿರುವುದು ಎಂಥ ವಿಪರ್ಯಾಸ. ಅದರ ನಿರ್ಮಾಣದ ಹಿಂದಿರುವ ಸಾಧಕ ಬಾಧಕಗಳ ಬಗೆಗೆ ತಲೆ ಕೆಡಿಸಿಕೊಳ್ಳದೇ ಕೇವಲ ರಾಜಕೀಯ ಉದ್ದೇಶಕ್ಕಾಗಿಯೇ ಅದನ್ನು ವಿರೋಧಿಸುವದೆಂದರೆ ಅದು ನಾಚಿಕೆಗೇಡಿನ ಸಂಗತಿ. ರಾಮ ಈ ದೇಶದ ನೂರು ಕೋಟಿ ಜನರ ದೇವರು ಎಂದೆಲ್ಲ ಬೊಗಳೆ ಬಿಡುತ್ತಿರುವದು ಇನ್ನೂ ಹಾಸ್ಯಾಸ್ಪದ. ಅದು ಕಾಮಾಲೆ ಕಣ್ಣಿನ ನೋಟವಿದ್ದಿರಬಹುದು. ಇಲ್ಲಾ ಗೊತ್ತಿದ್ದೇ ಸುಳ್ಳು ಹೇಳುವ ಆತ್ಮವಂಚನೆಯಿರಬಹುದು. ಅದನ್ನು ರಾಜಕೀಯ ಹಿತಾಸಕ್ತಿಗಾಗಿ ಮಾಡುವ ಹುಚ್ಚಾಟವೆಂದು ಉಪೇಕ್ಷಿಸಿದರೂ, ಈ ನೆಲದ ವಿದ್ವಾಂಸರು, ಪ್ರಜ್ಞಾವಂತರು ಎಂದು ಕರೆಸಿಕೊಳ್ಳುವವರ ಮೆದುಳಿಗೆ ಲಕ್ವ ಹೊಡೆದಿದೆಯೆ ಎಂಬ ಅನುಮಾನ ಬರುತ್ತದೆ. ಇವರೆಲ್ಲ ಕಲ್ಪನೆ ಮತ್ತು ವಾಸ್ತವಗಳ ನಡುವಿನ ಸ್ಪಷ್ಟ ಅಂತರವನ್ನೇ ಗುರುತಿಸಲಾರದಷ್ಟು 'ಕುರುಡು ನಂಬಿಕೆ'ಗೆ ಗುರಿಯಾಗಿದ್ದಾರೆಯೆ ಅನ್ನುವುದು ನನ್ನ ಅನುಮಾನ. ನನ್ನ ಜತೆ ಬರುವುದಾದರೆ, ಕರ್ನಾಟಕವೊಂದರಲ್ಲೇ ನನಗೆ ಗೊತ್ತಿರುವ ನಾಲ್ಕು ಕಡೆ ಬಂಡೆಯ ಮೇಲೆ ನೈಸರ್ಗಿಕ ಗುರುತುಗಳನ್ನು ತೋರಿಸುತ್ತೇನೆ. ಈ ನಾಲ್ಕು ಕಡೆ 'ರಾವಣ ಸೀತೆಯ ಸೆರಗನ್ನು ಸೆಳೆದದ್ದು ಇಲ್ಲಿಯೇ' ಎಂದು ಸ್ಥಳೀಕರು ಕಣ್ಣಾರೆ ಕಂಡಿರುವಂತೆಯೇ ಕತೆ ಕಟ್ಟಿ ಹೇಳುತ್ತಾರೆ. ದೇಶದ ತುಂಬ ನಿಸರ್ಗ ನಿರ್ಮಿತ ಅಂಥ ಸ್ಥಳ ಪುರಾಣಗಳು ಬೇಕಾದಷ್ಟು ಸಿಗುತ್ತವೆ. ಅವೆಲ್ಲವನ್ನೂ ನಂಬುತ್ತಾ ಹೋದರೆ ಮೂರ್ಖತನದ ಪರಮಾವಧಿಯಾಗುತ್ತದೆ.

ರಾಮಾಯಣ-ಮಹಾಭಾರತಗಳನ್ನು ನಮ್ಮ ನೆಲದ ಮಹಾಕಾವ್ಯಗಳೆಂದೂ ಕವಿಕಲ್ಪನೆಯ ಸೃಜನಶೀಲ ಕೃತಿಗಳೆಂದೂ ಶುದ್ಧ ಮನಸ್ಸಿನಿಂದ ಒಪ್ಪಿಕೊಳ್ಳುವುದರಲ್ಲಿ ಯಾವ ಬಾಧಕವೂ ಇಲ್ಲ. ಅದನ್ನು ಬಿಟ್ಟು, ಯಾವುಯಾವದಕ್ಕೋ ಆರೋಪಿಸ ಹೋಗುವದು; ಇಲ್ಲ ಸಲ್ಲದುದನ್ನು ಇದೆಯೆಂದು ಸಾಧಿಸಲು ಹೆಣಗುವದು – ಒಂದು ರೀತಿಯ ಧೂರ್ತತನವೇ ಸೈ. ಗಾಂಧಿ ಕನಸಿನ 'ರಾಮರಾಜ್ಯ' ಎಂದರೆ ಅದನ್ನು ಗಾಂಧೀಜಿ ಪರಿಕಲ್ಪನೆಯ 'ಸುಖೀರಾಜ್ಯ' ಎಂದು ಪರಿಭಾವಿಸುವಲ್ಲಿಯೇ ನಿಜವಾದ ಅರ್ಥವಿದೆ. ಗಾಂಧೀಜಿ ಪ್ರಾಣಬಿಡುವಾಗ 'ಹೇ ರಾಮ್' ಎಂದು ಉದ್ಗರಿಸಿದ್ದನ್ನು ಕೂಡ ಮಹಾತ್ಮರು ರಾಮಭಕ್ತರಾಗಿದ್ದರು ಎಂದು ಹಲುಬುವದಾದರೆ, ಅವರನ್ನು ಕೊಂದ ದುಷ್ಟನೂ ನಾಥೂರಾಮನೇ ಆಗಿದ್ದನಲ್ಲವೇ ? 'ಅಯ್ಯೋ ರಾಮಾ !' ಈ ದೇಶಕ್ಕೆ ರಾಮನ ಹೆಸರು ಮರ್ಯಾದೆ ತರುವ ಪುರುಷೋತ್ತಮನ ಆದರ್ಶವಾಗುವ ಬದಲು ಇತ್ತೀಚೆಗೆ ರಾಮನ ಹೆಸರು ಭಂಗಿ ಸೇದಿದವರಿಗೆ ಮೆದುಳನ್ನು ಆವರಿಸುವ 'ನಿಶೆ'ಯಂತೆ ಆಗಿಹೋಗಿರುವುದು ಸೋಜಿಗಪಡಬೇಕಾದ ಸಂಗತಿ. ಕಳೆದ ವರ್ಷ ನನ್ನ ಚಿಕ್ಕ ನಾದಿನಿ ಕೇಳಿದ್ದಳು : ''ಭಾವಾ, ರಾಮರಸ-ಸೋಮರಸ ಅಂದರೇನು ? ಪುರಾಣ ಕಾಲದಿಂದಲೂ ಋಷಿ ಮುನಿಗಳು ಸ್ವತಃ ತಯಾರಿಸಿಕೊಂಡು ಕುಡಿಯುತ್ತಿದ್ದರಂತಲ್ಲವೇ ?'' ಹಾಗೆಂದು ಕೇಳಿದ್ದಕ್ಕೆ ನಾನು ತಲೆದೂಗಬೇಕಾಯಿತು. ಬುದ್ಧಿಗೆ ಮಂಕು ಹಿಡಿಸುವಂಥ ರಸಾಯನವನ್ನು ಪ್ರಪಂಚದ ಚರಿತ್ರೆಯುದ್ದಕ್ಕೂ ಮನುಷ್ಯ ಕುಡಿದು ಕೊಂಡುಬಂದಿದ್ದಾನೆ. ಭಾರತೀಯ ಪುರಾಣಗಳಲ್ಲಿ ಉಲ್ಲೇಖವಾದ ಆ 'ರಾಮರಸ' ಇವತ್ತಿಗೂ ಹಳೆಯ ಮದಿರೆಯಂತೆ ಆ ಹೆಸರೇ ಮತ್ತು ಬರಿಸುವಂತಿದೆ. ರಾಜಕೀಯ ಪಕ್ಷವೊಂದು ಅದಕ್ಕೆ ಜೋತುಬಿದ್ದ ಮೇಲಿಂದ ಜನಸಮುದಾಯವನ್ನು ಆ ಮೂಲಕ ಸಮೂಹ ಸನ್ನಿಗೆ ಗುರಿ ಮಾಡುತ್ತಿರುವುದು ಸುಳ್ಳೆ ?

ಅಂದ ಹಾಗೆ, ಭೀಮನಕಟ್ಟೆಯ ಪ್ರಸ್ತಾಪವನ್ನೇ ಮರೆತಿದ್ದೆ. ತೀರ್ಥಹಳ್ಳಿ-ಆಗುಂಬೆ ರಸ್ತೆಯಲ್ಲಿ ಮೇಗರವಳ್ಳಿ ಹತ್ತಿರ ರಾಮಚಂದ್ರಪುರ ಎಂಬ ಊರಿದೆ. ಹತ್ತಿರದಲ್ಲಿಯೇ ಹರಿಯುವ ತುಂಗಾ ನದಿಯಲ್ಲಿ ದೊಡ್ಡ ದೊಡ್ಡ ಗಾತ್ರದ ಗುಂಡುಗಳನ್ನು ಅಡ್ಡಡ್ಡ ಒಡ್ಡಿನಂತೆ ಇಟ್ಟುಕೊಂಡು ಹೋದಂತೆ, ನದಿ ನೀರು ಅಲ್ಲಿ ತುಸು ನಿಂತು ಹರಿಯುವಂತೆ ಭಾಸವಾಗುವ ನೈಸರ್ಗಿಕ ತಾಣವಿದೆ. ಸ್ಥಳೀಯರು ಅದಕ್ಕೆ 'ಭೀಮನ ಕಟ್ಟೆ' ಎಂದು ಹೆಸರಿಟ್ಟಿದ್ದಾರೆ. ಎದುರುಗಡೆ ಅಷ್ಟು ದೂರದಲ್ಲಿ ಕಾಣುವ ಬೆಟ್ಟಕ್ಕೆ ಕೋಳಿಗುಡ್ಡ ಎಂದೂ ಕರೆಯುತ್ತಾರೆ. ಅಲ್ಲಿ ದೂರ್ವಾಸಮುನಿ ಕೂತು ತಪಸ್ಸನ್ನು ಆಚರಿಸುತ್ತಿದ್ದನಂತೆ. ಪಾಂಡವರು ರಾಮಚಂದ್ರಪುರದ ಬಳಿ ಬೀಡುಬಿಟ್ಟಿದ್ದಾಗ ದ್ರೌಪದಿಗೆ ಮಾಸಿಕ ಸ್ರಾವ. ಸರಿ, ತುಂಗೆಯನ್ನೇ ಕಟ್ಟಿ ನಿಲ್ಲಿಸಿ ಅಲ್ಲೊಂದು ಈಜುಕೊಳ ನಿರ್ಮಿಸಬೇಕೆಂದು ಭೀಮ ಪಣ ತೊಟ್ಟನಂತೆ. ಭೀಮನದು ಯಾವಾಗಲೂ ಆತುರದ ಪ್ರಕೃತಿ. ಒಂದೇ ರಾತ್ರಿಯಲ್ಲಿ ಬೆಳಕು ಹರಿಯುವುದರೊಳಗಾಗಿ ತುಂಗೆಯನ್ನು ಹಿಡಿದಿಡಲು ಕಟ್ಟೆ ಕಟ್ಟಲು ತೊಡಗಿದನಂತೆ. ಸ್ವಲ್ಪವೇ ದೂರದಲ್ಲಿ ಬೆಟ್ಟದಲ್ಲಿ ವಾಸಿಸುತ್ತಿದ್ದ ದೂರ್ವಾಸ ಮುನಿಗೆ ನೀರು ಸಿಕ್ಕದೆ ವ್ಯಗ್ರನಾದರೆ, ಮೊದಲೇ ಕೋಪಿಷ್ಠನಾದ ಆತನ ಸಿಟ್ಟಿಗೆ ಪಾಂಡವರು ಗುರಿಯಾಗುವುದು ಗ್ಯಾರಂಟಿಯೆಂದುಕೊಂಡ ಕೃಷ್ಣ ತನ್ನ ಮಾಮೂಲಿ ವರಸೆಯಲ್ಲಿ ಒಂದೇ ಕಲ್ಲಿಗೆ ಎರಡು ಹಕ್ಕಿ ಹೊಡೆದಂತೆ, ಗುಡ್ಡದಲ್ಲಿ ಅಡಗಿ ಮೂರನೇ ಜಾವಕ್ಕೆ ಮೊದಲೇ ಕೋಳಿಯಂತೆ ಕೂಗಿದಾಗ, ಬೆಳಕು ಹರಿಯಿತೆಂದು ಭಾವಿಸಿದ ಭೀಮ, ಕಟ್ಟೆ ಕಟ್ಟುವ ಕೆಲಸವನ್ನು ಅರ್ಧಕ್ಕೆ ಕೈಬಿಟ್ಟನಂತೆ. ಇದು ರಾಮಚಂದ್ರಪುರದ ಸ್ಥಳ ಪುರಾಣ. ಹೇಳೀಕೇಳಿ ತ್ರೇತಾಯುಗದ ರಾಮಚಂದ್ರಪುರಕ್ಕೆ ದ್ವಾಪರಯುಗದ ಕೃಷ್ಣ ಪಾಂಡವರು ಅಲ್ಲಿಗೆ ಯಾತಕ್ಕೆ ಬಂದಿದ್ದರೋ ಯಾರಿಗೂ ಗೊತ್ತಿಲ್ಲ. ಇಂಥ ಅಂತೆಕಂತೆಗಳ ಪುರಾಣಗಳಿಗೆ ಎಲ್ಲಿ ಪುರಾವೆಗಳನ್ನು ಹುಡುಕುವದು ?

ಮಹಾಕಾವ್ಯಗಳ ಲಕ್ಷಣವೇ ಇದು. ಜನಮನದಲ್ಲಿ ಬೇರುಬಿಟ್ಟ ಅವು, ನಿಸರ್ಗದಲ್ಲಿ ತುಸು ಅಚ್ಚರಿ ಹುಟ್ಟಿಸುವ ಅದ್ಭುತ ಸಂಗತಿ ಕಂಡರೆ ಸಾಕು ನಮ್ಮ ಜನ ರಾಮಾಯಣ-ಮಹಾಭಾರತಗಳಲ್ಲಿ ಬರುವ ಪಾತ್ರ-ಘಟನೆಗಳೊಂದಿಗೆ ಹೋಲಿಸಿದಂತೆ ತಳುಕು ಹಾಕುವುದು ಮಾಮೂಲು. ಯಾವನಾದರು ಆಜಾನುಬಾಹು – ಅಸಡ್ಡಾಳ ದೇಹದ ವ್ಯಕ್ತಿಯನ್ನು ಕಂಡಾಗ ಘಟೋತ್ಕಚನಿಗೆ ಹೋಲಿಸುವುದು, ಮನೆಯಂಗಳದಲ್ಲಿ ಬರೀ ಆರಂಭಶೂರತ್ವ ಕೊಚ್ಚಿಕೊಳ್ಳುವವನನ್ನು ಉತ್ತರ ಕುಮಾರನೆಂದು ಜರಿಯುವುದು ಅದನ್ನೇ ತೋರಿಸುತ್ತದೆ.

ಕಾವ್ಯವನ್ನು, ಅದರ ಸೊಗಸುಗಾರಿಕೆಯನ್ನು ಕಾವ್ಯದ ಕಣ್ಣಿನಿಂದ ನೋಡಿ ಆನಂದಿಸುವಲ್ಲಿಯೇ ಅದರ ಅರ್ಥವಂತಿಕೆಯಿದೆ. ಅದನ್ನು ಬಿಟ್ಟು ಅದಕ್ಕೆ ಚಾರಿತ್ರಿಕ ಆರೋಪ ಮಾಡುತ್ತ ಹೋದರೆ ಮೂರ್ಖತನವಾಗುತ್ತದೆ. ನಮ್ಮಲ್ಲಿ ಗ್ರಂಥಸ್ಥವಾಗಿರುವುದಕ್ಕಿಂತ ಮಿಗಿಲಾಗಿ ಮೌಖಿಕ ಪರಂಪರೆಯ ಜನಪದ ರಾಮಾಯಣಗಳೂ ಬೇಕಾದಷ್ಟಿವೆ. ಅಲ್ಲಿ ಬರುವ ಪಾತ್ರ-ಘಟನೆಗಳು ವಾಲ್ಮೀಕಿ ರಾಮಾಯಣಕ್ಕಿಂತ ಭಿನ್ನವಾಗಿವೆ. ಅದೇ ರೀತಿ ಪ್ರಾದೇಶಿಕ ಭಿನ್ನತೆಯನ್ನೂ ಹೊಂದಿ, ರಾಮಾಯಣ ಆಯಾ ಪ್ರದೇಶದ ಜನಾಂಗೀಯ ಆಚರಣೆಗನುಗುಣವಾಗಿ ಬದಲಾವಣೆಗೊಳ್ಳುತ್ತ ಹೋದುದನ್ನು ಗಮನಿಸಬೇಕು. ವಿಜಯನಗರ ಅರಸರ ಕಾಲದ ದಂಡನಾಯಕ ಪದ್ಮಸಾಲಿ ತಿಮ್ಮಣ್ಣ ರಚಿಸಿದ ರಾಮಾಯಣದಲ್ಲಿ, ಸುಂದರನಾದ ರಾವಣನ ಚಿತ್ರಪಟವೊಂದನ್ನು ದಾಸಿ ಸೀತೆಯ ಮಲಗುವ ಕೋಣೆಗೆ ತಂದು ದಿಂಬಿನಡಿ ಇರಿಸುತ್ತಾಳೆಂದೂ, ಏಕಾಂತದಲ್ಲಿ ಅದು ಥಕಪಕ ಕುಣಿಯುತ್ತಿತ್ತೆಂದೂ ಹೇಳಲಾಗಿದೆ. ಮಲೇಶಿಯಾ-ಜಕಾರ್ತಗಳಲ್ಲಿ ಪ್ರಚಲಿತವಿರುವ ರಾಮಾಯಣದಲ್ಲಿ ಸೀತೆಯನ್ನು ಕದ್ದೊಯ್ದ ರಾವಣ ತನ್ನ ಆಸೆಯನ್ನು ಮೊದಲು ಈಡೇರಿಸಿಕೊಳ್ಳುತ್ತಾನೆ. ಸಿಟ್ಟಿಗೆದ್ದ ರಾಮ ಆಗ ದಂಡೆತ್ತಿ ಹೋಗುತ್ತಾನೆ. ಯಾಕೆಂದರೆ ರಾಮನಿಗೆ ಯುದ್ಧ ಸಾರುವಷ್ಟು ಸಿಟ್ಟು ಬರಬೇಕಾದರೆ ಸುಮ್ಮನೇನಾ ಎನ್ನುವ ಪ್ರಶ್ನೆಗೆ ಉತ್ತರವಿದೆ ಅಲ್ಲಿ.

ಅಷ್ಟು ದೂರ ಹೋಗುವುದು ಬೇಡವೆಂದಾದರೆ, ಕನ್ನಡದಲ್ಲಿ ಸೊಗಸಾದ ಭಾವಗೀತೆ ಬರೆದ ಕವಿ ಬೆಟಗೇರಿ ಕೃಷ್ಣಶರ್ಮರ ಕವಿತೆಯ ಸಾಲುಗಳಿವು :

**ಫಲ**

ಬಿರುಗಾಳಿಯ
ಬೀಜ ಬಿತ್ತಿ
ತಂಗಾಳಿಯ ಫಲ
ಪಡೆಯಬಹುದೆ ?
ಹಗೆಯ ನಡುವೆ
ನೆಲೆ ನಿಂತು
ಮುಗುಳುನಗೆ
ಬೀರಬಹುದೆ ?

ಡಿ. ವಿ. ಬಡಿಗೇರ
ತೆಗ್ಗಿನ ಪೇಟೆ ಓಣಿ,
ಗದಗ - ಬೆಟಗೇರಿ - ೫೮೨ ೧೦೨

ರಾಮ ರಾಮ ಎಂದು ಹೊಗಳೀ ಹೊಗಳತೀರಿ
ರಾಮ ಏನು ಶುದ್ಧ
ಮಂದಿ ಮಾತು ಕೇಳಿ ತನ್ನ ಮಡದಿಯ
ಅಡವಿಗಟ್ಟಿದ್ದ.

ಇನ್ನೂ ಹಿಂದಕ್ಕೆ ಹೋದರೆ ನೇಮಿಚಂದ್ರನ 'ಲೀಲಾವತಿ ಪ್ರಬಂಧ'ದಲ್ಲಿ ಬರುವ ಪದ್ಯವನ್ನು ನೋಡಿರಿ:

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಂ
ಮುಟ್ಟುಗೆ ಮುಟ್ಟದಿರ್ಕೆ ನಭಮಂ ಪರನಂ ನರನೊತ್ತಿ ಗಂಟಲಂ
ಮೆಚ್ಚುಗೆ ಮೆಚ್ಚದಿರ್ಕೆ ಕಪಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್
ಮುಟ್ಟಿದರಿಕ್ಕಿ ಮೆಟ್ಟಿದರಿದೇನಳವಗ್ಗಳಮೋ ಕವೀಂದ್ರರಾ.

ಕಪಿ ಸಂತತಿ ಕಟ್ಟೆಯನ್ನು ಕಟ್ಟಿತೋ ಇಲ್ಲವೋ, ವಾಮನ ಮೂಲೋಕಗಳನ್ನು ಮೆಟ್ಟಿದನೋ ಇಲ್ಲವೋ, ಆದರೆ ಕಪಿಗಳು ಮಾತ್ರ ತಮ್ಮ ಕೃತಿಗಳಲ್ಲಿ ಕಟ್ಟಿದರು, ಮೆಟ್ಟಿದರು, ಅದೇನು ಹಿರಿಮೆಯೇ ಎಂದು ಪ್ರಶ್ನಿಸುವುದನ್ನು ಗಮನಿಸಬೇಕು.

ಆಧುನಿಕ ದೇಶೀ ಕವಿಯೊಬ್ಬ 'ಸುಳ್ಳೆ ಸುಳ್ಳಮ್ಮ ಸುಳ್ಳೇ' ಎಂದು ಆರಂಭಿಸಿ :

ರಾಮನು ದಶರಥಗುಟ್ಟಿದ್ದು ಸುಳ್ಳು
ಸೀತೆಯ ರಾಮಗೆ ಕೊಟ್ಟಿದ್ದು ಸುಳ್ಳು
ರಾವಣ ಸೀತೆಯ ಕದ್ದಿದ್ದು ಸುಳ್ಳು
ಹನುಮಂತ ಸೇತುವೆ ಕಟ್ಟಿದ್ದು ಸುಳ್ಳು

ಎಂದು ಹಾಡುತ್ತಾನೆ. ಹಾಗೆಂದು ಹೇಳಿದಾಕ್ಷಣ ಯಾರೂ ಎಗರಿಬೀಳಬೇಕಾಗಿಲ್ಲ. ಕಾವ್ಯವನ್ನು ಕಾವ್ಯದ ಕಣ್ಣಲ್ಲಿ ನೋಡುವ ಆರೋಗ್ಯಕರ ಮನಸ್ಸು ರೂಢಿಸಿಕೊಳ್ಳಬೇಕಾಗಿದೆ. ಅದು ಇವತ್ತಿನ ಜರೂರು ಕೂಡ.

ರಾಮಜನ್ಮಭೂಮಿಯಿರಲಿ, ರಾಮಸೇತುವಿರಲಿ, ಇಂಥ ವಿಷಯಗಳಲ್ಲಿ ವಿಜ್ಞಾನಿ, ಇತಿಹಾಸಕಾರ ಮತ್ತು ಪುರಾತತ್ವಜ್ಞರು ಹೇಳುವ ಅಭಿಪ್ರಾಯಗಳಿಗೆ ಬೆಲೆ ಸಿಗಬೇಕಲ್ಲದೆ, ಧಾರ್ಮಿಕ ಭಾವನೆಗಳನ್ನು ಕೆರಳಿಸುವಂಥ ಯಾರು ಯಾರದೋ ಮಾತುಗಳಿಗಲ್ಲ. ವೈಜ್ಞಾನಿಕವಾಗಿ, ಭೌಗೋಳಿಕ ವಸ್ತುನಿಷ್ಠ ದಾಖಲೆಗಳನ್ನು ಮಾತ್ರ ಇರಿಸಿಕೊಂಡಿರುವ ಭಾರತ ಪುರಾತತ್ವ ಸಮೀಕ್ಷಾ ಇಲಾಖೆಯ ಬಳಿ ರಾಮಾಯಣ-ಮಹಾಭಾರತಗಳಂಥ ಕಾಲ್ಪನಿಕ ಪುರಾಣ ಕಾವ್ಯಗಳ ನಾಯಕರ ಬಗೆಗಿನ ದಾಖಲೆಗಳಾದರು ಹೇಗೆ ಸಿಗಲು ಸಾಧ್ಯ ? ಹೀಗಾಗಿ, ಅದು ತಾನು ನಡೆಸಿದ ಭೌಗೋಳಿಕ ಸಮೀಕ್ಷೆಯ ಪ್ರಕಾರ ಅದನ್ನು ಮಾನವ ನಿರ್ಮಿತ ಎನ್ನಲಾಗದು; ಅಲ್ಲಿರುವದು ಸುಣ್ಣದ ಗುಡ್ಡಗಳು, ಸಾವಿರಾರು ವರ್ಷಗಳ ಹಿಂದೆ ಸ್ವಯಂ ಸೃಷ್ಟಿಗೊಂಡ ಮತ್ತು ನೈಸರ್ಗಿಕ ಕಲ್ಲುಬಂಡೆಗಳ ಒಡ್ಡು ಎಂದು ವರದಿ ಮಾಡಿದ್ದು ಯಥೋಚಿತವೇ ಇತ್ತು. ತಮ್ಮ ಆಸನದ ಕೆಳಗೆ ಯಾವಾಗ ನೀರು ನುಗ್ಗುತ್ತದೆಂದು ಖಾತರಿಯಾಗುತ್ತಿದ್ದಂತೆ ಕೇಂದ್ರ ಸರ್ಕಾರದಲ್ಲಿನ ಮುಂದಾಳು ಪಕ್ಷ ಕಾಂಗ್ರೆಸ್ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಿದ್ದ ಅಫಿಡವಿಟ್ಟು ಹಿಂತೆಗೆದುಕೊಳ್ಳಲು ಮುಂದಾಯಿತು. ಹಾಗೆ ಮಾಡಿದ್ದು ಕೇವಲ ರಾಜಕೀಯ ಕಾರಣಕ್ಕಾಗಿ, ಮತ ಬ್ಯಾಂಕಿಗಾಗಿ ಎನ್ನುವುದು ಸೂರ್ಯನಷ್ಟೇ ಸತ್ಯ.

ಕಾವ್ಯ-ಪುರಾಣಗಳ ಆಸ್ವಾದನೆಯಲ್ಲಿ ಆ ಭಾವಪರವಶತೆಯೇನೋ ಸರಿ. ಆದರೆ, ದೇಶದ ಸಾಮಾಜಿಕ, ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದ ಸಂಗತಿಗಳ ಬಗೆಗೆ ಯೋಚಿಸುವಾಗ ಗೊತ್ತಿದ್ದೋ ಗೊತ್ತಿಲ್ಲದೆಯೋ ಅಂಥ ಭಾವುಕತೆಗಾಗಲೀ, ಭಾವಪರಾಧೀನತೆಗೆ ಈಡು ಮಾಡುವಂಥ ಮಾತುಗಳನ್ನಾಡುವುದಾಗಲಿ ಸರ್ವಥಾ ಸಲ್ಲದು. ಇಡೀ ದೇಶದ ಜನಸಂಖ್ಯೆಯೇ ನೂರಾ ಹತ್ತು ಕೋಟಿ ಮುಟ್ಟದಿರುವಾಗ ರಾಮನ ವಿಷಯ ಬಂದರೆ ಸಾಕು ದೇಶದ ನೂರು ಕೋಟಿ ಜನರ ಭಾವನೆಗೆ ಧಕ್ಕೆಯಾಗುತ್ತದೆಂದು ಹುಯಿಲೆಬ್ಬಿಸುವುದೆಂದರೇನು ? ಈ ದೇಶದಲ್ಲಿ ಹಿಂದುಗಳನ್ನು ಬಿಟ್ಟರೆ ಬೇರೆ ಯಾರೂ ಇಲ್ಲವೇ ? ಸಾರ್ವಜನಿಕ ರಂಗದಲ್ಲಿದ್ದು ಇಂಥ ಹಸಿ ಸುಳ್ಳು ಹೇಳುವ ಮೂಲಕ ಬಾಯಿ ಬಡಿಯುತ್ತಾರೆಂದರೆ ಅವರಿಗೆ ಕಿಂಚಿತ್ತಾದರೂ ಸಾಮಾಜಿಕ ಜವಾಬ್ದಾರಿ ಬೇಡವೆ? ತಳಬುಡವಿಲ್ಲದ ನಂಬಿಕೆಗೇ ಜೋತು ಬೀಳುವುದೆಂದರೆ, ಅನಾಗರಿಕ-ಶಿಲಾಯುಗದ ಕಾಲಕ್ಕೆ ಮತ್ತೆ ಕೊಂಡೊಯ್ಯುವ ಹುನ್ನಾರವೆ ? ಅದು ಹೇಗೆ ನಾಗರಿಕ ಸಮಾಜ ಇದನ್ನು ಒಪ್ಪಿಕೊಳ್ಳಲು ಸಾಧ್ಯ ? ಇಂಥ ಸಂಗತಿಗಳನ್ನು ಸಾರಾಸಗಟಾಗಿ ತಳ್ಳಿ ಹಾಕಬೇಕಾಗಿದ್ದರೂ ಕೆಲವು ವಿದ್ವಾಂಸರು ತಿಪ್ಪೆ ಸಾರಿಸುವಂಥ ಕೆಲಸದಲ್ಲಿ ತೊಡಗಿ ಅವರೇ ದೊಡ್ಡ ಗೊಂದಲಿಗರಾಗುತ್ತಿರುವುದು ಇನ್ನೂ ಅಚ್ಚರಿಯ ಸಂಗತಿ.

ಹಾಗೆ ನೋಡಿದರೆ, ರಾಮಾಯಣ ಕತೆಯನ್ನಾಧರಿಸಿ ಕಾವ್ಯ ಬರೆದವರಲ್ಲಿ ಕವಿ ವಾಲ್ಮೀಕಿಯೇ ಮೊದಲಿಗನಲ್ಲ. ಪ್ರಾಕೃತದಲ್ಲಿ ಹರಿಷೇಣನಂಥ ಇನ್ನೂ ಪ್ರಾಚೀನರು, ಬೌದ್ಧರು, ರಾಮಾಯಣ ಕತೆಯನ್ನು ತಮ್ಮ ಕೃತಿಗಳಲ್ಲಿ ತಂದದ್ದಕ್ಕೆ ಉಲ್ಲೇಖಗಳು ಸಿಗುತ್ತವೆ. ಸೇತುವೆ ಪ್ರಸಂಗ ಬರುವದು ವಾಲ್ಮೀಕಿಯಿಂದ ಶುರುವಾಗುತ್ತದೆ. ಅಳಿಲು ಕೂಡ ಸೇತುವೆ ನಿರ್ಮಾಣದಲ್ಲಿ ತೊಡಗಿತ್ತೆಂದು ನಂಬುವದಾದರೆ ಅಂಥ ಅವಾಸ್ತವ, ಅತಿರೇಕದ ನಂಬಿಕೆಗೆ ಇಂಬುಕೊಡುವದೆಂದರೆ ವೈಜ್ಞಾನಿಕ, ವೈಚಾರಿಕ ಕುರುಡುತನವನ್ನು ಸ್ವತಃ ಆವಾಹಿಸಿಕೊಂಡಂತೆ. ಶ್ರದ್ಧೆ-ನಂಬಿಕೆಗೆ ಒಂದಿಷ್ಟಾದರೂ ನೆಲೆ ಇರಬೇಡವೆ ? ಭಾರತೀಯ ಮಹಾಕಾವ್ಯಗಳಾದ ರಾಮಾಯಣ-ಮಹಾಭಾರತಗಳ ಬಗೆಗೆ ಗೌರವ ಇಟ್ಟುಕೊಂಡೇ ಈ ಮಾತು ಹೇಳಬೇಕಾಗುತ್ತದೆ.

ಈರಪ್ಪ ಎಂ. ಕಂಬಳಿ
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ,
ಕಾವೇರಿ ಭವನ 'ಎಫ್' ಬ್ಲಾಕ್, ಬೆಂಗಳೂರು - ೫೬೦ ೦೦೯



# 'ಪವಿತ್ರ' ಗೋವು ಎಷ್ಟು ಸತ್ಯ ಮತ್ತು ಎಷ್ಟು ಮಿಥ್ಯ ?

■ ಸುರೇಶ ಬಾಕ್ರಬೈಲು

**ವರ್ತಮಾನಕಾಲದಲ್ಲಿ ಗೋವು**

ಗೋವಿನ ವಿಷಯವು ನಮ್ಮ ದೇಶದಲ್ಲಿ ಕಳೆದ ಹಲವಾರು ವರ್ಷಗಳಿಂದ ತೀವ್ರ ಭಾವೋದ್ವೇಗವನ್ನು ಹಾಗೂ ವಿವಾದಗಳನ್ನು ಸೃಷ್ಟಿಸಿರುವ ವಿದ್ಯಮಾನ. ಇದೇ ಗೋವಿನ ವಿಷಯವು ಇತ್ತೀಚಿನ ದಿನಗಳಲ್ಲಿ ನಮ್ಮ ಕರಾವಳಿ ಜಿಲ್ಲೆಗಳಲ್ಲಿ ಕೂಡಾ ಒಂದು ಸ್ಫೋಟಕ ಸಂಗತಿಯಾಗಿ ಪರಿಣಮಿಸಿರುವುದನ್ನು ನಾವಿಂದು ಕಾಣುತ್ತಿದ್ದೇವೆ. ಹಾಗಾದರೆ ಇದು ಇಷ್ಟೆಲ್ಲ ಭಾವೋದ್ವೇಗಕಾರಿ ಹಾಗೂ ಸ್ಫೋಟಕ ಸಂಗತಿಯಾಗಿ ಪರಿಣಮಿಸಲು ಕಾರಣಗಳೇನು ಎಂಬುದನ್ನು ನಾವೆಲ್ಲ ತಿಳಿದುಕೊಳ್ಳಬೇಕಾದ ಜರೂರಾದ ಅಗತ್ಯ ಇದೆ.

ಒಂದು ವ್ಯವಸ್ಥಿತ ರಾಜಕೀಯ ಷಡ್ಯಂತ್ರ ಇದರೊಳಗೆ ಅಡಗಿದೆ ಎಂಬ ವಿಷಯವು ಹೆಚ್ಚಿನ ಜನಸಾಮಾನ್ಯರಿಗೆ ತಿಳಿದಿಲ್ಲ. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿದ್ದರೂ ಗೌರವಯುತವಾದ ಜೀವನ ನಡೆಸುತ್ತಿದ್ದು, ಇತ್ತೀಚಿನ ಕೆಲವು ವರ್ಷಗಳಿಂದ ನಿಧಾನವಾಗಿ ಚೇತರಿಸಿಕೊಳ್ಳುತ್ತಿರುವ ಕರಾವಳಿ ಜಿಲ್ಲೆಗಳ ಮುಸ್ಲಿಂ ಸಮುದಾಯವನ್ನು ದಮನ ಮಾಡುವ ಒಂದೇ ಉದ್ದೇಶವನ್ನು ಇಟ್ಟುಕೊಂಡು ಅದನ್ನು ಅನುಷ್ಠಾನಕ್ಕೆ ತರುವ ಹುನ್ನಾರವಿದು ಎಂಬ ಸತ್ಯವನ್ನು ಜನಸಾಮಾನ್ಯರು ತಿಳಿಯಬೇಕಾಗಿದೆ.

ಮಾಂಸಾಹಾರಿಗಳಾದ ಇಲ್ಲಿನ ದಲಿತರೂ ಆದಿವಾಸಿಗಳೂ ಪ್ರಾಚೀನಕಾಲದಿಂದಲೂ ಗೋಮಾಂಸವನ್ನು ತಿನ್ನುತ್ತಾಬಂದಿದ್ದು ಇಂದಿಗೂ ಗೋಮಾಂಸವನ್ನು ತಿನ್ನುವವರು ಎಂಬ ಐತಿಹಾಸಿಕ ಸತ್ಯವನ್ನು ಮರೆಮಾಚಿ, ಇಲ್ಲಿ ಗೋಮಾಂಸ ತಿನ್ನುವವರು ಬರೀ ಮುಸ್ಲಿಮರು ಮತ್ತು ಕ್ರೈಸ್ತರು ಮಾತ್ರ ಎಂಬಂತೆ ಬಿಂಬಿಸಿ, ಜನಸಾಮಾನ್ಯರನ್ನು ತಪ್ಪು ತಿಳುವಳಿಕೆಗೆ ಒಳಪಡಿಸಲಾಗಿದೆ. ಗೋವಿನ ರಾಜಕೀಯವು ಇಲ್ಲಿ ಎಷ್ಟರಮಟ್ಟಿಗೆ ತೀವ್ರವಾಗಿದೆಯೆಂದರೆ ಮುಸ್ಲಿಮರು ಮತ್ತು ಕ್ರೈಸ್ತರು ''ಹಿಂದೂ''ಗಳಿಗೆ ಪವಿತ್ರವೆನ್ನಲಾದ (ಆದರೆ ಅಸಲಿ ವಿಷಯ ಬೇರೆಯೇ ಇದ್ದು ಅದರ ಬಗ್ಗೆ ವಿವರವಾಗಿ ಮುಂದೆ ಪ್ರಸ್ತಾಪಿಸಲಾಗುವುದು) ಗೋವನ್ನು ಕಡಿದು, ಕೊಂದು ಅದರ ಮಾಂಸ ತಿನ್ನುವವರು ಹಾಗಾಗಿ ಅವರು ದುಷ್ಟರು ಮತ್ತು ''ಹಿಂದೂ'' ವಿರೋಧಿಗಳು ಎಂದು ಬಿಂಬಿಸಿ ಕೆಲವು ಅಮಾಯಕ ಜನರನ್ನು ಉದ್ರೇಕಗೊಳಿಸಿ, ಅವರನ್ನು ನೂರಾರು ವರ್ಷಗಳಿಂದ ಗೋವಿನ ವ್ಯಾಪಾರದಲ್ಲಿ ತೊಡಗಿಸಿಕೊಂಡಿರುವ ಮುಸ್ಲಿಮರ ಮೇಲೆ ಮತ್ತು ಗೋಮಾಂಸದ ಅಡುಗೆ ತಯಾರಿಸುವ ಹೋಟೆಲುಗಳ ಮೇಲೆ ಧಾಳಿ ನಡೆಸಲು ಛೂ ಬಿಡಲಾಗುತ್ತಿದೆ. ಈ ಬಳಸಂಚಿಗೆ ಕೆಲವು ಅಮಾಯಕ ಮನುಷ್ಯರು ಬಲಿಯಾಗಿದ್ದಾರೆ. ಈ ಸುಳ್ಳುಗಳನ್ನು ನಂಬಿದ ಕೆಲವು ಅಮಾಯಕ ಮನುಷ್ಯರು ತಮ್ಮ ಮನುಷ್ಯತ್ವವನ್ನೇ ಮರೆತು ಇತರ ಮನುಷ್ಯರನ್ನು ಹೊಡೆಯುವ, ಬಡಿಯುವ, ಬೆತ್ತಲು ಮಾಡುವ, ನೋಯಿಸುವ, ಸುಟ್ಟು ಕೊಲ್ಲಲೂ ಪ್ರಯತ್ನಿಸುವ ಅಮಾನವೀಯ ಕೃತ್ಯಗಳನ್ನು ಏನೂ ಹಿಂಜರಿಕೆ ಅಥವಾ ಮುಲಾಜು ಅಥವಾ ಹೆದರಿಕೆ ಅಥವಾ ಆತ್ಮಸಾಕ್ಷಿಯ ಭಯ ಯಾವುದೇ ಇಲ್ಲದೆ ಮಾಡುತ್ತಿದ್ದಾರೆ. ಈ ರೀತಿಯಲ್ಲಿ ಈ ಜನರು ಕಾನೂನನ್ನು ಕೈಗೆತ್ತಿಕೊಂಡು ಅಸಾಂವಿಧಾನಿಕವಾಗಿ ಕಾರ್ಯಾಚರಣೆ ನಡೆಸುತ್ತಿದ್ದರೂ ಆಡಳಿತ ಮತ್ತು ಪೋಲೀಸ್ ಇಲಾಖೆ ಸುಮ್ಮನಿದ್ದಾರೆ ಎಂದರೆ ಇದರ ಮರ್ಮವೇನೆಂದು ತಿಳಿಯಲು ಹೆಚ್ಚು ಕಷ್ಟ ಪಡಬೇಕಾಗಿಲ್ಲ; ಇದೆಲ್ಲ ವ್ಯವಸ್ಥಿತ ರಾಜಕೀಯ ಷಡ್ಯಂತ್ರದ ಭಾಗ ಮತ್ತು ಇದರ ಮುಂದುವರಿದ ಭಾಗವೇ ಇತ್ತೀಚೆಗೆ ಮಂಗಳೂರು ಮತ್ತು ಆಸುಪಾಸುಗಳಲ್ಲಿ ಇದೇ ಗೋವಿನ ವಿಷಯವನ್ನೆತ್ತಿಕೊಂಡು ನಡೆಸಲಾದ ಕೋಮು ಗಲಭೆಗಳು.

ದುರದೃಷ್ಟವಶಾತ್ ಇಂದು ಏನಾಗಿದೆಯೆಂದರೆ ಕೆಲವು ದೇಶದ್ರೋಹಿ, ದುಷ್ಟ ಶಕ್ತಿಗಳು ನಮ್ಮ ಪುರಾತನ



ಈ ದೇಶದ ಮೂಲಗ್ರಂಥಗಳಾದ ವೇದ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು, ಸ್ಮೃತಿಗಳು, ಗೃಹ್ಯಸೂತ್ರಗಳನ್ನು ಪೂರ್ವಾಗ್ರಹ ಪೀಡಿತರಾಗದೇ ವಸ್ತುನಿಷ್ಠವಾಗಿ ಅವಲೋಕಿಸಿದರೆ ಗೋವುಗಳ ಮತ್ತು ಇತರ ಪ್ರಾಣಿಗಳ ಬಗ್ಗೆ ಅವುಗಳಲ್ಲಿ ಉಲ್ಲೇಖವಾಗಿರುವ ಸತ್ಯವನ್ನು ಕಂಡುಕೊಳ್ಳಬಹುದಾಗಿದೆ. ಋಗ್ವೇದವಂತೂ ದನಕರುಗಳ ಸಂಪತ್ತು (ಆ ಕಾಲದಲ್ಲಿ ಧನ ಇರಲಿಲ್ಲ; ದನ ಮುಂತಾದ ಜಾನುವಾರುಗಳೇ ಸಂಪತ್ತು ಆಗಿತ್ತು ), ಜಾನುವಾರುಗಳಿಗಾಗಿ ನಡೆದ ದಾಳಿ, ಲೂಟಿಗಳ ವಿವರಗಳಿಂದ ತುಂಬಿಹೋಗಿದೆ. ಆ ಕಾಲದಲ್ಲಿ ಹಸುಗಳೇ ಜೀವನದ ಮುಖ್ಯ ಆಧಾರವಾಗಿದ್ದು ಗೋಸಂಪತ್ತಿಗಾಗಿ ಯುದ್ಧಗಳು ನಡೆಯುತ್ತಿದ್ದುವು. ಋಗ್ವೇದದಲ್ಲಿ ಯುದ್ಧವನ್ನು 'ಗವಿಷ್ಠಿ' ಎಂದರೆ ಹಸುಗಳನ್ನು ಹುಡುಕುವುದು, ಎಂದೇ ಕರೆಯಲಾಗಿದೆ. ವೈದಿಕ ಮತದವರಿಗೆ ಗೋಮಾಂಸವು ಇಂದು ವರ್ಜ್ಯವಾಗಿದ್ದರೂ ಪ್ರಾಚೀನ ಕಾಲದಲ್ಲಿ ಹಾಗಿರಲಿಲ್ಲ. ಸುಮಾರು ಕ್ರಿ. ಶ. ಒಂದು, ಎರಡನೇ ಶತಮಾನಗಳವರೆಗೂ ಈ ವೈದಿಕರು ಮಾಂಸಾಹಾರಿಗಳಾಗಿದ್ದು, ಆಡು, ಕುದುರೆ, ಹಂದಿ, ಎಮ್ಮೆ, ಕೋಣ, ಗೋವು ಮುಂತಾದ ಪ್ರಾಣಿಗಳ ಮಾಂಸವನ್ನು ತಿನ್ನುತ್ತಿದ್ದರು.

ಗ್ರಂಥಗಳಲ್ಲಿ ಉಲ್ಲೇಖವಾಗಿರುವ ಸತ್ಯವನ್ನು ಮರೆಮಾಚಿ, ಗೋವು ಒಂದು ಪವಿತ್ರ ಪ್ರಾಣಿ, ಅದನ್ನು ''ಹಿಂದೂ''ಗಳು ಮಾತ್ರವಲ್ಲ ಇನ್ನಿತರರೂ ಪೂಜಿಸಬೇಕು; ಯಾರೂ ಗೋಮಾಂಸ ತಿನ್ನಕೂಡದು, ಗೋವಧೆಯನ್ನು ಎಲ್ಲರೂ ವಿರೋಧಿಸಬೇಕು ಹಾಗೂ ದೇಶಾದ್ಯಂತ ನಿಷೇಧಿಸಬೇಕು ಎಂದು ವಿನಾಕಾರಣ ಗುಲ್ಲೆಬ್ಬಿಸಿ, ''ಹಿಂದೂ''ಗಳನ್ನು ಮತ್ತು ''ಹಿಂದೂ''ಗಳಲ್ಲದ, ನಿಜವಾಗಿ ಇಲ್ಲಿನ ಮೂಲನಿವಾಸಿಗಳಾದ, ಮೊಗವೀರರು, ಬಿಲ್ಲವರು, ಮುಗೇರರು ಇತ್ಯಾದಿ ಜನಗಳನ್ನು 'ಬ್ರೈನ್‌ವಾಶ್' ಮಾಡಿ ಜನಪರವಾಗಿ ಇದ್ದ ಈ ಮನುಷ್ಯರನ್ನು 'ದನ' ಪರವಾಗಿ ಪರಿವರ್ತಿಸಿದ್ದಾರೆ ಮತ್ತು ಇವರುಗಳನ್ನು ಮುಖ್ಯವಾಗಿ ಮುಸ್ಲಿಮರ ಮತ್ತು ಕ್ರೈಸ್ತರ ವಿರುದ್ಧ ಎತ್ತಿಕಟ್ಟುತ್ತಿದ್ದಾರೆ. ಇದು ಈ ನಮ್ಮ ಕರಾವಳಿ ಜಿಲ್ಲೆಗಳ ದುರಂತ ಕಥೆ. ಇದು ನಮ್ಮ ದೇಶದ ದುರಂತ ಕತೆಯೂ ಹೌದು. 'ಬ್ರೈನ್‌ವಾಶ್'ಗೆ ಒಳಗಾದ ಈ ಅಮಾಯಕ ಜನರು ತಮ್ಮ ವಿವೇಚನೆಯನ್ನು ಕಳೆದುಕೊಂಡು, ಹಣದ ಆಮಿಷಕ್ಕೆ ಒಳಗಾಗಿ, ಈ ಮತಾಂಧ ಫ್ಯಾಸಿಸ್ಟ್ ಶಕ್ತಿಗಳ 'ದೂರ ನಿಯಂತ್ರಣ' (ರಿಮೋಟ್ ಕಂಟ್ರೋಲ್)ದಲ್ಲಿ, ಈಗ ನಡೆಯುತ್ತಿರುವ ಜಾನುವಾರು ಸಾಗಾಟದ ತಡೆ, ದೈಹಿಕ ಹಲ್ಲೆ, ಮಾನ ಭಂಗ, ಕೊಲೆಯತ್ನ ಮುಂತಾದ ರೀತಿಯ ಭಯೋತ್ಪಾದಕ, ಸಮಾಜದ್ರೋಹಿ ಹಾಗೂ ದೇಶದ್ರೋಹಿ ಕೃತ್ಯಗಳಲ್ಲಿ ಭಾಗಿಯಾಗುತ್ತಿದ್ದಾರೆ; ಗೋವಧೆಯನ್ನು ತಡೆದು ತಾವೇನೋ ಪುಣ್ಯ ಕಾರ್ಯವನ್ನು ಮಾಡಿದೆವು ಎಂದು ಭಾವಿಸುತ್ತಾ ಇದ್ದಾರೆ. ಈ ದೇಶದಲ್ಲಿ 'ಹಿಂದೂ'ಗಳ ಹೊರತು ಬೇರೆ ಯಾವ ಮತ, ಜನಾಂಗದವರಿಗೂ ಜಾಗ ಇಲ್ಲ ಎಂದು ಪ್ರತಿಪಾದಿಸುತ್ತಿರುವ ಹಾಗೂ 'ದೂರ ನಿಯಂತ್ರಣ'ದ ಮೂಲಕ ಇದನ್ನು ಕಾರ್ಯಗತಗೊಳಿಸುತ್ತಿರುವ, ಈ ಮತಾಂಧ ಫ್ಯಾಸಿಸ್ಟ್ ಶಕ್ತಿಗಳು ತಮ್ಮ ಜನಾಂಗ ದ್ವೇಷದ ಹಾಗೂ ಕುಟಿಲ ರಾಜಕಾರಣದ ಕಾರಸ್ಥಾನವು ಯಶಸ್ಸಿನ ದಾರಿಯಲ್ಲಿ ಸಾಗುತ್ತಿರುವುದನ್ನು ಕಂಡು ಹಿಗ್ಗುತ್ತಾ ತಾಂಡವ ನೃತ್ಯ ಮಾಡುತ್ತಿವೆ.

ಇಲ್ಲಿಯ ಕೆಲವು ಮಠಾಧೀಶರುಗಳೂ, ಮಾಡುವುದಕ್ಕೆ ಬೇರೆಷ್ಟೋ ಉತ್ತಮ ಕೆಲಸಗಳಿದ್ದರೂ, ಅನಗತ್ಯವಾಗಿ (ಈ ದೇಶದ) ಗೋವಿಗಾಗಿ ಮೊಸಳೆಕಣ್ಣೀರನ್ನು ಸುರಿಸುತ್ತಾ ಗೋವಿನ ಪಾವಿತ್ರ್ಯ ಮತ್ತು ಮಹಿಮೆಗಳನ್ನು ಕೊಂಡಾಡುತ್ತಾ ಇಂತಹಾ ಪವಿತ್ರವಾದ ಗೋವನ್ನು ಕಡಿದು ಅದರ ಮಾಂಸ ತಿನ್ನುವವರಿಗೆ ಕರುಣೆಯೇ ಇಲ್ಲ, ಅವರುಗಳು ಮನುಷ್ಯರೇ ಅಲ್ಲ ಎಂಬಂತೆ ಪರೋಕ್ಷವಾಗಿ ಬಿಂಬಿಸುತ್ತಾ ಮೇಲೆ ಹೇಳಿದ ದುಷ್ಟಶಕ್ತಿಗಳಿಗೆ ಪರೋಕ್ಷವಾಗಿ ಕುಮ್ಮಕ್ಕು ನೀಡುತ್ತಿದ್ದಾರೆ. ಇದರಿಂದಾಗಿ ಆ ದುಷ್ಟಶಕ್ತಿಗಳ ನಿಯಂತ್ರಣದಲ್ಲಿರುವ ಅನೇಕ ಮಂದಿಗೆ ಇನ್ನಷ್ಟು ಉತ್ತೇಜನ ದೊರೆತಂತಾಗಿ, ಇನ್ನೂ ಹೆಚ್ಚು ಉತ್ಸಾಹದಿಂದ ಗೋಸಾಗಾಟ, ಗೋವಧೆ ತಡೆಗಳನ್ನು ಎಗ್ಗಿಲ್ಲದೇ ಮುಂದುವರಿಸುತ್ತಿದ್ದಾರೆ. ನಿಜ ಹೇಳಬೇಕೆಂದರೆ ಕಾನೂನು ಬಾಹಿರ ಅಕ್ರಮ ಗೋಸಾಗಾಟವನ್ನು ಪತ್ತೆಹಚ್ಚಿ ತಡೆಯಬೇಕಾದ ಸಾಂವಿಧಾನಿಕ ಜವಾಬ್ದಾರಿಯಿರುವ ಪೊಲೀಸ್ ಇಲಾಖೆಯ ಕಾರ್ಯವೈಖರಿ ಬಗ್ಗೆ ಬರೆಯಲು ಹೊರಟರೆ ಅದೇ ಒಂದು ಬೃಹತ್ ಗ್ರಂಥವಾಗಬಹುದು. ಅದಿರಲಿ, ಕೋಮು ದ್ವೇಷದ ಬೆಂಕಿಗೆ ತುಪ್ಪವು ನಿರಂತರವಾಗಿ ಬೀಳುತ್ತಾ ಇರುವಾಗ ಕೋಮುದ್ವೇಷವು ತಗ್ಗುವುದಾದರೂ ಹೇಗೆ ? ಕೋಮುಗಲಭೆಗಳು ನಿಲ್ಲುವುದಾದರೂ ಹೇಗೆ ? ಈ ಸ್ವಾಮಿಗಳು ಸ್ಮೃತಿ ಶ್ರುತಿಗಳಲ್ಲಿರುವ ಸತ್ಯವನ್ನು ಜನಸಾಮಾನ್ಯರಿಗೆ ಸರಿಯಾಗಿ ತಿಳಿಸುವ ಪ್ರಯತ್ನಗಳನ್ನು ಕೈಗೊಳ್ಳದೇ ಇರುವುದರಿಂದಾಗಿ ಜನಸಾಮಾನ್ಯರು ಇನ್ನೂ ಅಂಧಕಾರದಲ್ಲಿ ಮುಳುಗಿದ್ದಾರೆ, ಮನಸ್ಸಿನ ತುಂಬಾ ತಪ್ಪು ಕಲ್ಪನೆಗಳನ್ನು ತುಂಬಿಕೊಂಡಿದ್ದಾರೆ. ಈ ಸ್ವಾಮಿಗಳು ಯಾಕಾಗಿ ಸಂಸ್ಕೃತದಲ್ಲಿರುವ ಎಲ್ಲಾ ಮಂತ್ರ, ಶ್ಲೋಕಗಳನ್ನು ಆಯಾ ಮಾತೃಭಾಷೆಗಳಿಗೆ ಭಾಷಾಂತರ ಮಾಡಿಸುವುದಿಲ್ಲ, ಯಾಕಾಗಿ ಎಲ್ಲಾ ಪೂಜೆ, ಮದುವೆ, ಮುಂಜಿ, ಹೋಮ, ಹವನ ಇತ್ಯಾದಿ ಸಮಾರಂಭಗಳಲ್ಲಿ ಮಾತೃಭಾಷೆಯಲ್ಲೇ ಮಂತ್ರ ಶ್ಲೋಕಗಳನ್ನು ಹೇಳಬೇಕೆಂದು ಪುರೋಹಿತರಿಗೆ ಅಪ್ಪಣೆ ಕೊಡಿಸುವುದಿಲ್ಲ ಎಂದರೆ ಆಗ ಜನಸಾಮಾನ್ಯರಿಗೆ ಸತ್ಯದ ಅರಿವಾಗಿ

# ಗಾಂಧೀತೋಟ



ಗಾಂಧೀ ಶತಮಾನೋತ್ಸವ
ದ ನೆನಪಿನ ವಿಶಾಲ ತೋಟ
ದಲ್ಲಿ ಹಲವಾರು ಜಾತಿ
ಯ ಹಣ್ಣಿನ ಗಿಡಮರಗಳು
ನಿಂಬೆ, ಮಾವು, ಸಪೋಟ, ಸೀಬೆ
ತಾನೇ ಬೆಳೆದ ನಾಯಿನೇರಳೆಗೂ ಇದೆ–ೇ ಜಾಗ
ಹೂಗಿಡಗಳೂ ಇವೆ
ಸಂಪಿಗೆ – ಕಾಕಡ
ಮಲ್ಲಿಗೆ – ಕನಕಾಂಬರ
ನಡುವೆ ತುಳಸಿ–ಗೆ ನಮಸ್ಕಾರ
ಜನ ಕಳೆತು – ಅರಳಿದವ ಬಳಸುತ್ತಾರೆ
ಕೊಳೆತವ ಎಸೆಯುತ್ತಾರೆ.

ಇತ್ತೀಚೆಗಂತು...
ವೆನಿಲಾದ್ದೇ ದರ್ಬಾರಾಗಿತ್ತು
ಕೋಕೋ ಕಾಫಿ ರಬ್ಬರ್ ಗಿಡಗಳೇನು ಕಮ್ಮಿ ಇಲ್ಲ
ಎಲ್ಲವುಗಳದ್ದೂ ಬೇರಿಳಿಸುವ ಹುನ್ನಾರೇ !
ಜೊತೆಗೆ ಅರಳುತ್ತಿವೆ
ಗುಲಾಬಿ, ಗ್ಲಾಡಿಯೋಲಸ್
ಜರ್ಬೆರಾ, ಜೀನಿಯಾ

... ಇಲ್ಲಿ ಈಗ
ತೋಟದ ಮಣ್ಣ ಫಲವತ್ತತೆಯಲ್ಲಿ
ಬೆಳೆದಷ್ಟೂ ಕಡಿಮೆಯೇ
ಎಲ್ಲದಕ್ಕೂ ನೀರೂಡುತ್ತಿದೆ
ಬೆಳೆಸುತ್ತಿದೆ
ಸಾಕುತ್ತಿದೆ ...
....... ಗಾಂಧೀ ತೋಟ.

ಪುಷ್ಪಭಾರತಿ ಆರ್. ಎ.
ಹಿರಿಯ ವೇತನಶ್ರೇಣಿ ಕನ್ನಡ ಉಪನ್ಯಾಸಕಿ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕುಣಿಗಲ್ - ೫೭೨೧೩೦
ತುಮಕೂರು ಜಿಲ್ಲೆ

ನಿಜವಾಗಿಯೂ ಈ ಮಂತ್ರ ಶ್ಲೋಕಗಳಲ್ಲಿ ಏನೂ ವಿಶೇಷವಿಲ್ಲ ಎಂದು ಗೊತ್ತಾಗುತ್ತದೆ; ಅಮಾಯಕ ಜನರನ್ನು ಮೋಸಗೊಳಿಸುವುದು ಆಗ ಸುಲಭವಾಗುವುದಿಲ್ಲ! ಇಂತಹ ಒಬ್ಬ ಸ್ವಾಮಿ ಮೊನ್ನೆ ''ರಾಮ ಸತ್ರ'' ಎಂಬ ಯಜ್ಞ (?) ಮಾಡಿ ಟನ್‌ಗಟ್ಟಲೆ ತುಪ್ಪವನ್ನು ಅಗ್ನಿಗೆ ಸುರಿದು, ಲಕ್ಷಗಟ್ಟಲೆ ದುಡ್ಡು ವ್ಯಯಿಸಿದರು. ಯಾವ ಉದ್ದೇಶಕ್ಕಾಗಿ ಯಜ್ಞ ಮಾಡಲಾಯಿತು ಅಂತ ಕೇಳಿದರೆ, 'ಲೋಕ ಕಲ್ಯಾಣಕ್ಕೆ' ಅಂತ ಉತ್ತರ. ಆಯಿತು, ಈ ಯಜ್ಞ ನಡೆದ ಮೇಲೆ ಏನು ಲೋಕ ಕಲ್ಯಾಣವಾಯಿತಪ್ಪ ಎಂದು ನೋಡಿದರೆ – ಲೋಕದ ಸ್ಥಿತಿ ಮತ್ತಷ್ಟು ಬಿಗಡಾಯಿಸಿದ್ದೇ ಕಾಣುತ್ತಿದೆ. ಮುಂಬಯಿಯ ಸರಣಿ ಸ್ಫೋಟಗಳಿಂದ ನೂರಾರು ಜನ ಸತ್ತರು, ನೆರೆ, ಬರಗಳಿಂದ ದೇಶದ ಹಲವು ರಾಜ್ಯಗಳು ತತ್ತರಿಸಿದವು, ರೈತರ ಆತ್ಮಹತ್ಯೆ ಇನ್ನೂ ನಿಂತಿಲ್ಲ, ಭಯೋತ್ಪಾದನೆ ಹೆಚ್ಚಾಗಿದೆ. ಇದುವಾ 'ರಾಮ ಸತ್ರ' ಎಂಬ ಯಜ್ಞದಿಂದ ಆದ ಲೋಕ ಕಲ್ಯಾಣ? ಇಂತಾ ಸ್ವಾಮಿಗಳಿಂದ ಲೋಕಕ್ಕೆ ಬಿಡಿ ನಮ್ಮ ದೇಶಕ್ಕೆ, ಸಮಾಜಕ್ಕೆ ಏನಾದರೂ ಉಪಯೋಗವಿದೆಯಾ? ಎಂಬ ಪ್ರಶ್ನೆಗಳನ್ನು ಜನಸಾಮಾನ್ಯರು ಕೇಳಬೇಕಾಗಿದೆ.

''ಭಾರತದಲ್ಲಿ ಚರಿತ್ರೆಯನ್ನು ಮಧ್ಯಮವರ್ಗದ ಜನಸಾಮಾನ್ಯರಿಗೋಸ್ಕರ ಜೀವಂತವಾಗಿ ಒಳ್ಳೆಯ ಆಡು ಭಾಷೆ ಹಾಗೂ ಸ್ಪಷ್ಟ ಶೈಲಿಯಲ್ಲಿ ಬರೆದವರೇ ಇಲ್ಲ. ಹೀಗೆ ಶ್ರದ್ಧಾಯುಕ್ತ ಹಾಗೂ ಸುಲಭಲಭ್ಯವಾದ ಇತಿಹಾಸ ಮತ್ತು ಆತ್ಮಚರಿತ್ರೆಗಳು ಯಾವುದೇ ಪುಸ್ತಕದಂಗಡಿಗಳಲ್ಲೂ ಇಲ್ಲದಿರುವುದೇ ಈ ದೇಶದಲ್ಲಿ ಇಷ್ಟೊಂದು ಚಾರಿತ್ರಿಕ ಕಟ್ಟುಕಥೆಗಳ ಹುಟ್ಟಿಗೆ ಮೂಲಕಾರಣ'' ಎನ್ನುತ್ತಾರೆ ಖ್ಯಾತ ಇತಿಹಾಸಜ್ಞ ವಿಲಿಯಂ ಡಾಲ್ರಿಂಪ್ಲ್. ಇನ್ನೊಂದು ಮುಖ್ಯವಾದ ವಿಷಯ ಏನೆಂದರೆ ನಮ್ಮ ದೇಶದ ಮೂಲಗ್ರಂಥಗಳಾದ ವೇದ, ಬ್ರಾಹ್ಮಣ, ಅರಣ್ಯಕ, ಉಪನಿಷತ್ತು ಇತ್ಯಾದಿಗಳು ಮುಖ್ಯವಾಗಿ ಸಂಸ್ಕೃತ ಭಾಷೆಯಲ್ಲಿ ಇರುವುದರಿಂದ ಹಾಗೂ ವಸ್ತುನಿಷ್ಠ ಅನುವಾದಗಳು ಅತ್ಯಲ್ಪವಾಗಿದ್ದು ಜನಸಾಮಾನ್ಯರನ್ನು ತಲುಪವಲ್ಲಿ ಅಯಶಸ್ವಿಯಾಗಿರುವುದರಿಂದಲೂ ಜನಸಾಮಾನ್ಯರಿಗೆ ಅವುಗಳಲ್ಲಿರುವ ವಿಷಯಗಳ ಬಗ್ಗೆ ಸರಿಯಾದ ಮಾಹಿತಿ ಮತ್ತು ತಿಳುವಳಿಕೆ ಇಲ್ಲದೇ ಇರುವುದು ಕಂಡುಬರುತ್ತಿದೆ. ಲಭ್ಯವಿರುವ ಕೆಲವೇ ಗ್ರಂಥಗಳು ಪೌರಾಣಿಕ ದಂತಕಥೆಗಳಿಂದಲೇ ತುಂಬಿವೆ. ಇದರಿಂದಾಗಿ ಆಗಿರುವ ಮುಖ್ಯ ದುರಂತವೆಂದರೆ ಕೆಲವು ಮತಾಂಧ ಫ್ಯಾಸಿಸ್ಟ್ ಶಕ್ತಿಗಳು ಇದರ ದುರ್ಲಾಭವನ್ನು ಪಡೆದು, ತಮ್ಮ ರಾಜಕೀಯ ದುರುದ್ದೇಶಕ್ಕಾಗಿ ಜನಾಂಗ ದ್ವೇಷವನ್ನು ಹುಟ್ಟುಹಾಕಲು ಗೋವು ಎಂಬ ಒಂದು ಪ್ರಾಣಿಯ ಬಗ್ಗೆ ಇಲ್ಲಸಲ್ಲದ ಸುಳ್ಳುಗಳನ್ನು ಹೇಳುತ್ತ, ಇದಕ್ಕೆ ಶಾಸ್ತ್ರಗ್ರಂಥಗಳ ಉದಾಹರಣೆಗಳನ್ನು ಕೊಡುತ್ತ ಗೋವನ್ನು ಅನಗತ್ಯವಾಗಿ ದೈವೀಕರಿಸುತ್ತ ಇಂತಹ ಅಮಾಯಕ ಜನರನ್ನು ತಪ್ಪು ದಾರಿಗೆ ಎಳೆಯುತ್ತಿವೆ; ಶಾಸ್ತ್ರಗ್ರಂಥಗಳ ಮತ್ತು ಸಂವಿಧಾನದ ಬಗ್ಗೆ ಸರಿಯಾದ ತಿಳುವಳಿಕೆ ಇರದ ಈ ಅಮಾಯಕ ಜನರಿಂದ ಮನುಷ್ಯದ್ರೋಹಿ ಹಾಗೂ ದೇಶದ್ರೋಹಿ ಕೆಲಸ ಮಾಡಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದಾರೆ. ಈ ಕಾರ್ಯತಂತ್ರಗಳ ಮುಖ್ಯ ಉದ್ದೇಶವೇ – ಈ 'ಹಿಂದೂ' ದೇಶದಲ್ಲಿ 'ಹಿಂದೂ'ಗಳೆಂಬುವರನ್ನು ಬಿಟ್ಟು ಬೇರಾರಿಗೂ ಬದುಕಲು ಹಕ್ಕಿಲ್ಲ ಎಂದು ಹೇಳುತ್ತಾ ಜನಾಂಗದ್ವೇಷವನ್ನು ಕೆರಳಿಸಿ 'ಹಿಂದೂ'ಗಳೆಂಬವರು ಮುಸ್ಲಿಂ ಮತ್ತು ಕ್ರೈಸ್ತ ಜನಸಮುದಾಯಗಳನ್ನು ನಿರ್ನಾಮ ಮಾಡಲು ಪ್ರೇರೇಪಿಸುವುದು; ತನ್ಮೂಲಕ ಈ ದೇಶದಲ್ಲಿ ತಮ್ಮ ಫ್ಯಾಸಿಸ್ಟ್ ತತ್ವವನ್ನು ಕಾರ್ಯಾಚರಣೆಗೆ ತರುವುದು. ಇಟಲಿಯ ಮುಸ್ಸೊಲಿನಿ, ಜರ್ಮನಿಯ ಹಿಟ್ಲರ್ ಯಾವ ರೀತಿಯಲ್ಲಿ ಇತರ ಜನಾಂಗಗಳ ನರಮೇಧ ನಡೆಸಿದರೋ ಅದೇ ರೀತಿಯಲ್ಲಿ ನಮ್ಮ ದೇಶದಲ್ಲೂ ನಡೆಸುವ ಉದ್ದೇಶದಿಂದಲೇ ಇಟಲಿ, ಜರ್ಮನಿಗಳಿಗೆ ಭೇಟಿಕೊಟ್ಟು ಮುಸ್ಸೊಲಿನಿ, ಹಿಟ್ಲರ್‌ಗಳನ್ನು ಭೇಟಿಯಾಗಿ ಬಂದಿರುವ ಕೆಲವು ದುಷ್ಟಶಕ್ತಿಗಳು ಆವಾಗಿನಿಂದಲೇ ತಮ್ಮ ಕಾರ್ಯಾಚರಣೆಯನ್ನು ನಮ್ಮ ದೇಶದಲ್ಲಿ ಪ್ರಾರಂಭ ಮಾಡಿವೆ. ದಲಿತರು ಹಾಗೂ ಆದಿವಾಸಿಗಳನ್ನು ಈಗಾಗಲೇ ಬೇರೆಯೇ ಆದ ವಿಧಾನಗಳಿಂದ (ಮಹಿಳೆಯರ ಸಾಮೂಹಿಕ ಅತ್ಯಾಚಾರ, ಕೊಲೆ, ಬಹಿಷ್ಕಾರ) ಬಗ್ಗು ಬಡಿಯಲಾಗುತ್ತಿದೆ. ಈ ಫ್ಯಾಸಿಸ್ಟ್ ಶಕ್ತಿಗಳು ಇದಕ್ಕಾಗಿ ಯೋಜಿಸಿದ ವ್ಯವಸ್ಥಿತವಾದ ಷಡ್ಯಂತ್ರಕ್ಕೆ ಅನುಗುಣವಾಗಿ, ಕ್ರೈಸ್ತರ ವಿರುದ್ಧ ಕಾರ್ಯಾಚರಿಸಲು ಮತಾಂತರ ಎಂಬ ವಿಷಯವನ್ನೂ, ಮುಸ್ಲಿಮರ ವಿರುದ್ಧ ಕಾರ್ಯಾಚರಿಸಲು ಗೋಸಾಗಾಟ ಎಂಬ ವಿಷಯವನ್ನೂ ಹುಟ್ಟುಹಾಕಿವೆ. ಈ ದುರುದ್ದೇಶಪೂರಿತ ಕಾರ್ಯತಂತ್ರಗಳಿಗೆ ಪೂರಕವಾಗಿ, ಇದಕ್ಕೆ ಪರೋಕ್ಷವಾಗಿ ಕುಮ್ಮಕ್ಕು ನೀಡುತ್ತಿರುವ ಕೆಲವು 'ಹಿಂದೂ' ಮಠಾಧೀಶರು, ಸ್ವಾಮಿಗಳು, ಸಾಧು ಸಂತರು ಮತ್ತು ಸಮೂಹ ಮಾಧ್ಯಮಗಳ ಒಂದು ವಿಭಾಗವನ್ನು ವ್ಯಾಪಕವಾಗಿ ಬಳಸಿಕೊಳ್ಳಲಾಗುತ್ತಿದೆ. ಇಲ್ಲಿ ಸತ್ಯವನ್ನು ತಿಳಿಯಬೇಕಾದರೆ ಕೆಲವು ಮುಖ್ಯವಾದ ಪ್ರಶ್ನೆಗಳನ್ನು ಜನಸಾಮಾನ್ಯರು ಕೇಳಲೇಬೇಕಾಗಿದೆ. ಈ ಪ್ರಶ್ನೆಗಳ ಉತ್ತರಗಳಲ್ಲಿಯೆ ಅಡಗಿದೆ – ನಮ್ಮ ದೇಶದಲ್ಲಿ ಹಾಗೂ ಇತ್ತೀಚೆಗೆ ಕರಾವಳಿ ಜಿಲ್ಲೆಗಳಲ್ಲಿ ನಿರಂತರವಾಗಿ ನಡೆಯುತ್ತಿರುವ 'ಗೋರಕ್ಷಣೆ' ಮತ್ತು 'ಮತಾಂತರ' ಎಂಬ ಕಪಟ ನಾಟಕಗಳ ಕಾರಣ ಮತ್ತು ಒಳಗುಟ್ಟು.

**'ಹಿಂದೂ'ಗಳೆಂದರೆ ಯಾರು?**

ಅಷ್ಟಕ್ಕೂ 'ಹಿಂದೂ'ಗಳೆಂದರೆ ಯಾರು, 'ಹಿಂದೂ' ಧರ್ಮ(ಮತ) ಎಂದರೆ ಏನರ್ಥ ಎಂಬುದನ್ನು ನೋಡೋಣ. ಸ್ವಾಮಿ ವಿವೇಕಾನಂದರು ಹೇಳುತ್ತಾರೆ – 'ಹಿಂದೂ' ಎಂದರೆ ಮೂಲಾರ್ಥದಲ್ಲಿ ಒಂದೇ ಮತಸೂಚಕ ಪದವಾಗಲು ಸಾಧ್ಯವಿಲ್ಲ. ಅದು ಹಲವು ಮತಸೂಚಕ ಪದ. ಮೂಲತಃ ಇಂಡಿಯಾದಲ್ಲಿ ಬಂದು ನೆಲಸಿದ ಜನರೂ (ಆರ್ಯರು) ಮತ್ತು ಇರಾನಿನಲ್ಲಿ ನೆಲಸಿದ ಜನರೂ (ಇರಾನಿಯನ್ನರು) ಸುಮಾರು ಕ್ರಿ. ಪೂ. ೨೦೦೦ದ ಅವಧಿಯಲ್ಲಿ ದಕ್ಷಿಣ ಇರಾನ್‌ನಿಂದ ಆಫ್ಘಾನಿಸ್ತಾನ ಮತ್ತು ಬಲೂಚಿಸ್ತಾನದವರೆಗಿನ ವಿಶಾಲ ಪ್ರದೇಶದಲ್ಲಿ ಒಟ್ಟಾಗಿ ಇರುತ್ತಿದ್ದು ಕೆಲವು ನೂರು ವರ್ಷಗಳ ನಂತರ ಎರಡು ಕವಲುಗಳಾಗಿ, ಒಂದು ಕವಲು ಇಂಡಿಯಾದ ವಾಯುವ್ಯ ದಿಕ್ಕಿನಿಂದ ಒಳಕ್ಕೆ ವಲಸೆ ಬಂದಿತು. ಮತ್ತೊಂದು ಕವಲು ಇರಾನಿನಲ್ಲಿ ಉಳಿಯಿತು. ಇರಾನಿನ ಜನರ ಪ್ರಾಚೀನ ಪರ್ಶಿಯನ್ ಭಾಷೆಯಲ್ಲಿ ಸಂಸ್ಕೃತದ 'ಸ'ಕಾರವು 'ಹ'ಕಾರವಾಗಿ 'ಸಿಂಧೂ' ನದಿಯ ಈಚೆಗೆ ಇರುವ ಇಲ್ಲಿನ ಜನರನ್ನು 'ಹಿಂದೂ' ಎಂದು ಕರೆದರು; ಈ ಭೂಭಾಗವನ್ನು 'ಹಿಂದೂ' ದೇಶವೆಂದರು. (ಮುಂದಕ್ಕೆ 'ಹ'ಕಾರವಿಲ್ಲದ ಗ್ರೀಕರಿಂದ ಇದು 'ಇಂದೂ' ಜನರ 'ಇಂಡಿಯಾ' ಭೂಭಾಗ ಎಂದು ಕರೆಯಲ್ಪಟ್ಟಿತು). ಆ ಪುರಾತನ ಕಾಲದಲ್ಲಿ ಸಿಂಧೂ ನದಿಯ ಈಚೆಗೆ ಇರುವ, ಆರ್ಯರೆಂದು ಕರೆಯಲಾದ ಒಂದೇ ಜನಾಂಗಕ್ಕೆ ಸೇರಿದ ಎಲ್ಲಾ ಜನರು ವೇದಾಧಾರಿತ ಒಂದೇ ಧರ್ಮ(ಮತ)ವನ್ನು ಅನುಸರಿಸುತ್ತಿದ್ದರು. ಹೀಗಾಗಿ ಅಂದು ಆ ಜನರು ಅನುಸರಿಸುತ್ತಿದ್ದ ಮತವನ್ನು 'ಹಿಂದೂ' ಧರ್ಮ(ಮತ) ಎಂದು ಕರೆಯುತ್ತಿದ್ದುದು ತಪ್ಪಾಗುವುದಿಲ್ಲ. ಆದರೆ ಇಂದು ಹಾಗೆ ಕರೆಯುವುದು ಸರಿಯಾಗುವುದಿಲ್ಲ. ಏಕೆಂದರೆ ಇಂದು ಇಂಡಿಯಾ ದೇಶದ (ಸಿಂಧೂ ನದಿಯ ಈಚೆಗೆ ಇರುವ ಭೂಭಾಗ)ಲ್ಲಿರುವ ಎಲ್ಲಾ ಜನರು ಬೇರೆ ಬೇರೆ ಜನಾಂಗಗಳಿಗೆ ಸೇರಿದವರಾಗಿದ್ದು ಬೇರೆ ಬೇರೆ ಮತಗಳನ್ನು ಅನುಸರಿಸುತ್ತಿದ್ದಾರೆ. ಮೂಲಾರ್ಥದ ಪ್ರಕಾರ ಈ ಜನರೆಲ್ಲರೂ 'ಹಿಂದೂ'ಗಳಾಗುತ್ತಾರೆ ಮತ್ತು 'ಹಿಂದೂ' ಧರ್ಮ (ಮತ) ಎಂದರೆ ಇಂಡಿಯಾ ದೇಶದಲ್ಲಿ ವಾಸಿಸುತ್ತಿರುವ ಎಲ್ಲಾ ಜನರು ಅನುಸರಿಸುತ್ತಿರುವ ವೈದಿಕ, ಪಾರ್ಸಿ, ಮುಸ್ಲಿಂ, ಕ್ರೈಸ್ತ, ಜೈನ, ಬೌದ್ಧ ಮುಂತಾದ ಹಲವು ಮತಸೂಚಕ ಪದವಾಗುತ್ತದೆ! ಹೀಗಾಗಿ 'ಹಿಂದೂ' ಧರ್ಮ (ಮತ) ಎಂಬುದರ ಬದಲಾಗಿ ವೇದಗಳ ಪ್ರಾಮಾಣ್ಯವನ್ನು ಒಪ್ಪಿಕೊಳ್ಳುವ ವೈದಿಕ ಧರ್ಮ (ಮತ) ಎನ್ನುವುದೇ ಸರಿ. ಈ ವ್ಯಾಖ್ಯಾನದ ಪ್ರಕಾರ ವೈದಿಕ ಮತವನ್ನುಳಿದು, ಈ ನೆಲದ ಇತರ ಎಲ್ಲಾ ಮತಗಳು 'ಹಿಂದೂ' ಮತಗಳು ಅಲ್ಲವೇ ಅಲ್ಲ. ಹಿಂದುಳಿದ ವರ್ಗಗಳು, ಬುಡಕಟ್ಟು ಜಾತಿ, ಪಂಗಡಗಳು ಅನುಸರಿಸುವ ಮತಗಳು (ವೇದಗಳ ಪ್ರಾಮಾಣ್ಯವನ್ನು ಒಪ್ಪದಿರುವುದರಿಂದ) 'ಹಿಂದೂ' ಮತದ ವ್ಯಾಪ್ತಿಯೊಳಗೆ ಬರುವುದಿಲ್ಲ; ಅವರೆಲ್ಲ ನಿಜಾರ್ಥದಲ್ಲಿ 'ಹಿಂದೂ' (ಮತದ ಅನುಯಾಯಿ)ಗಳೇ ಅಲ್ಲ. ಇದನ್ನು ಜನಸಾಮಾನ್ಯರು ಗಮನಿಸಬೇಕು.

**ಗೋವಿನ ನೈಜ ಇತಿಹಾಸವೇನು?**

ಇಡೀ ಜಗತ್ತಿನ ಮಾನವ ವಿಕಾಸದ ಹಾದಿಯನ್ನು ಅವಲೋಕಿಸಿದರೆ – ಮಾನವರು ಮೊದಲು ಬೇಟೆಗಾರರಾಗಿ, ನಂತರದ ಹಂತದಲ್ಲಿ ಅಲೆಮಾರಿ ಪಶುಪಾಲಕರಾಗಿ, ನಂತರ ಅಲೆಮಾರಿ ಬೇಸಾಯಗಾರರಾಗಿ, ನಂತರದಲ್ಲಿ ಬೇಸಾಯವೇ ಮುಖ್ಯ ವೃತ್ತಿಯಾದಾಗ ಒಂದೇ ಜಾಗದಲ್ಲಿ ನೆಲೆಯೂರಿ, ಹಳ್ಳಿಗಳನ್ನು ಕಟ್ಟಿಕೊಂಡು ಬದುಕುತ್ತಾ ಬಂದಿರುವುದನ್ನು ಕಾಣುತ್ತೇವೆ. ನಮ್ಮ ದೇಶದ ಮಟ್ಟಿಗೆ ಹೇಳುವುದಾದರೆ ಸುಮಾರು ಕ್ರಿ. ಪೂ. ೧೬೦೦ರ ಅನಂತರದ ಸುಮಾರಿಗೆ ಅಲೆಮಾರಿ ಪಶುಪಾಲಕ ಹಂತದಲ್ಲಿದ್ದ ಜನರ ಒಂದು ಗುಂಪು ವಾಯುವ್ಯ ದಿಕ್ಕಿನಿಂದ ಬಂದು ಸಿಂಧೂ ನದಿ ಪ್ರದೇಶದಲ್ಲಿ ಮೊದಲಿಗೆ ತಳವೂರಿತು. ನಾವೀಗ ಋಗ್ವೇದಕಾಲೀನ ಆರ್ಯರೆಂದು ಕರೆಯುವ ಜನರೇ ಇವರು. ದನ ಇತ್ಯಾದಿ ಪಶುಗಳನ್ನು ಪಾಲಿಸುತ್ತಾ ಅವುಗಳ ಉತ್ಪನ್ನ ಮತ್ತು ಮಾಂಸಗಳನ್ನು ಭಕ್ಷಿಸುತ್ತಾ ಅಲೆಮಾರಿಗಳಾಗಿ ಇವರು ಜೀವಿಸುತ್ತಿದ್ದರು. ಸಂಸ್ಕೃತ ಭಾಷೆಯನ್ನಾಡುತ್ತಿದ್ದ ಇವರು ತಮ್ಮ ಅನುಭವ, ಜೀವನಕ್ರಮಗಳನ್ನು ಶ್ರುತಿ ಮೂಲಕ 'ಋಗ್ವೇದ'ದಲ್ಲಿ ದಾಖಲಿಸಿದರು (ಆ ಕಾಲಘಟ್ಟದಲ್ಲಿ ಲಿಪಿ ಇರಲಿಲ್ಲ). ಅನಂತರದ ಹಂತದಲ್ಲಿ ಬೇಸಾಯದ ಅನ್ವೇಷಣೆ ಆಗಿ ಅವರ ಜೀವನದಲ್ಲಿ ಬೇಸಾಯವು ಒಂದು ಉಪವೃತ್ತಿಯಾಗಿ ಪರಿಣಮಿಸಿತು. ಇದರಿಂದಾಗಿ ಮೊದಲಿಗೆ, ಸ್ವಲ್ಪ ಪ್ರಮಾಣದಲ್ಲಿ ಮಾತ್ರ, ಜನ ಒಂದೇ ಕಡೆಯಲ್ಲಿ ವಾಸಿಸಲು ಸಾಧ್ಯವಾಯಿತು. ಕ್ರಮೇಣ ಕಬ್ಬಿಣದ ಉಪಕರಣಗಳ ಬಳಕೆ ಪ್ರಾರಂಭವಾಗಿ, ಕಾಡು ಕಡಿದು ಜಮೀನುಗಳಲ್ಲಿ ಕೃಷಿ ಎಲ್ಲ ಸಾಧ್ಯವಾದವು. ಇದರಿಂದಾಗಿ ಪಶುಪಾಲನೆಗಿಂತ ಬೇಸಾಯಕ್ಕೆ ಹೆಚ್ಚು ಮಹತ್ವ ವುಂಟಾಗಿ, ಬೇಸಾಯವೇ ಮುಖ್ಯ ವೃತ್ತಿಯಾಗಿ, ಪಶುಪಾಲನೆಯು ಉಪವೃತ್ತಿಯಾಗಿ ಪರಿಣಮಿಸಿತು. ಹೆಚ್ಚಿನ ಜನರು ಅಲೆಮಾರಿ ಜೀವನವನ್ನು ಬಿಟ್ಟು ಒಂದೇ ಕಡೆ ನೆಲೆಸಲು ಸಾಧ್ಯವಾಯಿತು. ಹಳ್ಳಿಗಳು ತಲೆಯೆತ್ತಿದವು. ಆಹಾರ ಧಾನ್ಯಗಳ ದೊರೆಯುವಿಕೆಯಲ್ಲಿ

ಉಂಟಾದ ಹೆಚ್ಚಳದಿಂದಾಗಿ ಜನಸಂಖ್ಯೆಯಲ್ಲಿ ಹೆಚ್ಚಳವಾಯಿತು. ಬೇಸಾಯಕ್ಕೆ ಪ್ರಾಣಿಗಳ ಅವಶ್ಯಕತೆ ಮತ್ತೂ ಹೆಚ್ಚಾಯಿತು. ಇದೇ ಸಮಯದಲ್ಲಿ ಆಹಾರಕ್ಕಾಗಿ (ಯಜ್ಞ ಯಾಗಾದಿಗಳ ಮೂಲಕ) ಪ್ರಾಣಿಗಳ ವಧೆ ನಡೆಯುತ್ತಲೇ ಇದ್ದುದರಿಂದಾಗಿ ಪ್ರಾಣಿಗಳ ಕೊರತೆ ಕಾಣಿಸತೊಡಗಿ ಹೆಚ್ಚು ಪ್ರಾಣಿಗಳ ಅವಶ್ಯಕತೆ ಉಂಟಾಯಿತು. ಈ ಪಶುವಧೆಗಳು ನಿಲ್ಲದೆ ಕೃಷಿ ವ್ಯವಸ್ಥೆಯು ಭದ್ರವಾಗಲು ಸಾಧ್ಯವಿರಲಿಲ್ಲ. ಈ ಪರಿಸ್ಥಿತಿಯಲ್ಲಿ ಸರಿಸುಮಾರು ಇದೇ ಕಾಲಘಟ್ಟದಲ್ಲಿ (ಸುಮಾರು ಕ್ರಿ. ಪೂ. ೬ನೇ ಶತಮಾನ) ತಲೆಯೆತ್ತಿದ ಸುಮಾರು ೬೨ ಹೊಸ ಮತಪಂಥಗಳಲ್ಲಿ ಮುಖ್ಯವಾದ ಜೈನ, ಬೌದ್ಧ ಮತಗಳು ಆಹಾರಕ್ಕಾಗಿ (ಯಜ್ಞ ಯಾಗಾದಿಗಳ ಮೂಲಕ) ನಡೆಯುತ್ತಿದ್ದ ಅಗಾಧ ಪ್ರಮಾಣದ ಪ್ರಾಣಿ ವಧೆಯನ್ನು ವಿರೋಧಿಸಿದವು. ಕೃಷಿಕ ಜನರು ಹೆಚ್ಚು ಹೆಚ್ಚಾಗಿ ಜೈನ, ಬೌದ್ಧ ಮತಗಳತ್ತ ಆಕರ್ಷಿತರಾದರು. ವೈದಿಕ ಮತಕ್ಕೆ ತನ್ನ ಉಳಿವಿನ ಪ್ರಶ್ನೆ ಎದುರಾಯಿತು. ಯಜ್ಞ ಯಾಗಾದಿಗಳಲ್ಲಿ ಮಾರ್ಪಾಟಾಯಿತು; ಅವುಗಳಲ್ಲಿ ಪ್ರಾಣಿ ಬಲಿಯ ಬದಲಾಗಿ ಪಿಷ್ಟ ಪಶುಗಳನ್ನು ಅಂದರೆ ಪ್ರಾಣಿಯಾಕಾರದ ಹಿಟ್ಟಿನ/ಅನ್ನದ ಮುದ್ದೆಗಳನ್ನು ಅರ್ಪಿಸುವ ಪದ್ಧತಿ ಜಾರಿಗೊಳಿಸಲಾಯಿತು. ಹೀಗಾಗಿ ಕಾಲಕ್ರಮೇಣ ವೈದಿಕ ಮತದ ಜನರಲ್ಲಿ ಮಾಂಸ ಭಕ್ಷಣೆಯು ಕಡಿಮೆಯಾಗುತ್ತಾ ಬಂದಿತು ಮತ್ತು ಒಂದು ಹಂತದಲ್ಲಿ ಮಾಂಸಭಕ್ಷಣೆಯನ್ನು ಸಂಪೂರ್ಣ ತ್ಯಜಿಸಲಾಯಿತು.

ಈ ದೇಶದ ಮೂಲಗ್ರಂಥಗಳಾದ ವೇದ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು, ಸ್ಮೃತಿಗಳು, ಗೃಹ್ಯಸೂತ್ರಗಳನ್ನು ಪೂರ್ವಾಗ್ರಹಪೀಡಿತರಾಗದೇ ವಸ್ತುನಿಷ್ಠವಾಗಿ ಅವಲೋಕಿಸಿದರೆ ಗೋವುಗಳ ಮತ್ತು ಇತರ ಪ್ರಾಣಿಗಳ ಬಗ್ಗೆ ಅವುಗಳಲ್ಲಿ ಉಲ್ಲೇಖವಾಗಿರುವ ಸತ್ಯವನ್ನು ಕಂಡುಕೊಳ್ಳಬಹುದಾಗಿದೆ. ಋಗ್ವೇದವಂತೂ ದನಕರುಗಳ ಸಂಪತ್ತು (ಆ ಕಾಲದಲ್ಲಿ ಧನ ಇರಲಿಲ್ಲ; ದನ ಮುಂತಾದ ಜಾನುವಾರುಗಳೇ ಸಂಪತ್ತು ಆಗಿತ್ತು), ಜಾನುವಾರುಗಳಿಗಾಗಿ ನಡೆದ ದಾಳಿ, ಲೂಟಿಗಳ ವಿವರಗಳಿಂದ ತುಂಬಿ ಹೋಗಿದೆ. ಆ ಕಾಲದಲ್ಲಿ ಹಸುಗಳೇ ಜೀವನದ ಮುಖ್ಯ ಆಧಾರವಾಗಿದ್ದು ಗೋಸಂಪತ್ತಿಗಾಗಿ ಯುದ್ಧಗಳು ನಡೆಯುತ್ತಿದ್ದುವು. ಋಗ್ವೇದದಲ್ಲಿ ಯುದ್ಧವನ್ನು 'ಗವಿಷ್ಠಿ', ಎಂದರೆ ಹಸುಗಳನ್ನು ಹುಡುಕುವುದು, ಎಂದೇ ಕರೆಯಲಾಗಿದೆ. ವೈದಿಕ ಮತದವರಿಗೆ ಗೋಮಾಂಸವು ಇಂದು ವರ್ಜ್ಯವಾಗಿದ್ದರೂ ಪ್ರಾಚೀನ ಕಾಲದಲ್ಲಿ ಹಾಗಿರಲಿಲ್ಲ. ಸುಮಾರು ಕ್ರಿ.ಶ. ಒಂದು, ಎರಡನೇ ಶತಮಾನಗಳವರೆಗೂ ಈ ವೈದಿಕರು ಮಾಂಸಾಹಾರಿಗಳಾಗಿದ್ದು, ಆಡು, ಕುದುರೆ, ಹಂದಿ, ಎಮ್ಮೆ, ಕೋಣ, ಗೋವು ಮುಂತಾದ ಪ್ರಾಣಿಗಳ ಮಾಂಸವನ್ನು ತಿನ್ನುತ್ತಿದ್ದರು. ಹಾಲು ಕರೆಯುವ ಹಸುಗಳು ಮಾತ್ರ ಅವಧ್ಯವಾಗಿದ್ದು ಇತರ ಎಲ್ಲಾ ಬಗೆಯ ಗೋಮಾಂಸವನ್ನು ಭಕ್ಷಿಸುತ್ತಿದ್ದರು ಎಂಬ ಸತ್ಯವು ಋಗ್ವೇದ ಇತ್ಯಾದಿ ಪುರಾತನ ಗ್ರಂಥಗಳಲ್ಲಿ ಉಲ್ಲೇಖವಾಗಿದೆ. ವೇದ ಕಾಲದಲ್ಲಿದ್ದ ಅಡುಗೆ ಊಟಗಳ ಪದ್ಧತಿ ಹೇಗಿತ್ತೆಂದರೆ ಪ್ರಾಣಿಗಳನ್ನು ಕೊಂದು, ಬೆಂಕಿ (ಅಗ್ನಿ)ಯಲ್ಲಿ ಬೇಯಿಸಿ, ಒಂದು ಭಾಗವನ್ನು ದೇವತೆಗಳಿಗೆ ನೈವೇದ್ಯವಾಗಿ ಅರ್ಪಿಸಿ, ಉಳಿದದ್ದನ್ನು ಎಲ್ಲರೂ ಭಕ್ಷಿಸುತ್ತಿದ್ದರು; ಈ ಪದ್ಧತಿ ಅಥವಾ ಕ್ರಮವನ್ನು 'ಯಜ್ಞ' ಎಂದು ಕರೆಯಲಾಗುತ್ತಿತ್ತು. ಕ್ರಮೇಣ ರಾಜರು, ರಾಜವಂಶಗಳು ಉಂಟಾದಾಗ, ರಾಜರು ಈ ಯಜ್ಞಗಳನ್ನು ಬೃಹತ್ ಗಾತ್ರದಲ್ಲಿ ನಡೆಸತೊಡಗಿ ಅವುಗಳನ್ನು ಯಾಗಗಳೆಂದು ಕರೆದರು. ಇವುಗಳಲ್ಲಿ 'ಅಶ್ವಮೇಧ', 'ರಾಜಸೂಯ' ಮುಂತಾದ ಮಹಾ ಯಾಗಗಳು ಮುಖ್ಯವಾಗಿದ್ದವು. ಅಲ್ಲದೆ ಕಾಮ್ಯೇಷ್ಟಿಗಳೆಂಬ ಚಿಕ್ಕಪುಟ್ಟ ಯಜ್ಞಗಳನ್ನೂ ನಡೆಸಲಾಗುತ್ತಿತ್ತು. 'ಗೋಸವ', ಅಂದರೆ ಗೋವುಗಳ ಬಲಿಯು, ಪ್ರತೀ ಯಾಗದ ಒಂದು ಅವಿಭಾಜ್ಯ ಅಂಗವಾಗಿತ್ತು. 'ಪಂಚಶರದೀಯ ಸವ', 'ಪಶುಬಂಧ', 'ಶೂಲಗಾವ', 'ಅತಿರಾತ್ರ' ಇತ್ಯಾದಿ ಯಜ್ಞಗಳು ಗೋವಧೆಗಾಗಿಯೇ ಮೀಸಲಾಗಿದ್ದವು. ಕುದುರೆ, ಆಡು, ಹಂದಿ, ಗೋವು ಮುಂತಾದ ಪ್ರಾಣಿಗಳನ್ನು ಬಲಿ ಕೊಡಲಾಗುತ್ತಿತ್ತು. ಐತ್ರೇಯ, ತೈತ್ತಿರೀಯ, ಗೋಪಥ, ಶತಪಥ ಮುಂತಾದ ಬ್ರಾಹ್ಮಣಗಳಲ್ಲಿ ಹಾಗೂ ಧರ್ಮ ಸೂತ್ರಗಳಲ್ಲಿ ಈ ಯಜ್ಞಗಳ ವಿವರಗಳು ದೊರಕುತ್ತವೆ.

ಉದಾಹರಣೆಗೆ –

ಶತಪಥ ಬ್ರಾಹ್ಮಣವು ದನ, ಕರು, ಕುದುರೆ, ಹಂದಿ ಇತ್ಯಾದಿಗಳ ಆಹುತಿಗೆ ಸಂಬಂಧಿಸಿದ ಕಟ್ಟುಪಾಡುಗಳ ವಿವರಗಳನ್ನು ಕೊಡುತ್ತದೆ ಹಾಗೂ ಆಹುತಿಗೆ ಅನರ್ಹವಾದ ಆನೆ, ಒಂಟೆ, ಗೌರ (ಒಂದು ಬಗೆಯ ಎಮ್ಮೆ) ಇತ್ಯಾದಿಗಳನ್ನು ಪಟ್ಟಿ ಮಾಡುತ್ತದೆ.

ಬೃಹದಾರಣ್ಯಕೋಪನಿಷತ್ ಮುಂತಾದ ಉಪನಿಷತ್ತುಗಳಲ್ಲಿಯೂ ಗೋಮಾಂಸ ಭಕ್ಷಣೆಯ ಬಗ್ಗೆ ಹೇಳಲಾಗಿದೆ.

ಋತ್ವಿಜರು, ಆಚಾರ್ಯರು, ರಾಜರು, ಮದುವೆಯ ಗಂಡು, ವೇದಾಧ್ಯಯನ ಮುಗಿಸಿ ಮನೆಗೆ ಮರಳಿದ ಮಕ್ಕಳು ಇತ್ಯಾದಿ ಅಪರೂಪದ ಅತಿಥಿಗಳಿಗೆ ನೀಡಬೇಕಾದ ಸತ್ಕಾರಕ್ಕೆ 'ಮಧುಪರ್ಕ'ವೆಂಬ ಹೆಸರಿದ್ದು ಈ ಸಮಾರಂಭದ ಭೋಜನದಲ್ಲಿ ಗೋಮಾಂಸವು ಅತ್ಯಗತ್ಯವೆಂದು ಆಶ್ವಲಾಯನ ಮೊದಲಾದ ಗೃಹ್ಯಸೂತ್ರಗಳಲ್ಲಿ ವಿಧಿಸಲಾಗಿದೆ. ಯಜ್ಞಯಾಗಾದಿಗಳಲ್ಲಿ ದೇವತೆಗಳ ತೃಪ್ತಿಗಾಗಿ ಗೋಮಾಂಸದ ಭಕ್ಷ್ಯಗಳನ್ನು ತಯಾರಿಸಲಾಗುತ್ತಿದ್ದರೆ 'ಮಧುಪರ್ಕ'ದಲ್ಲಿ ಇದನ್ನು ಅತಿಥಿಗಳ ಪ್ರೀತ್ಯರ್ಥವಾಗಿ ಮಾಡಲಾಗುತ್ತಿತ್ತು. ಹೀಗಾಗಿಯೇ ಸಂಸ್ಕೃತದಲ್ಲಿ ಅತಿಥಿಗೆ 'ಗೋಘ್ನ' ಎಂಬ ಪರ್ಯಾಯ ಹೆಸರೂ ಇದೆ.

ಮನುಸ್ಮೃತಿ (ಸುಮಾರು ಕ್ರಿ. ಶ. ೨ನೆಯ ಶತಮಾನ) ಯಲ್ಲಿ ಯಾವ ಪ್ರಾಣಿಗಳ ಮಾಂಸ ತಿನ್ನಬಹುದು, ಯಾವ ಪ್ರಾಣಿಗಳ ಮಾಂಸ ನಿಷಿದ್ಧ ಎಂಬುದನ್ನು ವಿವರಿಸಲಾಗಿದೆ; ನಿಷಿದ್ಧ ಮಾಂಸಗಳ ಪಟ್ಟಿಯಲ್ಲಿ ಗೋಮಾಂಸ ಇಲ್ಲ ಎಂಬುದು ಮುಖ್ಯವಾಗಿ ಗಮನಿಸಬೇಕಾದ ವಿಷಯ.

ಹೀಗೆ ಋಷಿಗಳ ಸಮೇತ ಪ್ರಾಚೀನ ಕಾಲದ ವೈದಿಕ ಮತದ ಜನರು ಇತರ ಮಾಂಸಗಳ ಜೊತೆಗೆ ಗೋಮಾಂಸವನ್ನು ತಿನ್ನುತ್ತಿದ್ದರೆಂಬ ಸತ್ಯವು ಮೇಲೆ ಹೇಳಿದ ನಮ್ಮ ಪುರಾತನ ಗ್ರಂಥಗಳ ವಸ್ತುನಿಷ್ಠ ಅಧ್ಯಯನದಿಂದ ತಿಳಿದು ಬರುತ್ತದೆ. ಇದು ಗೋವಿನ ನಿಜವಾದ ಇತಿಹಾಸ.

**ನಮ್ಮ ಮುಂದಿರುವ ಸಮಸ್ಯೆಗಳು ಹಾಗೂ ನಮ್ಮ ಹೊಣೆಗಾರಿಕೆ**

ಬೆಲೆ ಏರಿಕೆ, ನಿರುದ್ಯೋಗ, ದಾರಿದ್ರ್ಯ, ಶೈಕ್ಷಣಿಕ ಅವಕಾಶಗಳ ಅಭಾವ ಮತ್ತು ಇತ್ತೀಚೆಗೆ ಜಾಗತೀಕರಣ, ಖಾಸಗೀಕರಣ, ಉದಾರೀಕರಣದಿಂದಾಗಿ ಸಂಕಷ್ಟಗಳಿಗೆ ಸಿಕ್ಕಿ ನರಳುತ್ತಿರುವ, ಮಾನಸಿಕವಾಗಿ ತತ್ತರಿಸುತ್ತಿರುವ ಜನಸಾಮಾನ್ಯರು ಸ್ವಾಭಾವಿಕವಾಗಿಯೇ ಧರ್ಮದ ಅಮಲಿಗೆ ಒಳಗಾಗುತ್ತಾರೆ. ಮತ್ತು ಎಲ್ಲರೂ ಗಮನಿಸಿರುವ ಹಾಗೆ ಈಗ ಕೆಲವು ವರ್ಷಗಳಿಂದ ನಮ್ಮ ದೇಶದಲ್ಲಿ ಈ ಧಾರ್ಮಿಕ ಅಮಲು ಹೆಚ್ಚು ಹೆಚ್ಚಾಗಿ ಏರುತ್ತಲೇ ಇದೆ. ಎಲ್ಲೆಲ್ಲೂ ಹೊಸ ಹೊಸ ಮಠ, ದೇವಸ್ಥಾನ, ಚರ್ಚ್, ಮಸೀದಿಗಳ ನಿರ್ಮಾಣ ಹೆಚ್ಚುತ್ತಲೇ ಇದ್ದು ಅವುಗಳ ಸಂಪತ್ತಿನಲ್ಲೂ ಅಪಾರ ಹೆಚ್ಚಳ ಆಗಿದೆ ಎಂಬುದು ನಿರ್ವಿವಾದ. (ಇದಕ್ಕೂ ಏರುತ್ತಿರುವ ಭ್ರಷ್ಟಾಚಾರಕ್ಕೂ ಏನಾದರೂ ಸಂಬಂಧವಿದೆಯೇ ಎಂಬ ವಿಷಯದಲ್ಲಿ ಸಂಶೋಧನೆ ಆಗಬೇಕಾಗಿದೆ). ಹಳೆ ದೇವಸ್ಥಾನ, ದೈವಸ್ಥಾನಗಳ ಜೀರ್ಣೋದ್ಧಾರ, ಬ್ರಹ್ಮಕಳಶ ಮುಂತಾದ ಧಾರ್ಮಿಕ ಕ್ರಿಯೆಗಳೂ ಹೆಚ್ಚಾಗಿವೆ. ಹಿಂದೂ ಧರ್ಮ ಪರಮತ ಸಹಿಷ್ಣು ಎಂದು ಬಿಂಬಿಸುತ್ತಲೇ ಈ ನೆಲದ ಇತರ ಮತಗಳ ಪೂಜಾ ಸ್ಥಳಗಳ, ಬುಡಕಟ್ಟು ಜನಾಂಗಗಳ ಪರಂಪರೆಗೆ ಸೇರಿದ ದೈವಸ್ಥಾನಗಳ ಮೇಲೆ ಹಲ್ಲೆ ನಡೆಸಲಾಗಿದೆ. ವೈದಿಕೀಕರಣದ ಪ್ರಕ್ರಿಯೆಯೂ ಪುರಾತನ ಕಾಲದಿಂದಲೇ ನಡೆಯುತ್ತಿದ್ದು, ಈ ಪ್ರಕ್ರಿಯೆ ಇಂದಿಗೂ ನಡೆಯುತ್ತಲೇ ಇದೆ. ಈ ಎಲ್ಲ ಕಾರ್ಯಕ್ರಮಗಳಿಗಾಗಿ ದೇಶವಿದೇಶಗಳಿಂದ ದುಡ್ಡಿನ ಮಹಾಪೂರವೇ ಹರಿದು ಬರುತ್ತಿದೆ. ಪ್ರತೀ ಕೋಮಿನಲ್ಲೂ ಸ್ವಾಮಿಗಳ, ಸಂತರ, ಬಾಬಾಗಳ, ಧರ್ಮಗುರುಗಳ, ಮುಲ್ಲಾಗಳ ಸಂಖ್ಯೆಯಲ್ಲೂ ಅಪಾರ ವೃದ್ಧಿ ಆಗಿದೆ. ಇನ್ನೂ ಆಗುತ್ತಲೇ ಇದೆ. ದೇಶದಲ್ಲಿ ಧಾರ್ಮಿಕ ಮೂಲನಿಷ್ಠಾವಾದದ ಗಾಳಿಯು ಪ್ರಬಲವಾಗಿ ಬೀಸುತ್ತಿದೆ. ಮತ ಮತಗಳ ನಡುವೆ ಅಸಹನೆ ಹೆಚ್ಚುತ್ತಲಿದೆ. ದೇಶದಲ್ಲಿ ಒಗ್ಗಟ್ಟು ಕಡಿಮೆಯಾಗುತ್ತಲಿದೆ. ಆಂತರಿಕವಾಗಿ ದೇಶವು ಬಲಹೀನವಾಗುತ್ತಿದೆ. ಹೀಗೆ ದುರ್ಬಲಗೊಂಡ ದೇಶವು ಎಷ್ಟು ಕಾಲ ಉಳಿದೀತು? ಎಲ್ಲಿಯವರೆಗೆ ನಮ್ಮ ಭ್ರಷ್ಟ ವ್ಯವಸ್ಥೆ ಇಂತಹ ಸಮಾಜ ವಿರೋಧಿ ಮತಾಂಧ ಫ್ಯಾಸಿಸ್ಟ್ ಶಕ್ತಿಗಳನ್ನು ಪೋಷಿಸುತ್ತಾ ಬರುತ್ತದೋ ಅವರೆಗೆ ಈ ದೇಶಕ್ಕೆ ಒಳ್ಳೆಯ ಭವಿಷ್ಯವಿಲ್ಲವೆಂದೇ ಅತ್ಯಂತ ವಿಷಾದ ದಿಂದ ಹೇಳಬೇಕಾಗಿದೆ. ಕೋಮುದಳ್ಳುರಿಯಲ್ಲಿ ದೇಶದ ವಿನಾಶವಂತೂ ಖಂಡಿತ. ಈ ಲೋಕದಲ್ಲಿ ಎಲ್ಲಿ ನೋಡಿದರೂ ಧರ್ಮ ಮತ್ತು ದೇವರ ಹೆಸರಿನಲ್ಲಿ ನಡೆದಿ ರುವಷ್ಟು ಮೋಸ, ಅನ್ಯಾಯ, ರಕ್ತಪಾತ, ಹಿಂಸೆ, ಕ್ರೌರ್ಯ ಬೇರಾವ ಕಾರಣಕ್ಕೂ ನಡೆದಿಲ್ಲ ಎಂಬುದೇ ಇತಿಹಾಸದ ಸತ್ಯ.

ಇನ್ನಾದರೂ ಮತಾಂಧ ಫ್ಯಾಸಿಸ್ಟ್ ಶಕ್ತಿಗಳ ವ್ಯವಸ್ಥಿತ ಷಡ್ಯಂತ್ರವನ್ನು ಜನಸಾಮಾನ್ಯರು ಗಮನಿಸಬೇಕಾದ ಅಗತ್ಯವಿದೆ ಮತ್ತು ಈ ಷಡ್ಯಂತ್ರಕ್ಕೆ ಬಲಿಪಶುಗಳಾಗದೆ ಈ ದುಷ್ಟ ಶಕ್ತಿಗಳಿಂದ ದೂರ ಸರಿಯಬೇಕಾಗಿದೆ; ಈ ದುಷ್ಟ ಶಕ್ತಿಗಳ ಜನಾಂಗ ದ್ವೇಷದ ಹಾಗೂ ಕುಟಿಲ ರಾಜಕಾರಣದ ಕಾರಸ್ಥಾನವು ಯಶಸ್ವಿಯಾಗದಂತೆ ನೋಡಿಕೊಳ್ಳಬೇಕಾಗಿದೆ.

'ತಾನೂ ಬದುಕು, ಇತರರ ಬದುಕಿನ ಹಕ್ಕನ್ನೂ ಗೌರವಿಸು' ಎಂಬ ಮೂಲ ತತ್ವವನ್ನು ಎಲ್ಲರೂ ತಿಳಿದುಕೊಂಡು ಅದರ ಪ್ರಕಾರ ನಡೆದುಕೊಂಡರೆ ಹಾಗೂ ಸಂವಿಧಾನದ ಆಶಯಗಳಿಗೆ ಅನುಸಾರವಾಗಿ ನಡೆದರೆ ಮನುಷ್ಯರು ಖಂಡಿತಾ ಪ್ರೀತಿ ಸೌಹಾರ್ದಗಳಿಂದ ಸಹಬಾಳ್ವೆ ನಡೆಸುವಂತಾದೀತು. ಹಾಗಾದರೆ ಮಾತ್ರ ಕರಾವಳಿ ಜಿಲ್ಲೆಗಳಲ್ಲಿ, ರಾಜ್ಯದಲ್ಲಿ ಹಾಗೂ ದೇಶದಲ್ಲಿ ಶಾಂತಿ ನೆಲೆಸೀತು.

ಸುರೇಶ ಬಾಕ್ರಬೈಲು (ಸುರೇಶ್ ಬಿ. ಭಟ್)
[illegible] ೨-೧೧೧-೭೭೬, ಮಂಗಳಾ ಗ್ಯಾಸ್ ಗೋಡೌನ್ ಬಳಿ, ಬಿಜೈ, ಮಂಗಳೂರು - ೫೭೫ ೦೦೪

# ಇಷ್ಟಲಿಂಗ ದೀಕ್ಷೆಯೆಂಬ ಹುಸಿನುಸುಳು

ಏ. ಚಂದ್ರಶೇಖರ ನಂಗಲಿ

**ಈ**ಗ ತಾನೆ ಡಾ|| ಎಲ್. ಬಸವರಾಜು ಸಂಪಾದಿಸಿರುವ 'ಸೊನ್ನಲಾಪುರದ ಸಂತ ಸಿದ್ಧರಾಮನ ನಿಜವಚನಗಳು' (೨೦೦೭) ಎಂಬ ವ್ಯಾಖ್ಯಾನ ಸಹಿತವಾದ ಮಹತ್ವದ ಗ್ರಂಥವು ಬಿಡುಗಡೆಯಾಗಿದೆ. ಸಿದ್ಧರಾಮನ ವಚನಗಳಿಗೆ ಸಂಬಂಧಪಟ್ಟಂತೆ ಕನ್ನಡದಲ್ಲಿ ಈಗಾಗಲೇ ನಾಲ್ಕು ಗ್ರಂಥಗಳು ಪ್ರಕಟವಾಗಿವೆ:

೧. ಸಿದ್ಧರಾಮೇಶ್ವರ ವಚನಗಳು (೧೯೬೮) ಸಂ|| ಆರ್. ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨. ಸಿದ್ಧರಾಮಯ್ಯನ ಶಿವಯೋಗ ಷಟ್ಸ್ಥಲಾನುಭವದ ವಚನಮುತ್ತಿನ ಪೆಂಡೆಯ ಒದುವ ಅನ್ನದಾನಿ ದೇವರು (೧೯೮೬) ಸಂ|| ಎಸ್. ಶಿವಣ್ಣ, ಬಸವ ಸಮಿತಿ, ಬಸವಭವನ, ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು.

೩. ಸಿದ್ಧರಾಮಯ್ಯದೇವರ ವಚನಗಳು (೧೯೯೮) ಸಂ. ಡಾ|| ಎಂ. ಎಂ. ಕಲಬುರ್ಗಿ, ಡಾ|| ಸಾ. ಶಿ. ಮರುಳಯ್ಯ; ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜಪೇಟೆ, ಬೆಂಗಳೂರು.

೪. ಸಿದ್ಧರಾಮೇಶ್ವರ ವಚನ ಸಂಪುಟ-೪ (೧೯೯೩ ಮತ್ತು ೨೦೦೧) ಸಂ. ಡಾ|| ಎಸ್. ವಿದ್ಯಾಶಂಕರ, ಕನ್ನಡ ಪುಸ್ತಕ ಪ್ರಾಧಿಕಾರ-ಬೆಂಗಳೂರು.

ಈ ನಾಲ್ಕು ಗ್ರಂಥಗಳ ನಂತರ ಐದನೆಯದಾಗಿ

೫. 'ಸೊನ್ನಲಾಪುರದ ಸಂತ ಸಿದ್ಧರಾಮನ ನಿಜವಚನಗಳು' (೨೦೦೭) ಸಂ. ಡಾ|| ಎಲ್. ಬಸವರಾಜು, ಸಾರಾ ಎಂಟರ್‌ಪ್ರೈಸಸ್, ಮೈಸೂರು-ಪ್ರಕಟವಾಗಿದೆ. ಈ ಗ್ರಂಥದ ಶೀರ್ಷಿಕೆಯಲ್ಲಿರುವ 'ನಿಜವಚನಗಳು' ಎಂಬ ನುಡಿಯನ್ನು ಕೇಳಿದೊಡನೆ ಮನ ದೊಳಗೆ ಇದೇನೆಂಬ ಪ್ರಶ್ನೆ ಹುಟ್ಟುತ್ತದೆ. ವಚನ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ನಡೆದಿರುವ ಮುಂಚೂಣಿ ವರ್ಗದ ಅಧ್ಯಯನಗಳು ಮತ್ತು ಅಬ್ಬರದ ಪ್ರಚಾರಗಳು ನಿಜವಚನಗಳನ್ನು ಮುಚ್ಚಿಹಾಕಿವೆ.

ಇಪ್ಪತ್ತೊಂದನೇ ಶತಮಾನದಲ್ಲಿರುವ ನಾವು ಮೊದಲು ತಿಳಿಯಬೇಕಾದ ಸತ್ಯವೇನೆಂದರೆ ವಚನ ಸಾಹಿತ್ಯವೆಲ್ಲ ಸ್ವೀಕಾರಾರ್ಹವಲ್ಲ! ಇದರಲ್ಲಿ ಹುಸಿನುಸುಳುಗಳು ಅಥವಾ ಸುಳ್ಳು ಸೃಷ್ಟಿಗಳು ವಿಪುಲವಾಗಿವೆ. ವಚನ ಸಾಹಿತ್ಯಕ್ಕೆ ಸಂಬಂಧಪಟ್ಟ ವ್ಯಾಖ್ಯಾನಗಳು, ವಿಮರ್ಶೆಗಳು, ಸಂಶೋಧನೆಗಳು ಇಂಥ ಹುಸಿನುಸುಳುಗಳಿಂದ ಕೂಡಿದ್ದು ಹುಳು ಹಿಡಿದ ಮಾವಿನ ಹಣ್ಣುಗಳಂತೆ ''ಒಳಗೆ ಹುಳುಕು ಮೇಲೆ ಥಳುಕು'' ಎಂಬಂತೆ ಮೆರೆಯುತ್ತಿವೆ. ಇದಕ್ಕೆ ಕಾರಣ ಪುರೋಹಿತ ಶಾಹಿ. ಕುವೆಂಪು ಅವರು ದೂರದೃಷ್ಟಿ ಮತ್ತು ಸಂಯಮದಿಂದ ಬಳಸಿರುವ 'ಪುರೋಹಿತಶಾಹಿ' ಎಂಬ ಪರಿಭಾಷೆ ತುಂಬಾ ಅರ್ಥಪೂರ್ಣವಾಗಿದೆ. ಎಲ್ಲ ಜಾತಿ, ಮತಧರ್ಮ, ಪಂಥಗಳಲ್ಲಿ 'ಪುರೋಹಿತಶಾಹಿ' ವ್ಯವಸ್ಥೆಯೊಂದು ಕಂಡುಬರುತ್ತದೆ. 'ಪುರೋಹಿತಶಾಹಿ'ಯು ಯಾವುದೇ ಒಂದು ನಿರ್ದಿಷ್ಟ ಜಾತಿಯನ್ನು ಸೂಚಿಸುವುದಿಲ್ಲ. ಸ್ಥಾವರ ಲಿಂಗವನ್ನು ಪೂಜಿಸುವ ಶೈವರಲ್ಲಿ ಮತ್ತು ಇಷ್ಟಲಿಂಗವನ್ನು ಧರಿಸುವ ವೀರಶೈವರಲ್ಲಿ-ಇಬ್ಬರಲ್ಲು ಪುರೋಹಿತಶಾಹಿ ವ್ಯವಸ್ಥೆಯಿದೆ. ಶೈವಪುರೋಹಿತಶಾಹಿ ಮತ್ತು ವೀರಶೈವ ಪುರೋಹಿತಶಾಹಿಗಳ ವ್ಯವಸ್ಥಿತ ಹುನ್ನಾರದಿಂದಾಗಿಯೇ ವಚನ ಸಾಹಿತ್ಯದಲ್ಲಿ 'ಹುಸಿ ನುಸುಳು' ವಿಪುಲವಾಗಿ ಸೇರಿಹೋಗಿದ್ದು 'ನಿಜದುದಯ'ಕ್ಕೆ ಎಡೆಯಿಲ್ಲವಾಗಿದೆ. ೧೯೬೦ರ ದಶಕದಿಂದಲೂ (= ಅಲ್ಲಮನ ವಚನ ಚಂದ್ರಿಕೆಯ ಕಾಲದಿಂದಲೂ) ಡಾ|| ಎಲ್. ಬಸವರಾಜು ಅವರು ಇಂಥ ಪುರೋಹಿತ ಶಾಹಿ ವ್ಯವಸ್ಥೆಯ ವಿರುದ್ಧ ಸತ್ಯಶುದ್ಧ ಕಾಯಕವೆಂಬಂತೆ ತಮ್ಮ ಅಧ್ಯಯನ ಮತ್ತು ಸಂಶೋಧನೆಗಳನ್ನು ನಡೆಸುತ್ತಾ ಬಂದಿದ್ದಾರೆ. ಪುರೋಹಿತಶಾಹಿ ವಿದ್ವಾಂಸರು ಇದುವರೆಗೆ ಮೆರೆಸುತ್ತಾ ಬಂದಿರುವ ಐತಿಹಾಸಿಕ ಘಟನೆಯೆಂದರೆ ಸಿದ್ಧರಾಮನ ಇಷ್ಟಲಿಂಗ ದೀಕ್ಷಾವಿಧಿ. ಅಲ್ಲಮನೊಡನೆ ಕಲ್ಯಾಣಕ್ಕೆ ಬರುವ ಸಿದ್ಧರಾಮನು ಬಸವಣ್ಣನವರನ್ನು ಭೇಟಿಯಾಗಿ ಚೆನ್ನಬಸವಣ್ಣನಿಂದ ಇಷ್ಟ ಲಿಂಗದೀಕ್ಷೆಯನ್ನು ಪಡೆದನೆಂಬುದನ್ನು ವ್ಯಾಖ್ಯಾನ-ವಿಮರ್ಶೆ- ಸಂಶೋಧನೆಗಳ ಹೆಸರಿನಲ್ಲಿ ಇನ್ನಿಲ್ಲದಂತೆ ಮೆರೆಸಲಾಗಿದೆ. ಇದನ್ನೆ ನಾನು ಮುಂಚೂಣಿ ವರ್ಗದ ಅಧ್ಯಯನ ಕ್ರಮಗಳು ಮತ್ತು ಅಬ್ಬರದ ಪ್ರಚಾರಗಳೆಂದು (=ಕಣ್ಣು ಕುಕ್ಕುವ ಬೆಳಕು) ಕರೆದಿದ್ದೇನೆ.

ಡಾ|| ಎಲ್. ಬಸವರಾಜು ಈ ಹುಸಿನುಸಳು ಅಥವಾ ಸುಳ್ಳು ಸೃಷ್ಟಿಯನ್ನು ಒಪ್ಪುವುದಿಲ್ಲ:

೧. ಬುಡರಸಿಂಗಿ ಗ್ರಾಮದ ಶಾಸನ (ಕ್ರಿ. ಶ. ೧೨೫೭)

೨. ಪಡೇಕನೂರ ಗ್ರಾಮದ ಶಾಸನ (ಕ್ರಿ. ಶ. ೧೨೫೬-೫೭)

೩. ಸಂಗೂರು ಗ್ರಾಮದ ಶಾಸನ (ಕ್ರಿ. ಶ. ೧೨೬೫) ಈ ಮೂರು ಶಾಸನಗಳ ಆಧಾರದಿಂದ ಡಾ|| ಎಲ್. ಬಸವರಾಜು ಹೇಳುವುದಿಷ್ಟು ''ಆ ಸಿದ್ಧರಾಮ ಶಿವಯೋಗಿಯು ಕ್ರಿ. ಶ. ೧೨೬೫ ರವರೆಗೆ ಜೀವಂತವಿದ್ದನೆಂಬುದೂ ಖಚಿತವಾಗಿ (ಕ್ರಿ.ಶ. ೧೧೬೮ರ ಉತ್ತರೋತ್ತರ ಪತ್ತೆಯಿಲ್ಲವಾದ) ಬಸವಣ್ಣನವರನ್ನು ಕಲ್ಯಾಣದಲ್ಲಿ ಯಾವಾಗಲಾಗಲಿ ಕಂಡು ಅವರ ಸೋದರಳಿಯ ಚೆನ್ನಬಸವಣ್ಣನವರಿಂದ ಲಿಂಗದೀಕ್ಷೆಯನ್ನು ಪಡೆದನೆಂಬುದು ಮಾನವರ ಸರಾಸರಿ ಆಯುರ್ಮಾನದ ದೃಷ್ಟಿಯಿಂದಲೇ ತೀರ ಅಸಂಬದ್ಧವಾಗುತ್ತದೆ'' (=ಡಾ|| ಎಲ್. ಬಸವರಾಜು : ಸೊನ್ನಲಾಪುರದ ಸಂತಸಿದ್ಧರಾಮನ ವಚನಗಳು, ಪೀಠಿಕೆಯಿಂದ, ಪುಟ ।x-x)

ಶಿವಗಣಪ್ರಸಾದಿ ಮಹಾದೇವಯ್ಯ ಸೃಷ್ಟಿಸಿದ ಮೊದಲ 'ಶೂನ್ಯಸಂಪಾದನೆ' ಒಂದು ಮಹಾನ್ ಶಿಲ್ಪಕಲೆ. ಇದರಲ್ಲಿ ಅಲ್ಲಮಪ್ರಭು ಸೊನ್ನಲಿಗೆಯಲ್ಲಿದ್ದ ಸಿದ್ಧರಾಮನನ್ನು (=ಒಬ್ಬ ಮಹಾಭಕ್ತನನ್ನು ತೋರಿಸುತ್ತೇನೆಂದು ಹೇಳಿ) ಕಲ್ಯಾಣಕ್ಕೆ ಬಸವಣ್ಣನ ಬಳಿಗೆ ಕರೆತರುತ್ತಾನೆ. ಭಕ್ತಿಭಂಡಾರಿಯೆಂದು ಪ್ರಸಿದ್ಧನಾಗಿದ್ದ ಬಸವಣ್ಣನಿಗೆ ಬದಲು ಮಹಾಮನೆಯ ತಿಪ್ಪೆಗುಂಡಿ ಅಥವಾ ಪ್ರಸಾದದ ಕುಳಿಯಲ್ಲಿ ಯಾರ ಕಣ್ಣಿಗೂ ಬೀಳದೆ ಇದ್ದ (=ಪರ್ಷಿಯಾ ಮೂಲದ ಸೂಫಿಸಂತನಿರಬಹುದು) ಮರುಳು ಶಂಕರದೇವನನ್ನು ತೋರಿಸುತ್ತಾನೆ. ಒಂದೇ ಬಾಣದಿಂದ ಎರಡು ಹಕ್ಕಿಗಳನ್ನು ಕೊಲ್ಲುವಂತೆ ಅಲ್ಲಮಪ್ರಭು ಮರುಳುಶಂಕರ ದೇವನೆಂಬ ಭಕ್ತಿಬಾಣದಿಂದ ಸಿದ್ಧರಾಮ ಮತ್ತು ಬಸವಣ್ಣ – ಇಬ್ಬರಿಗೂ ಪ್ರತೀಕ್ಷಾ ಭಂಗದ ಮೂಲಕ ಮಡುಗಟ್ಟಿದ ಗರ್ವರಸವೆಲ್ಲ ಸೋರಿ ಹೋಗುವಂತೆ ಮಾಡಿದ್ದಾನೆ. ನಂತರ, ಮಹಾಮನೆಯಲ್ಲಿ ಸಿದ್ಧರಾಮನಿಗೆ ಇಷ್ಟಲಿಂಗ ದೀಕ್ಷೆಯಾಗಬೇಕು ಎಂಬ ಪ್ರಸ್ತಾಪವಾದಾಗ ಸ್ವತಃ ತಾನೆ ಲಿಂಗವಾಗಿರುವ ಸಿದ್ಧರಾಮಯ್ಯನಿಗೆ ಬೇರೆ ಲಿಂಗವೇಕೆ? – ಎಂದು ಹೇಳುವ ಅಲ್ಲಮಪ್ರಭು

ಇಪ್ಪತ್ತೊಂದನೇ ಶತಮಾನದಲ್ಲಿರುವ ನಾವು ಮೊದಲು ತಿಳಿಯಬೇಕಾದ ಸತ್ಯವೇನೆಂದರೆ ವಚನ ಸಾಹಿತ್ಯವೆಲ್ಲ ಸ್ವೀಕಾರಾರ್ಹವಲ್ಲ! ಇದರಲ್ಲಿ ಹುಸಿನುಸುಳುಗಳು ಅಥವಾ ಸುಳ್ಳು ಸೃಷ್ಟಿಗಳು ವಿಪುಲವಾಗಿವೆ. ವಚನ ಸಾಹಿತ್ಯಕ್ಕೆ ಸಂಬಂಧಪಟ್ಟ ವ್ಯಾಖ್ಯಾನಗಳು, ವಿಮರ್ಶೆಗಳು, ಸಂಶೋಧನೆಗಳು ಇಂಥ ಹುಸಿನುಸುಳುಗಳಿಂದ ಕೂಡಿದ್ದು ಹುಳು ಹಿಡಿದ ಮಾವಿನ ಹಣ್ಣುಗಳಂತೆ ''ಒಳಗೆ ಹುಳುಕು ಮೇಲೆ ಥಳುಕು'' ಎಂಬಂತೆ ಮೆರೆಯುತ್ತಿವೆ. ಇದಕ್ಕೆ ಕಾರಣ ಪುರೋಹಿತಶಾಹಿ. ಕುವೆಂಪು ಅವರು ದೂರದೃಷ್ಟಿ ಮತ್ತು ಸಂಯಮದಿಂದ ಬಳಸಿರುವ 'ಪುರೋಹಿತಶಾಹಿ' ಎಂಬ ಪರಿಭಾಷೆ ತುಂಬಾ ಅರ್ಥಪೂರ್ಣವಾಗಿದೆ. ಎಲ್ಲ ಜಾತಿ, ಮತಧರ್ಮ, ಪಂಥಗಳಲ್ಲಿ 'ಪುರೋಹಿತಶಾಹಿ' ವ್ಯವಸ್ಥೆಯೊಂದು ಕಂಡುಬರುತ್ತದೆ. 'ಪುರೋಹಿತಶಾಹಿ'ಯು ಯಾವುದೇ ಒಂದು ನಿರ್ದಿಷ್ಟ ಜಾತಿಯನ್ನು ಸೂಚಿಸುವುದಿಲ್ಲ. ಸ್ಥಾವರಲಿಂಗವನ್ನು ಪೂಜಿಸುವ ಶೈವರಲ್ಲಿ ಮತ್ತು ಇಷ್ಟಲಿಂಗವನ್ನು ಧರಿಸುವ ವೀರಶೈವರಲ್ಲಿ - ಇಬ್ಬರಲ್ಲು ಪುರೋಹಿತಶಾಹಿ ವ್ಯವಸ್ಥೆಯಿದೆ.

ಇಷ್ಟಲಿಂಗದೀಕ್ಷೆಯನ್ನು ನಿರಾಕರಿಸಿದ್ದಾನೆ. ಅತ್ಯಂತ ಪ್ರಶಾಂತವಾದ ವೈಚಾರಿಕತೆಯಿಂದ ಬೆಳುದಿಂಗಳಿನಂತೆ ಬೆಳಗುತ್ತಿರುವ ಈ ರೂಪಕ ಸತ್ಯವನ್ನು ನಂತರದ ಶೂನ್ಯ ಸಂಪಾದನೆಗಳು ಬೇಕಾದಂತೆ ತಿರುಚಿಬಿಟ್ಟಿವೆ. ಇದನ್ನು ರೂಪಿಸಿದವರು ಮಠಾಧೀಶರೆಂಬುದನ್ನು ಸ್ಮರಿಸಿದಲ್ಲಿ ಪುರೋಹಿತಶಾಹಿಯ ವ್ಯವಸ್ಥಿತ ಹುನ್ನಾರದ ಅರಿವಾಗುತ್ತದೆ. ಸ್ವತಃ ಅಲ್ಲಮಪ್ರಭುವಿನಿಂದಲೇ ಸಿದ್ಧರಾಮಯ್ಯನಿಗೆ ಇಷ್ಟಲಿಂಗ ದೀಕ್ಷೆಯಾಗಬೇಕೆಂದು ಹೇಳಿಸಿ, ಅದನ್ನು ವಿಧಿವತ್ತಾಗಿ ಚೆನ್ನಬಸವಣ್ಣನಿಂದ ನಡೆಸಿಬಿಟ್ಟಿದ್ದಾರೆ.

ಡಾ॥ ಎಲ್. ಬಸವರಾಜು ನಿರೂಪಿಸಿರುವಂತೆ ಬಸವಾದಿ ಶರಣರಿಂದ ಒಂದು ಶತಮಾನಕ್ಕೂ ಮಿಗಿಲು ದೂರದಲ್ಲಿರುವ ಸಿದ್ಧರಾಮನು 'ಕಲ್ಯಾಣಕ್ಕೆ ಬಂದು ಇಷ್ಟಲಿಂಗ ದೀಕ್ಷೆಯನ್ನು ಪಡೆದನೆಂಬುದು ಹುಸಿನುಸುಳು ಅಥವಾ ಸುಳ್ಳು ಸೃಷ್ಟಿಯಾಗಿದೆ. ವಸ್ತುಸ್ಥಿತಿ ಹೀಗಿರುವಾಗ ಇನ್ನು ದೀಕ್ಷಾ ವಿಧಿಯ ವಚನಗಳು ಮತ್ತು ಇಂಥ ವಚನಗಳನ್ನು ಆಧರಿಸಿದ ವ್ಯಾಖ್ಯಾನ- ವಿಮರ್ಶೆ -ಸಂಶೋಧನೆಗಳಿಗೆ ಏನು ಹೇಳಬೇಕು? ಅಯೋಧ್ಯೆಯ ರಾಮ ಜನ್ಮಭೂಮಿ ಮತ್ತು ಸಿದ್ಧರಾಮನ ಇಷ್ಟಲಿಂಗ ದೀಕ್ಷೆ ಇವೆರಡು ಯಾರ ಪಾಲಿಗೆ 'ಐತಿಹಾಸಿಕ ಘಟನೆ' – ಎಂಬುದನ್ನು ಅರ್ಥ ಮಾಡಿಕೊಂಡರೆ ನಿಜದುದಯವಾಗುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡೇ ರಾಘವಾಂಕನ 'ಸಿದ್ಧರಾಮಚರಿತೆ'ಯನ್ನು ವಿಮರ್ಶಿಸುತ್ತಾ ನಾನು ಹೇಳಿರುವ ಮಾತುಗಳಿವು :

''...ಸೊನ್ನಲಿಗೆಯಲ್ಲಿ ನೆಲಸುವ ಸಿದ್ಧರಾಮನು ಇಷ್ಟಲಿಂಗ ಅಥವಾ ಸ್ಥಾವರಲಿಂಗದ ಗೊಡವೆಗೆ ಹೋಗದೆ ವನ್ಯಪರಿಸರದಲ್ಲಿ ಮಂದಾರವೃಕ್ಷದ ಅಡಿಯಲ್ಲಿ ಗುಡುಗು ಸಿಡಿಲು ಮಳೆಯ ವಾತಾವರಣದಲ್ಲಿ ತಂತಾನೆ ಕಾಣಿಸಿಕೊಳ್ಳುವ ನಿಸರ್ಗಲಿಂಗದ ಪ್ರಸಂಗದಲ್ಲಿ ವಚನಕಾರರು ನಿರಾಕರಿಸಿದಂತೆಯೇ ಉಳಿಮುಟ್ಟದ ಲಿಂಗದ ನಿರಾಕರಣೆಯಿರುವುದನ್ನು ಗ್ರಹಿಸಬೇಕಾಗಿದೆ. 'ಸಿದ್ಧರಾಮ ಚಾರಿತ್ರ'ದಲ್ಲಿ ಶೈವಪುರೋಹಿತಶಾಹಿಯ ಸ್ಥಾವರಲಿಂಗದ ಪೂಜೆಯಾಗಲಿ ಅಥವಾ ವೀರಶೈವ ಪುರೋಹಿತಶಾಹಿಯ ಇಷ್ಟಲಿಂಗದ ಪೂಜೆಯಾಗಲಿ ಕಂಡುಬರುವುದಿಲ್ಲವೆಂಬುದನ್ನು ಗಮನಿಸಬೇಕು. ಹೀಗೆ ನೈಸರ್ಗಿಕವಾಗಿ ದೊರೆತ ಮಂದಾರ ಲಿಂಗವನ್ನು ಶಿವನ ಸೂಚನೆಯಂತೆ ವೃಷಭವೇ ಆಚಾರ್ಯನಾಗಿ ಬಾಯಲ್ಲಿ ಕಚ್ಚಿಕೊಂಡು (ಬೇಡರ ಕಣ್ಣಪ್ಪನ ಪೂಜೆಯನ್ನು ನೆನಪಿಸುವಂತೆ) ಸ್ಥಾವರಲಿಂಗದ ತಲೆಯ ಮೇಲಿಟ್ಟು ಪ್ರತಿಷ್ಠಾಪಿಸುವ ಲಿಂಗದ ಮೇಲಣ ಲಿಂಗ ಪ್ರಸಂಗವು ಕೂಡ 'ಸಿದ್ಧರಾಮಚಾರಿತ್ರ'ದ ವಿಶಿಷ್ಟ ಕಾಣ್ಕೆಯ ಹೆಗ್ಗುರುತಾಗಿದೆ...'' (ಹರಿಶ್ಚಂದ್ರ ಚಾರಿತ್ರ ಸಾಂಸ್ಕೃತಿಕ ಮುಖಾಮುಖಿ : ಕ.ವಿ.ವಿ. ಹಂಪಿ, ೨೦೦೬)

ಸಿದ್ಧರಾಮನಿಗೆ ಕೊಟ್ಟ ಇಷ್ಟಲಿಂಗ ದೀಕ್ಷೆಯನ್ನು ಐತಿಹಾಸಿಕ ಘಟನೆಯೆಂದು ಹೇಳುತ್ತಾ ಬಂದಿರುವ ವಿದ್ವಾಂಸರು 'ಕಪಿಲಸಿದ್ಧ ಮಲ್ಲಿಕಾರ್ಜುನ' ಎಂಬುದು ಪೂರ್ವಾಶ್ರಮದ ಅಂಕಿತವೆಂದೂ 'ಯೋಗಿನಾಥ' ಎಂಬುದು ದೀಕ್ಷಾವಿಧಿಯ ನಂತರದ ಉತ್ತರೋತ್ತರ ಅಂಕಿತವೆಂದೂ ಪ್ರತಿಪಾದಿಸುತ್ತಾ ಬಂದಿದ್ದಾರೆ. ಇಷ್ಟಲಿಂಗ ದೀಕ್ಷೆಯ ಇಡೀ ಪ್ರಸಂಗವನ್ನೆ ಹುಸಿನುಸುಳೆಂದು ಹೇಳುತ್ತಾ ಬಂದಿರುವ ಡಾ॥ ಎಲ್. ಬಸವರಾಜು ಅವರು ತಮ್ಮ ಹೊಸ ಗ್ರಂಥದ ಪೀಠಿಕೆಯಲ್ಲಿ ಈ ಕುರಿತು ಸ್ಪಷ್ಟನೆಯನ್ನೂ ನೀಡಿದ್ದಾರೆ :

...''ಸಿದ್ಧರಾಮ ಶಿವಯೋಗಿಯು ಯಾವ ರೀತಿಯಲ್ಲೂ ಬಸವಣ್ಣನವರ ಸಂಪರ್ಕವನ್ನು ಇಟ್ಟುಕೊಂಡವನಲ್ಲವಾಗಿ ಬಸವಣ್ಣನವರೊಡತನ ಮತ್ತು ಕಲ್ಯಾಣದ ಶರಣರೊಡತನ ಪ್ರಸ್ತಾಪವಿರುವ ಯಾವ ವಚನವಾಗಲಿ ಅವನದಲ್ಲ ಮತ್ತು ಯೋಗಿ ನಾಥಾಂಕಿತವಿರುವ ಯಾವ ರಚನೆಯಾಗಲಿ ಆ ಸಿದ್ಧರಾಮಶಿವಯೋಗಿಯದಲ್ಲವೆಂಬುದೇ ನನ್ನ ಈ ಪೀಠಿಕೆಯ ಮುಖ್ಯೋದ್ದೇಶ. ಅಥವಾ ಪ್ರಮೇಯ...'' (ಡಾ॥ ಎಲ್. ಬಸವರಾಜು: ಸೊನ್ನಲಾಪುರದ ಸಂತ ಸಿದ್ಧರಾಮನ ನಿಜವಚನಗಳು, ಪುಟ ix, ೨೦೦೭).

ಡಾ॥ ಎಲ್. ಬಸವರಾಜು ಅವರಂತೆಯೇ ಶ್ರೀ ಪಿ. ಎಂ. ಗಿರಿರಾಜು ಎಂಬುವರು ಯೋಗಿನಾಥಾಂಕಿತವಿರುವ ರಚನೆಗಳು ಸಿದ್ಧರಾಮ ಶಿವಯೋಗಿಯದಲ್ಲವೆಂದು ಹೇಳಿದ್ದಾರೆ. ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ವಿಭಾಗದ ೭೫೭ನೇ ನಂಬರಿನ ಪ್ರತಿ ಮತ್ತು ೭೬೦ನೇ ನಂಬರಿನ ಪ್ರತಿಗಳು ಕಾಲ ನಮೂದಿತವಲ್ಲದ ಕಾಗದದ ಪ್ರತಿಗಳಾದ್ದರಿಂದ ಇವು ನಂಬಿಕೆಗೆ ಅರ್ಹವಲ್ಲವೆಂದೂ, ಇವುಗಳಲ್ಲಿರುವ ೮೪೮ ಖೋಟಾ ವಚನಗಳು ಸಿದ್ಧರಾಮಕೃತವಲ್ಲವೆಂದೂ ಶ್ರೀ ಪಿ. ಎಂ. ಗಿರಿರಾಜು ಅಭಿಪ್ರಾಯಪಟ್ಟಿದ್ದಾರೆ. (=ಸಮಗ್ರ ವಚನ ಸಂಪುಟ-೪ ಸಂ. ಡಾ॥ ಎಸ್. ವಿದ್ಯಾಶಂಕರ, ದ್ವಿತೀಯ ಪರಿಷ್ಕೃತ ಮುದ್ರಣ, ಪುಟ XLVIII, ೨೦೦೧) ಆದರೆ, ಇಷ್ಟಲಿಂಗ ದೀಕ್ಷೆಯೆಂಬ ಹುಸಿನುಸುಳನ್ನು ಐತಿಹಾಸಿಕ ಘಟನೆಯೆಂದು ಪರಿಗಣಿಸಿರುವ ವಿದ್ವಾಂಸರ ಮಂಡಳಿಯೇ ಸಮಗ್ರ ವಚನ ಸಂಪುಟಗಳ ಸಂಪಾದಕರಾಗಿರುವುದರಿಂದ ಮತ್ತು ಈ ಸಂಪುಟಗಳು ೧೯೯೩ ಮತ್ತು ೨೦೦೧ರಲ್ಲಿ ಎರಡು ಸರ್ತಿ ಮುದ್ರಣಗೊಂಡಿರುವುದರಿಂದ ಸುಳ್ಳು ಸೃಷ್ಟಿಗಳು ಅಥವಾ ಹುಸಿನುಸುಳುಗಳ ವ್ಯಾಪಕ ಪ್ರಸಾರವನ್ನು ಕರ್ನಾಟಕ ಸರ್ಕಾರದ ಕೃಪೆಯಿಂದಲೇ ನಡೆಸಿದಂತಾಗಿದೆ. ಇದೆಲ್ಲವನ್ನು ಪರಿಭಾವಿಸುತ್ತಿದ್ದರೆ, ಹಿಟ್ಲರ್‌ನ ಪ್ರಚಾರಮಂತ್ರಿ ಗೊಬೆಲ್ಸ್ ಹೇಳಿರುವಂತೆ ''ಒಂದು ಸುಳ್ಳನ್ನು ನೂರುಸರ್ತಿ ಹೇಳುತ್ತಿರು, ಅದು ನಿಜವಾಗಿ ಪರಿಣಮಿಸುವುದು'' ಎಂಬ ಮಾತು ನೆನಪಾಗುತ್ತದೆ.

ಈ ಹುಸಿನುಸುಳು ಅಥವಾ ಸುಳ್ಳು ಸೃಷ್ಟಿಗಳನ್ನು ಆರಂಭದಿಂದಲೂ ಬಯಲಿಗೆಳೆಯುತ್ತಾ ಬಂದಿರುವ ಡಾ॥ ಎಲ್. ಬಸವರಾಜು ಅವರ ಸತ್ಯಶುದ್ಧಕಾಯಕವನ್ನು ನೆನೆಯುತ್ತಿದ್ದರೆ, ಅಲ್ಲಮನ ವಚನದ ನೆನಪಾಗುತ್ತದೆ:

ಅಪರಿಮಿತದ ಕತ್ತಲೆಯೊಳಗೆ
ವಿಪರೀತದ ಬೆಳಕನಿಕ್ಕಿದವರಾರೊ ?
ಬೆಳಕೂ ಅದೆ ಕತ್ತಲೆಯೂ ಅದೆ
ಒಂದಕ್ಕೊಂದಂಜದು ಇದೇನು ಚೋದ್ಯವೊ ?
ಆನೆಯೂ ಸಿಂಹವೂ ಒಂದಾಗಿ ಎಂಬುವುದ
ಕಂಡು ಬೆರಗಾದೆನು ಕಾಣಾ ಗುಹೇಶ್ವರ.

## ಹಾಯ್ಕುಗಳು

ಬೇಲಿಗಳ ಒಳಗೆ
ಕುಳಿತಿರುವ ನನಗೆ
ವಿಶಾಲ ಆಕಾಶ
ಕಾಣಿಸುತ್ತಿದೆ !

* * *

ಆ ಹಸಿರು ಬೆಟ್ಟದ
ಮೇಲೆ ಜನ
ನಡೆದು ನಡೆದು
ಹಾದಿಯಾಗಿದೆ !

* * *

ಎಷ್ಟೋ ವರುಷಗಳಿಂದ
ದಡದ ಮೇಲೆ ನಿಂತು
ಹರಿವ ಹೊಳೆಯನು
ನೋಡುತಿದ್ದೇನೆ !

* * *

ಹಿಡಿದ ಕೊಡೆ
ಹಾರಿಹೋದ ಮೇಲೆ
ಹಿತವಾಗಿ ನಾನು
ಮಳೆಯಲ್ಲಿ ನೆನೆದೆ !

ಗಣೇಶ ಹೊಸ್ಮನೆ
ಜಾನ್ಮನೆ - ೫೮೧ ೩೧೫. ಶಿರಸಿ. ಉತ್ತರ ಕನ್ನಡ ಜಿಲ್ಲೆ

ಇಷ್ಟಲಿಂಗದೀಕ್ಷೆಯೆಂಬ ಹುಸಿನುಸುಳು ಅಪರಿಮಿತದ ಕತ್ತಲೆಯಾದರೆ, ಇದರ ನಿರಾಕರಣವೇ ವಿಪರೀತದ ಬೆಳಗು, ನಮಗಿಂದು ಲಭ್ಯವಿರುವ ವಚನಸಾಹಿತ್ಯದಲ್ಲಿ ಬೆಳಕೂ ಅದೆ ಕತ್ತಲೆಯೂ ಅದೆ. ಹುಸಿನುಸುಳು ಮತ್ತು ನಿಜದುದಯಗಳು ಒಂದಕ್ಕೊಂದು ಅಂಜುವುದಿಲ್ಲ. ಇದೇನು ಸೋಜಿಗವೊ ? ಆನೆಯೂ (=ಮದಗಜ) ಸಿಂಹವೂ (= ವೀರಕೇಸರಿ) ಒಂದಾಗಿ ವಚನಸಾಹಿತ್ಯವನ್ನು ಉಂಬುತ್ತಿವೆ. ಇದನ್ನು ಕಂಡು ಬೆರಗಾಗದವರು ಯಾರು ?

ಸಿದ್ಧರಾಮ ಶಿವಯೋಗಿಯ ಹೆಸರಿನಲ್ಲಿ ಸೃಷ್ಟಿಯಾಗಿರುವ ಹುಸಿನುಸುಳು ಅಥವಾ ಅಪರಿಮಿತದ ಕತ್ತಲೆಯನ್ನು ಗಮನಿಸಿಯೇ ಡಾ|| ಎಲ್. ಬಸವರಾಜು ಅವರು 'ನಿಜ ವಚನಗಳು'– ಎಂಬ ನುಡಿಯನ್ನು ಬಳಸಿದ್ದಾರೆ. ಅನ್ನದ ಹದವನ್ನು ಒಂದು ಅಗುಳಿನಿಂದ ಪರೀಕ್ಷೆ ಮಾಡುವಂತೆ, ಡಾ|| ಎಲ್. ಬಸವರಾಜು ಅವರ ವ್ಯಾಖ್ಯಾನ ಸಹಿತವಾದ ನಿಜವಚನಗಳ ರಾಶಿಯಿಂದ ಒಂದೇ ಒಂದು ನಿದರ್ಶನವನ್ನು ಕೊಡಲಿಚ್ಛಿಸುತ್ತೇನೆ. ವೈದಿಕ ಪುರೋಹಿತಶಾಹಿಯಲ್ಲಿ ಫೋರ್‌ಇನ್ ಒನ್ ದೇವರ ಕಲ್ಪನೆಯಿರುವುದು ನಿಮಗೆಲ್ಲ ತಿಳಿದಿದೆ : ಪಾದಗಳಿಂದ ಶೂದ್ರರು, ಉದರದಿಂದ ವೈಶ್ಯರು, ತೋಳುಗಳಿಂದ ಕ್ಷತ್ರಿಯರು, ಮುಖದಿಂದ ಬ್ರಾಹ್ಮಣರು ಜನಿಸಿದ ಕತೆಯನ್ನೆ ನಾನಿಲ್ಲಿ 'ಫೋರ್‌ಇನ್ ಒನ್ ದೇವರು' ಎಂದು ಕರೆದಿದ್ದೇನೆ. ಸಿದ್ಧರಾಮನಿಗೆ ಇಷ್ಟಲಿಂಗ ದೀಕ್ಷೆಯನ್ನು ಕೊಟ್ಟವರು ಮುಂದುವರೆದು ಸಿದ್ಧರಾಮನನ್ನು 'ಫೋರ್ ಇನ್ ಒನ್' ಚೇತನದಂತೆ ನಿರೂಪಿಸಿದ್ದಾರೆ:

ಎನ್ನ ಪಾದವಿಡಿದು ಮಧ್ಯತನಕ ಪ್ರಭುವು ನೋಡಾ
ಮಧ್ಯವಿಡಿದು ಹೃದಯ ಪರಿಯಂತರ ಬಸವಣ್ಣ ನೋಡಾ
ಹೃದಯವಿಡಿದು ಕಂಠ ಪರಿಯಂತರ ಮಡಿವಾಳ ನೋಡಾ
ಕಂಠವಿಡಿದು ಕೇಶಾಂತ ತನಕ ಚೆನ್ನಬಸವಣ್ಣ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನ (ಹಿ.೮೯೬ ಕಷ೧೬೭೭).

ಈ ಖೋಟಾ ವಚನಕ್ಕೆ ಡಾ|| ಎಲ್. ಬಸವರಾಜು ಕೊಟ್ಟಿರುವ ವ್ಯಾಖ್ಯಾನವನ್ನು ಅವರ ನುಡಿಗಳಲ್ಲೆ ಕೇಳೋಣ:

...''ಇಂಥ ಅಸಹ್ಯ ವಚನಗಳನ್ನು ಪ್ರಕ್ಷೇಪಮಾಡಿದವರು ಯಾವುದೇ ಮತಧರ್ಮಕ್ಕೆ ಕಳಂಕಪ್ರಾಯರು ! ಪ್ರಭುದೇವರನ್ನು ಕಾಲಲ್ಲಿ ತುಳಿದು, ಬಸವಣ್ಣನವರನ್ನು ಎದೆಯಲ್ಲಿ ದಬ್ಬಿಕೊಂಡು, ಮಾಚಯ್ಯನ ಕಡೆ ಕೊರಳು ಕೊಂಕಿಸಿ, ಚನ್ನಬಸವಣ್ಣನವರನ್ನು ತಲೆಯ ಮೇಲೆ ಕುಳ್ಳಿರಿಸಿಕೊಳ್ಳುವ ಪ್ರಮೇಯವೇನು ? ವೀರಶೈವಧರ್ಮ ಈ ಚನ್ನಬಸವಣ್ಣನವರಿಗಿಂತ ಬಹಳ ಹಳೆಯದು.'' (ಅದೇ, ಪುಟ xxii)

ಸಾಂಪ್ರದಾಯಿಕವಾಗಿರುವ ಟೀಕು, ವ್ಯಾಖ್ಯಾನಗಳಿಗಿಂತ ಮಿಗಿಲಾದ ಡಾ|| ಎಲ್. ಬಸವರಾಜು ಅವರ ವ್ಯಾಖ್ಯಾನಗಳನ್ನು ನಿರಂಕುಶಮತಿಯ ಟೀಕು ಅಥವಾ ವ್ಯಾಖ್ಯಾನಗಳೆಂದು ಕರೆಯಬೇಕಾಗಿದೆ. ಜಾತಿ, ಮತ, ಪಂಥಗಳೆಂಬ ಬಗೆಬಗೆಯ ಅಂಕುಶಗಳಿಗೆ ಅಧೀನವಾಗಿ ಮತಿಹೀನವಾಗಿರುವ ವಚನಸಾಹಿತ್ಯದ ವಿಪುಲ ವಿಮರ್ಶೆ ಮತ್ತು ಸಂಶೋಧನೆಗಳೆಂಬ ಕಸದ ರಾಶಿಯನ್ನು ಚೆನ್ನಾಗಿ ಗುಡಿಸಿಹಾಕುತ್ತಿರುವ ಜಲಗಾರನೆಂದು ಬಸವರಾಜು ಅವರನ್ನು ಕರೆಯಬಹುದು. ಮತೀಯ ನರಕದಲ್ಲಿ ಬಿದ್ದು ಸದ್ಗತಿಯಿಲ್ಲದೆ ನರಳುತ್ತಿದ್ದ ಟೀಕು, ವ್ಯಾಖ್ಯಾನಗಳಿಗೆ ಡಾ|| ಎಲ್. ಬಸವರಾಜು ಕುವೆಂಪು ಪರಂಪರೆಯ ವೈಚಾರಿಕ ದೀಕ್ಷೆಯಿತ್ತು ಟೀಕು, ವ್ಯಾಖ್ಯಾನಗಳು ಇಪ್ಪತ್ತೊಂದನೆ ಶತಮಾನದಲ್ಲಿ ಹೇಗಿರಬೇಕೆಂಬ ಮುಂಗಾಣ್ಕೆಯನ್ನೆ ನೀಡಿದ್ದಾರೆ. ಕುವೆಂಪು ಪರಂಪರೆ ಎಂದರೆ ಕುವೆಂಪು ನಿರ್ಮಿಸಿದ ಪರಂಪರೆ ಎಂಬ ಸಂಕುಚಿತ ಅರ್ಥದಲ್ಲಿ ಗ್ರಹಿಸದೆ, ಬಸವಣ್ಣ ವಿವೇಕಾನಂದ ಗಾಂಧಿ-ನಾರಾಯಣಗುರು-ಲೋಹಿಯಾ ಮುಂತಾದವರನ್ನು ಒಳಗೊಂಡಿರುವುದೇ 'ಕುವೆಂಪು ಪರಂಪರೆ' ಎಂಬ ವಿಶಾಲ ಮನೋದರ್ಮವನ್ನು ಹೊಂದಿರಬೇಕು.

ರಾಘವಾಂಕನ 'ಸಿದ್ಧರಾಮಚರಿತೆ'ಯಲ್ಲಿ ಪುರಾಣೀಕರಣಕ್ಕೂ, ಶೂನ್ಯಸಂಪಾದನೆಗಳಲ್ಲಿ ವೀರಶೈವೀಕರಣಕ್ಕೂ ಒಳಗಾಗಿರುವ ಸಿದ್ಧರಾಮನ ಜೀವನವೃತ್ತಾಂತವನ್ನು ಡಾ|| ಎಲ್. ಬಸವರಾಜು ಅವರು ನಿಜದುದಯಕ್ಕೆ ಒಳಪಡಿಸಿರುವ ಬಗೆ ಹೃದ್ಯವಾಗಿದೆ. ಮುಗ್ಧ ಬಾಲಕ ಸಿದ್ಧರಾಮನಿಗೆ ನವಣೆಯ ಹೊಲದಲ್ಲಿ ಸಿಕ್ಕ ಕಪಿಲಸಿದ್ಧನೆಂಬ ಯೋಗಿಯೇ ಮುಂದೆ ಬಾಲಕ ಸಿದ್ಧರಾಮನನ್ನು ಶ್ರೀಶೈಲಕ್ಕೆ ಕರೆಸಿಕೊಳ್ಳುವ ಮಲ್ಲಿನಾಥ ಅಥವಾ ಮಲ್ಲಯ್ಯನೆಂದು ಹೇಳುತ್ತಾ ಈ ಮಾನವ ಗುರುವಿನ ಮಾರ್ಗದರ್ಶನದಲ್ಲಿ ಶಿವಯೋಗಿಯಾಗುವ ಸಿದ್ಧರಾಮನು ಗುರುಮಲ್ಲಯ್ಯನ ಪ್ರೇರಣೆಯಂತೆ ಸೊನ್ನಲಾಪುರದಲ್ಲಿ ನೆಲಸಿ, ಅದನ್ನೊಂದು ಅಭಿನವ ಶ್ರೀ ಶೈಲವನ್ನಾಗಿ ಮಾರ್ಪಡಿಸಿದನೆಂಬ ನಿರೂಪಣೆಯುಳ್ಳ ವ್ಯಾಖ್ಯಾನಗಳಿಗೆ ನೋಡಿರಿ : ಪುಟ ಸಂಖ್ಯೆ ೭೭-೭೮, ೮೦-೮೨, ೮೫-೮೬, ೧೦೭, ೧೪೮- ೧೫೦, ೨೭೨, ೨೯೭. ಶ್ರಮಗೌರವವನ್ನು ಪ್ರತಿಪಾದಿಸುವ ವ್ಯಾಖ್ಯಾನಕ್ಕೆ: ೨೯೦, ತೀರ್ಥಯಾತ್ರೆಯ ಆಂತರ್ಯದಲ್ಲಿರುವುದು ಮನೋಯಾತ್ರೆಯೆಂಬ ಪ್ರತಿಪಾದನೆಗೆ: ೨೯೯, ಅನ್ನ ದೇವರು ಮತ್ತು ಕಾಯಕಧರ್ಮದ ವ್ಯಾಖ್ಯಾನಕ್ಕೆ: ೧೮೫, ಪಂಪಕವಿಯ ಸುವಿಚಾರದೊಡನೆ ತೌಲನಿಕ ವಿವೇಚನೆಗೆ: ೧೫೬, ಡಂಬಾಚಾರ ಮತ್ತು ಅಹಂಕಾರಗಳು ಪಶು ಸಮಾನವೆಂಬ ಸಚಿತ್ರ ವ್ಯಾಖ್ಯಾನಕ್ಕೆ : ೧೩೯. ಈ ಗ್ರಂಥದಲ್ಲಿ ಡಾ|| ಎಲ್. ಬಸವರಾಜು ಅವರು ಮುನ್ನೂರಕ್ಕೂ ಮಿಗಿಲಾದ ಸಿದ್ಧರಾಮನ ವಚನಗಳಿಗೆ ಕೊಟ್ಟಿರುವ ನಿರಂಕುಶ ಮತಿಯ ಟೀಕು ಅಥವಾ ವ್ಯಾಖ್ಯಾನಗಳನ್ನು ಸಹೃದಯರು ಸ್ವತಃ ಓದಿ ಸವಿಯಬೇಕು. ನಾನಿಲ್ಲಿ ನಿದರ್ಶನಕ್ಕಾಗಿ ಕೆಲವನ್ನು ಮಾತ್ರ ಆಯ್ದು, ಸಂಖ್ಯಾ ಮಾತ್ರದಲ್ಲಿ ಸೂಚಿಸಿರುವುದು ಪುಟಮಿತಿ ಮತ್ತು ಪುನರುಕ್ತಿಯ ಭೀತಿಯಿಂದ ಎಂಬುದನ್ನು ಪರಿಭಾವಿಸಬೇಕಾಗಿ ಕೋರುತ್ತೇನೆ.

(ಕೋಲಾರದ ತೇರುಹಳ್ಳಿ ಬೆಟ್ಟದಲ್ಲಿರುವ ಶಿವಗಂಗೆ ಗ್ರಾಮದ 'ಆದಿಮ'ದ ಬಯಲು ರಂಗಮಂದಿರದಲ್ಲಿ ೨೧-೨-೨೦೦೮ರಂದು ಮಾಡಿದ ಭಾಷಣವನ್ನು ಆಧರಿಸಿದ ಲೇಖನವಿದು.)

**ವಿ. ಚಂದ್ರಶೇಖರ ನಂಗಲಿ**
೧೬, 'ಶ್ರೀಗೌರಿ', ಕನಕನಗರ, ಎರಡನೇ ಕ್ರಾಸ್
ಹೊಸಕೋಟೆ - ೫೬೨ ೧೧೪

# ಕಾಡಜನರ ನೆರವಿಗೆ ಈ ಕಾಯ್ದೆಯೇ ?

ಕಲ್ಕುಳಿ ವಿಠ್ಠಲ ಹೆಗ್ಡೆ

ಗಿರಿಜನರು ಮತ್ತು ಸಾಂಪ್ರದಾಯಿಕ ಅರಣ್ಯ ನಿವಾಸಿಗಳ ಹಕ್ಕು ಗುರುತಿಸುವ ೨೦೦೬ರ 'ಪರಿಶಿಷ್ಟ ಬುಡಕಟ್ಟು ಮತ್ತು ಇನ್ನಿತರ ಪರಂಪರಾಗತ ಅರಣ್ಯ ನಿವಾಸಿಗಳ (ಅರಣ್ಯ ಹಕ್ಕುಗಳ ಮಾನ್ಯತೆ) ಕಾಯ್ದೆ' ಜಾರಿಗೆ ಬಂದಿದೆ. ಸಾಕಷ್ಟು ಚರ್ಚೆ, ಮಾಹಿತಿ ಸಂಗ್ರಹದ ನಂತರ ಜಾರಿಗೆ ಬರಬೇಕಾಗಿದ್ದ ಈ ಕಾಯ್ದೆಯನ್ನೂ ಸರ್ಕಾರ ಬೇರೆಲ್ಲ ಕಾಯ್ದೆಯಂತೆ ಸದ್ದಿಲ್ಲದೆ ಜಾರಿಗೆ ತಂದಿದೆ.

ಇದೇ ಜನವರಿಯಲ್ಲಿ ಈ ಕಾಯ್ದೆ ಗೆಜೆಟ್‌ನಲ್ಲಿ ಪ್ರಕಟಗೊಂಡಿದೆ. ಆಕ್ಷೇಪಣೆ ಸಲ್ಲಿಸಲು ೪೫ ದಿನಗಳ ಅವಕಾಶ ನೀಡಲಾಗಿದೆಯಾದರೂ ಈ ಬಗ್ಗೆ ಗಿರಿಜನರಿಗೆ ಮತ್ತು ಅವರ ಪರವಾಗಿ ಕೆಲಸ ಮಾಡುತ್ತಿರುವವರಿಗೆ ಮಾಹಿತಿ ನೀಡಲಾಗಿಲ್ಲ. ಕೆಲ ಗಂಭೀರ ವಿಷಯಗಳನ್ನೊಳಗೊಂಡ ಈ ಕಾಯ್ದೆ ಮೇಲ್ನೋಟಕ್ಕೆ ಅತ್ಯಂತ ಜನಪರ ಮತ್ತು ಪರಿಸರಕ್ಕೆ ಪೂರಕವಾಗಿದೆ ಎನಿಸಿದರೂ ಒಳಗೆಲ್ಲ ಹುಳುಕುಗಳಿವೆ.

ಪರಿಸರವನ್ನು ಮನುಷ್ಯರಿಂದ ಪ್ರತ್ಯೇಕವಾಗಿಸಿ, ಅದೊಂದೇ ಅಮೂಲ್ಯವಸ್ತು ಎಂಬಂತೆ ನೋಡುವ ವಿದೇಶಿ ಪರಿಸರ ಸಂಸ್ಥೆಗಳ ಕೃಪಾಪೋಷಿತ ಪರಿಸರವಾದಿಗಳು ಈ ಕಾಯ್ದೆಯನ್ನು ಪರಿಸರ ವಿರೋಧಿ ಎಂದು ಬಿಂಬಿಸುತ್ತಿದ್ದಾರೆ. ಶತಶತಮಾನಗಳಿಂದ ಅರಣ್ಯದೊಂದಿಗೆ ಬೆರೆತು ಬದುಕುತ್ತಿರುವ ಮನುಷ್ಯರನ್ನು ಅದೇ ರೀತಿಯಲ್ಲಿ ಬದುಕಲು ಅವಕಾಶ ನೀಡಿರುವುದೇ ಈ ಕಾಯ್ದೆಯ ಹೆಗ್ಗಳಿಕೆ. ಇದೇ ಈಗ ವಿದೇಶಿ ಪರಿಸರವಾದಿಗಳಿಗೆ ನುಂಗಲಾರದ ತುತ್ತಾಗಿದೆ.

ಅದೇನೇ ಇರಲಿ, ಮನುಷ್ಯನನ್ನು, ಅದರಲ್ಲಿಯೂ ಕಾಡಿನ ನಡುವೆ ಬದುಕುವ ಗಿರಿಜನರನ್ನು ಪರಿಸರದ ಪರಮ ಶತ್ರುಗಳು ಎಂಬಂತೆ ನೋಡುತ್ತಾ ಬಂದಿದ್ದ ಸರ್ಕಾರ ಈಗ ಇದ್ದಕ್ಕಿದ್ದ ಹಾಗೆ ಅವರನ್ನು ಕಾಡಿನಲ್ಲಿಯೇ ಉಳಿಸುವ ತೀರ್ಮಾನ ತೆಗೆದುಕೊಂಡಿದ್ದೇಕೆ ಎಂಬುದು ಕೂಡ ಮಹತ್ವದ ವಿಷಯವೇ.

**ಒಂದಿಷ್ಟು ಹಿನ್ನಲೆ**

ಇಂದು ನಮ್ಮಲ್ಲಿ ಒಂದಿಷ್ಟು ಕಾಡು ಉಳಿದಿದೆ ಎಂದಾದರೆ ಅದಕ್ಕೆ ಗಿರಿಜನರು ಮತ್ತು ಸಾಂಪ್ರದಾಯಿಕ ಅರಣ್ಯ ನಿವಾಸಿಗಳೇ ಕಾರಣ. ಈ ಬಗ್ಗೆ ಅನುಮಾನವೇ ಬೇಡ. ಎಲ್ಲೆಲ್ಲಿ ಗಿರಿಜನರನ್ನು ಹಾಗೂ ಕಾಡನ್ನೇ ನಂಬಿ ಬದುಕುವವರನ್ನು ಕಾಡು ರಕ್ಷಣೆಯ ನೆಪದಲ್ಲಿ ಬೀದಿಪಾಲು ಮಾಡಲಾಗಿದೆಯೋ ಅಲ್ಲೆಲ್ಲಾ, ಕಾಡು ನಾಶವಾಗುತ್ತಿದೆ, ವನ್ಯಸಂಪತ್ತು ಅಳಿವಿನಂಚಿಗೆ ಬಂದಿದೆ. ನಮ್ಮ ಕುದುರೆಮುಖ ಪರ್ವತ ಶ್ರೇಣಿಗಳಲ್ಲಿ ಕಾಡು ಉಳಿದಿರುವುದಕ್ಕೆ ಈ ಭಾಗದಲ್ಲಿ ವಾಸವಾಗಿರುವ 'ಗೌಡ್ಲು' ಎಂಬ ಗಿರಿಜನರೇ ಕಾರಣ. ಏಕೆಂದರೆ ಅವರು 'ಕಾನುದೈವ' ಎಂದು ಕಾಡನ್ನು ಪೂಜಿಸಿಕೊಂಡು ಬಂದವರು. ಬ್ರಿಟಿಷರಂತೆ ಎಸ್ಟೇಟ್‌ಗಳನ್ನು ಮಾಡಿ, ಕಾಫಿ-ಟೀ ಬೆಳೆದವರಲ್ಲ.

ನಮ್ಮ ದೇಶದ ಅರಣ್ಯ ಸಂಪತ್ತನ್ನು ಲೂಟಿ ಮಾಡಿದ್ದು ಹಾಗೂ ಅರಣ್ಯ ಮತ್ತು ಮನುಷ್ಯರ ನಡುವಿನ ಸಂಬಂಧ ಹಾಳುಮಾಡಿದ್ದು ಬ್ರಿಟಿಷರು. 'ಎಸ್ಟೇಟ್ ಸಂಸ್ಕೃತಿ' ಪರಿಚಯಿಸಿ ಲಕ್ಷಾಂತರ ಹೆಕ್ಟೇರ್ ಕಾಡು ನಾಶಮಾಡಿದರು. ಇದ್ದಬದ್ದಲ್ಲಿ ತಮಗೆ ಬೇಕಾದ ಕಾಫಿ, ಟೀ, ಏಲಕ್ಕಿ ಹಾಗೂ ರಬ್ಬರ್ ಬೆಳೆದರು. ಮರಮಟ್ಟುಗಳಿಗಾಗಿ ಬೆಲೆಕಟ್ಟಲಾಗದ ಮರಗಳನ್ನು ಕಡಿದು ಸಾಗಿಸಿದರು. ತಮ್ಮ ಮೋಜಿನ ಶಿಕಾರಿಗೆ ಜಾಗವಿಲ್ಲವಾಗುತ್ತದೆ ಎಂದು ಕೆಲ ಅರಣ್ಯ ಪ್ರದೇಶವನ್ನು ಮೀಸಲಾಗಿಸಿಟ್ಟಿದ್ದರು.

ಸ್ವಾತಂತ್ರ್ಯಾನಂತರ ಬಂದ ಸರ್ಕಾರ ಕೂಡ ಅರಣ್ಯರ ಬಗ್ಗೆ ಇದೇ ಧೋರಣೆ ಮುಂದುವರೆಸಿತು. ಕಾಡು ಕಡಿಯಲೆಂದೇ ಬ್ರಿಟಿಷರು ರಚಿಸಿದ್ದ ಅರಣ್ಯ ಇಲಾಖೆಯನ್ನು ಅದೇ ಉದ್ದೇಶಕ್ಕಾಗಿ ಮುಂದುವರೆಸಿತು. ಜೊತೆಗೆ ಅಣೆಕಟ್ಟು, ಗಣಿಗಾರಿಕೆ, ರೈಲ್ವೇ ಸ್ಲೀಪರ್ ಹೀಗೆ ಸಿಕ್ಕ ಸಿಕ್ಕ ಕಾರಣಕ್ಕೆಲ್ಲಾ ಅರಣ್ಯ ಲೂಟಿ ಮಾಡಿತು. ಇದರಿಂದ ಅರಣ್ಯನಿವಾಸಿಗಳ ಬದುಕು ದುಸ್ತರವಾದುದನ್ನು ಯಾರೂ ಗಮನಿಸಲೇ ಇಲ್ಲ. ಪರಿಸರ ವಿರೋಧಿ ಯೋಜನೆಗಳಿಗಾಗಿ ಲಕ್ಷಾಂತರ ಜನರನ್ನು ಸ್ಥಳಾಂತರ ಮಾಡಲಾಯಿತು.

ಈ ಕಾಯ್ದೆಯಿಂದ ಅರಣ್ಯವಾಸಿಗಳ ಸಮಸ್ಯೆಗಳನ್ನು ಸರ್ಕಾರ ಸಮಗ್ರವಾಗಿ ನೋಡಿಲ್ಲ ಎಂಬುದನ್ನು ಎತ್ತಿತೋರಿಸಿದೆ. ವಿದೇಶಿ ಪರಿಸರವಾದಿಗಳ ಮರ್ಜಿಗೆ ಒಳಗಾಗಿ ಮನುಷ್ಯನನ್ನು ಕಾಡಿನ ದ್ರೋಹಿಗಳಂತೆ ನೋಡಿಲ್ಲ ಎಂಬುದೊಂದೇ ಸಮಾಧಾನದ ವಿಷಯ.

ಇಂದು ಪ್ರಪಂಚ ಪರಿಸರ ಬಿಕ್ಕಟ್ಟನ್ನು ಎದುರಿಸುತ್ತಿದೆ. ಭೂತಾಪಮಾನ ಹೆಚ್ಚುತ್ತಿರುವುದರಿಂದ ಅರಣ್ಯ ಉಳಿಸಲೇಬೇಕಾದ ಅನಿವಾರ್ಯತೆ ಬಂದೊದಗಿದೆ. ಆದರೆ ಅಮೆರಿಕ ಮತ್ತು ಇತರ ಸಾಮ್ರಾಜ್ಯಶಾಹಿ ದೇಶಗಳು ಹೇಳುತ್ತಿರುವಂತೆ ಪಶ್ಚಿಮ ಘಟ್ಟದಲ್ಲಿ ಮತ್ತೆಲ್ಲೋ 'ಫ್ರಿಜ್‌ನಲ್ಲಿ' ಇಟ್ಟಂತೆ ಒಂದಿಷ್ಟು ಕಾಡು ಉಳಿದರೆ ಸಾಲದು. ಭೂಮಿಯ ಉದ್ದಗಲದಲ್ಲೂ ಕಾಡು ಇರಬೇಕು, ಅದರೊಂದಿಗೆ ಬೆರೆತು ಬದುಕುವ ಸಂಸ್ಕೃತಿ ನಮ್ಮದಾಗಬೇಕು. ಆ ನಿಟ್ಟಿನಲ್ಲಿ ಜನಪರವಾದ ಪರಿಸರ ಆಂದೋಲನವನ್ನು ನಾವು ಕಟ್ಟಬೇಕಾಗಿರುವುದು ಈಗಿನ ತುರ್ತು.



ಬವಣೆಗೆ ಕೊನೆ ಎಂದು ?

ಬ್ರಿಟಿಷರ ಹಾಗೂ ಅವರ ಪ್ರೇರಣೆಯಿಂದ ಸರ್ಕಾರಗಳು ನಡೆಸಿದ ಅರಣ್ಯ ಲೂಟಿಯಿಂದ ಭಾರಿ ಪ್ರಮಾಣದಲ್ಲಿ ಕಾಡು ನಾಶವಾಯಿತು. ನಮ್ಮ ದೇಶದಲ್ಲಿ ಮಾತ್ರವಲ್ಲ, ಪ್ರಪಂಚದೆಲ್ಲೆಡೆ ಇದೇ ಸ್ಥಿತಿ. ಆಗ ಎಚ್ಚೆತ್ತ ವಿದೇಶಿ 'ಪಂಡಿತ'ರಿಗೆ ಕಾಡು ಉಳಿಸುವ ಅನಿವಾರ್ಯತೆ ಅರ್ಥವಾಗತೊಡಗಿತು. ಆಗ ಅವರ ಕಣ್ಣಿಗೆ ಬಿದ್ದಿದ್ದೇ ಹೇರಳ ಪ್ರಮಾಣದಲ್ಲಿ ಮಳೆಕಾಡುಗಳನ್ನು ಹೊಂದಿರುವ ಭಾರತ ಮತ್ತು ಇದೇ ರೀತಿಯ ತೃತೀಯ ದೇಶಗಳು.

ನಂತರ ಅರಣ್ಯ ಉಳಿಸುವ ಲಾಬಿ ಆರಂಭವಾಯಿತು. ಭಾರತದಲ್ಲಿ ಮರ ಕಡಿಯಲು ಪರವಾನಿಗೆ ನೀಡುವ ಕೆಲಸ ಮಾಡಿಕೊಂಡಿದ್ದ ಅರಣ್ಯ ಇಲಾಖೆ ಇದ್ದಕ್ಕಿದ್ದ ಹಾಗೆ 'ಅರಣ್ಯ ಉಳಿಸುವ' ಇಲಾಖೆಯಾಗಿ ಮಾರ್ಪಟ್ಟಿತು. ಅರಣ್ಯ ಕಾಯ್ದೆಗಳು ಜಾರಿಗೆ ಬಂದವು. ರಾಷ್ಟ್ರೀಯ ಉದ್ಯಾನ, ಮೀಸಲು ಅರಣ್ಯ, ಅಭಯಾರಣ್ಯ, ಜೈವಿಕ ಉದ್ಯಾನ ಇತ್ಯಾದಿ ಹೆಸರುಗಳಲ್ಲಿ ಅರಣ್ಯವನ್ನು ಜನರಿಂದ ಕಬ್ಜಮಾಡಿ, ಅರಣ್ಯದೊಂದಿಗೆ ಬದುಕುವ ಪರಿಸರ ಪ್ರೇಮಿ ಜನರನ್ನು ಪರಿಸರ ವಿನಾಶಕರೆಂದು ಜರೆದು, ಕಾಡಿನೊಂದಿಗೆ ಜನರು ಬದುಕಲು ಸಾಧ್ಯವೇ ಇಲ್ಲವೆಂಬ ಪಾಶ್ಚಿಮಾತ್ಯರ ವಾದವನ್ನು ಜಾರಿಗೆ ತರಲಾಯಿತು.

ಯಾವಾಗ ಜನರು 'ನಮ್ಮ ಹಾಡ್ಯ' ಎಂದು ಕರೆಯುತ್ತಿದ್ದ ಜಾಗಗಳು ಸರ್ಕಾರಿ ಲೆಕ್ಕದ 'ಫಾರೆಸ್ಟ್'ಗಳಾದವೋ ಜನಸಮುದಾಯಕ್ಕೆ ಅವುಗಳ ಮೇಲೆ ಜವಾಬ್ದಾರಿಯೇ ಇಲ್ಲವಾಯಿತು. ನಮ್ಮ ದೇಶದಲ್ಲಿಯೇ ೪೯ ರಾಷ್ಟ್ರೀಯ ಉದ್ಯಾನ ಹಾಗೂ ೮೦ಕ್ಕೂ ಹೆಚ್ಚು ಅಭಯಾರಣ್ಯಗಳಿಗಾಗಿ ಲಕ್ಷಾಂತರ ಅರಣ್ಯವಾಸಿಗಳನ್ನು ಬಲತ್ಕಾರವಾಗಿ ಎತ್ತಂಗಡಿ ಮಾಡಲಾಗಿದೆ. ಇದು ಅನೇಕ ರೀತಿಯ ಸಾಮಾಜಿಕ ಬಿಕ್ಕಟ್ಟುಗಳಿಗೆ ಕಾರಣವಾಗಿದೆ.

ಜೈವಿಕ ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಇಲ್ಲಿರುವ ಅಂದರೆ ಮಳೆಕಾಡು ಪ್ರದೇಶದ ಜೀವ ವೈವಿಧ್ಯತೆ, ಬೇರೆ ಬೇರೆ ರೀತಿಯಲ್ಲಿ ಅಮೂಲ್ಯವೆಂಬುದು ಮನವರಿಕೆಯಾಗುತ್ತಿದ್ದಂತೆಯೇ ಈ ರಾಷ್ಟ್ರೀಯ ಉದ್ಯಾನ, ಅಭಯಾರಣ್ಯಗಳ ಮೇಲಿನ ಸಾಮ್ರಾಜ್ಯಶಾಹಿಗಳ ಪ್ರೀತಿ ಹೆಚ್ಚುತ್ತಲೇ ಹೋಯಿತು. ಅಮೆರಿಕ ಮತ್ತು ಇತರೆ ಸಾಮ್ರಾಜ್ಯಶಾಹಿಗಳ ಸಂಚನ್ನು ನಮ್ಮ ದೇಶದಲ್ಲಿ ಜಾರಿಗೆ ತರಲು ಕೆಲ ವಿದೇಶಿ ಕೃಪಾಪೋಷಿತ ಪರಿಸರ ಮತ್ತು ವನ್ಯಜೀವಿ ಸಂಘಟನೆಗಳು (ಎನ್‌ಜಿಒಗಳು) ಮತ್ತು ವ್ಯಕ್ತಿಗಳು ಹೊರಟರು. ಅವರಿಗೆ ಅಲ್ಲಿಂದ ಹಣದ ಹೊಳೆಯೇ ಹರಿದುಬಂತು. ಈ ಎನ್‌ಜಿಒಗಳು ಮತ್ತು ವ್ಯಕ್ತಿಗಳು ಸರ್ಕಾರದ ಉನ್ನತಾಧಿಕಾರಿಗಳ ಹಾಗೂ ನ್ಯಾಯಾಂಗದ ಮೇಲೆ ಪ್ರಭಾವ ಬೀರಿ, ಸಾಮ್ರಾಜ್ಯಶಾಹಿಗಳ ಆಣತಿಯಂತೆ ಕಾನೂನು ರೂಪಿಸುವಲ್ಲಿ ಯಶಸ್ವಿಯಾಗಿದ್ದಾರೆ.

೧೯೮೦ರಲ್ಲಿ ಅರಣ್ಯ ಸಂರಕ್ಷಣಾ ಕಾಯ್ದೆ ಜಾರಿಗೆ ಬಂತು. ೧೯೮೬ರಲ್ಲಿ ಅರಣ್ಯ ನೀತಿ ರೂಪಿಸಲಾಯಿತು. ಒಂದು ಹೆಕ್ಟೇರ್ ಪ್ರದೇಶದಲ್ಲಿ ೨೫ ಮರ ಅಥವಾ ಗಿಡಗಳಿದ್ದರೆ ಅದು 'ಅರಣ್ಯ' ಎಂದು ಬಾಲಿಶವಾಗಿ ವಿಶ್ಲೇಷಿಸಲಾಯಿತು.

೧೯೯೫ರಲ್ಲಿ ಗೋವರ್ಧಮಮ್ ತಿರುಮಲಪಾದ್ ಎಂಬುವವರು ಅರಣ್ಯ ರಕ್ಷಣೆಗೆ ಸುಪ್ರೀಂ ಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿಯ ಅರ್ಜಿಯೊಂದನ್ನು ದಾಖಲಿಸಿದ್ದರು. (೧೯೯೫- ನಂ.೨೦೨) ಈ ಅರ್ಜಿಯ ವಿಚಾರಣೆ ನಡೆಸಿದ ನ್ಯಾಯಾಲಯ ಅರಣ್ಯ ಪ್ರದೇಶ, ಒತ್ತುವರಿ, ಪರಿಗಣಿತ ಅರಣ್ಯ ಇತ್ಯಾದಿ ಶಬ್ದಗಳಿಗೆ ಹೊಸ ವ್ಯಾಖ್ಯಾನ ಬರೆದು, ಅರಣ್ಯದಲ್ಲಿ ಅರಣ್ಯೇತರ ಚಟುವಟಿಕೆ ನಿಷೇಧಿಸಿತು. ಜನರನ್ನು ಸಂಪೂರ್ಣವಾಗಿ ಅರಣ್ಯದಿಂದ ಹೊರ ಹಾಕುವಂತೆ ಸೂಚಿಸಿತು.

೧೯೭೮ರ ಸೆಪ್ಟೆಂಬರ್ ೨೫ಕ್ಕಿಂತ ಮೊದಲಿನಿಂದ ವಾಸವಾಗಿರುವುದಕ್ಕೆ ಅಧಿಕೃತ ದಾಖಲೆ ಹೊಂದಿರದವರು ವಾಸವಾಗಿರುವುದು ಅತಿಕ್ರಮಣ ಎನ್ನಲಾಯಿತು. ಈ ದಾಖಲೆ ಇಲ್ಲದ ಕಟ್ಟಡ, ತೋಟ ಏನೇ ಇದ್ದರೂ ಎಲ್ಲವನ್ನೂ ತೆರವುಗೊಳಿಸುವಂತೆ ಸೂಚಿಸಲಾಯಿತು. ಈ ಆದೇಶ ರಾಜ್ಯದ ಮಲೆನಾಡಿಗರ ಮೇಲೆ ಮಾತ್ರವಲ್ಲ, ದೇಶದ ಅರಣ್ಯ ನಿವಾಸಿಗಳ ಮೇಲೆ ಭರಸಿಡಿಲಿನಂತೆ ಬಂದೆರಗಿತು.



ಶೃಂಗೇರಿಯಲ್ಲಿ ಪ್ರತಿಭಟನಾ ಸಭೆ

ಕರ್ನಾಟಕದಲ್ಲಿ ೧,೧೨,೫೫೪ ಕುಟುಂಬಗಳು ಸರಿಯಾದ ದಾಖಲೆ ಹೊಂದದೆ ೯,೦೧,೨೪೫ ಹೆಕ್ಟೇರ್ ಅರಣ್ಯ ಪ್ರದೇಶದಲ್ಲಿ ಬದುಕುತ್ತಿವೆ ಎಂದು ಸರ್ಕಾರ ನ್ಯಾಯಾಲಯಕ್ಕೆ ಹೇಳಿಕೆ ನೀಡಿದೆ. ಅಂದರೆ ಇವರೆಲ್ಲ ಅತಿಕ್ರಮಣ ಮಾಡಿದ್ದಾರೆ ಎಂದು ಸರ್ಕಾರ ಪರೋಕ್ಷವಾಗಿ ಹೇಳಿತು. ಇದು ಸರ್ಕಾರದ ಹಳೆಯ ಸಮೀಕ್ಷೆ ಪ್ರಕಾರ ಸಲ್ಲಿಸಲಾದ ವರದಿ. ಈ ರೀತಿ ಅರಣ್ಯ ಭೂಮಿಯನ್ನು 'ಅತಿಕ್ರಮಣ' ಮಾಡಿದವರ ಸಂಖ್ಯೆ ಈಗ ಬಹಳ ಹೆಚ್ಚಿರಬಹುದು. ಇವರನ್ನು ತೆರವುಗೊಳಿಸುವುದಾಗಿ ನ್ಯಾಯಾಲಯಕ್ಕೆ ಸರ್ಕಾರಿ ಅಧಿಕಾರಿಗಳು ಮುಚ್ಚಳಿಕೆಯನ್ನೂ ಬರೆದುಕೊಟ್ಟಿದ್ದಾರೆ.

ಹೀಗಾಗಿಯೇ ಚಿಕ್ಕಮಗಳೂರು ಜಿಲ್ಲೆಯ ತತ್ಕೊಳ, ಸಾರಗೋಡುವಿನಲ್ಲಿ ಬಲತ್ಕಾರವಾಗಿ ಜನರನ್ನು ಒಕ್ಕಲೆಬ್ಬಿಸಲಾಯಿತು. ಅವರು ಕಟ್ಟಿಕೊಂಡಿದ್ದ ಮನೆ, ಬೆಳೆದ ಬೆಳೆಗಳನ್ನು ಅವರ ಕಣ್ಣೆದುರೇ ನಾಶ ಮಾಡಿ, ಅವರ ಬದುಕನ್ನೂ ನಾಶಮಾಡಲಾಯಿತು.

ಅರಣ್ಯ ಅತಿಕ್ರಮಣ ಮಾಡಿದವರ ವಿರುದ್ಧ ಕ್ರಮ ತೆಗೆದುಕೊಳ್ಳುವಂತೆ ನ್ಯಾಯಾಲಯ ಅರಣ್ಯ ಇಲಾಖೆಗೆ ಆದೇಶಿಸಿದೆ. ವರದಿಯನ್ನು ತನಗೇ ಸಲ್ಲಿಸುವಂತೆ ಸೂಚಿಸಿದೆ. ತಪ್ಪಿದಲ್ಲಿ ಹೆಕ್ಟೇರ್ ಒಂದಕ್ಕೆ ಸ್ಥಳೀಯ ಅರಣ್ಯ ಪಾಲಕ ನೂರು ರೂ. ದಂಡವನ್ನು ತನ್ನ ಸ್ವಂತ ಹಣದಲ್ಲಿ ಕಟ್ಟಬೇಕು. ಅಲ್ಲದೆ ರಾಜ್ಯ ಸರ್ಕಾರ ಈ ತಪ್ಪಿಗೆ ಒಂದು ಹೆಕ್ಟೇರ್‌ಗೆ ಒಂದು ಸಾವಿರ ರೂ. ದಂಡ ಕಟ್ಟಬೇಕಾಗುತ್ತದೆ. ಹೆಚ್ಚು ಕಡಿಮೆ ಕರ್ನಾಟಕ ಸರ್ಕಾರ ನೂರು ಕೋಟಿ ರೂ. ದಂಡ ಕಟ್ಟಬೇಕಾದ ಸ್ಥಿತಿಯಲ್ಲಿದೆ. ಈ ವ್ಯವಹಾರವನ್ನೆಲ್ಲಾ ನೋಡಿಕೊಳ್ಳಲು ವಿದೇಶಿ ಹಣ ಪಡೆದು ಕೆಲಸ ಮಾಡುವ ವಾಲ್ಮೀಕಿ ಥಾಪರ್, ಮಹೇಂದ್ರ ವ್ಯಾಸ್ ಮತ್ತಿತರರನ್ನು ಒಳಗೊಂಡ 'ಉನ್ನತಾಧಿಕಾರ ಹೊಂದಿದ ಸಮಿತಿ' ಯೊಂದನ್ನು ನ್ಯಾಯಾಲಯವೇ ರಚಿಸಿದೆ.

ನ್ಯಾಯಾಲಯದ ಆದೇಶವನ್ನು ಜಾರಿಗೆ ತಂದಲ್ಲಿ ಪೂರ್ವ ಮತ್ತು ಪಶ್ಚಿಮ ಘಟ್ಟ ಪ್ರದೇಶದಲ್ಲಿ ಜನತೆಯೇ ವಾಸಮಾಡುವಂತಿಲ್ಲ. ರಾಜ್ಯದಲ್ಲಿಯೇ ಅತಿಚಿಕ್ಕ ತಾಲೂಕುಗಳಲ್ಲಿ ಒಂದಾದ ಶೃಂಗೇರಿ ತಾಲ್ಲೂಕಿನ ಉದಾಹರಣೆ ತೆಗೆದುಕೊಳ್ಳೋಣ; ಈ ತಾಲ್ಲೂಕಿನ ಒಟ್ಟು ವಿಸ್ತೀರ್ಣ ೧,೦೯,೧೨೪ ಎಕ್ರೆ. ಇದರಲ್ಲಿ ೫೨,೭೯ ಎಕ್ರೆ ಪ್ರದೇಶವನ್ನು ರಾಷ್ಟ್ರೀಯ ಉದ್ಯಾನ ಎಂದು ಘೋಷಿಸಲಾಗಿದೆ. ಉಳಿದ ೫೬,೬೨೫ ಎಕ್ರೆಯಲ್ಲಿ ೨೭,೮೭೯ ಎಕ್ರೆ ಪ್ರದೇಶವನ್ನು ಅರಣ್ಯ ಪ್ರದೇಶ ಎಂದು ಘೋಷಿಸಲಾಗಿದೆ. ತಾಲ್ಲೂಕಿನಲ್ಲಿ ೩೫ ಸಾವಿರಕ್ಕಿಂತ ಹೆಚ್ಚು ಜನರಿದ್ದು, ಅವರೆಲ್ಲ ಕೊನೆಗುಳಿದ ೨೮,೭೪೬ ಎಕ್ರೆ ಪ್ರದೇಶದಲ್ಲಿಯೇ ಇರಬೇಕಾಗುತ್ತದೆ. ಇಷ್ಟೇ ಜಾಗದಲ್ಲಿ ಜಮೀನಿರಬೇಕು, ಸರ್ಕಾರದ ಕಟ್ಟಡ, .ಶಾಲೆ, ರಸ್ತೆಗಳು ನಿರ್ಮಾಣವಾಗಬೇಕು. ಇದು ಸಾಧ್ಯವಾಗುತ್ತದೆಯೇ ?

ಈ ಆದೇಶ ಬಂದ ಮೇಲೆ ಅರಣ್ಯ ಇಲಾಖೆಗೆ ಹೊಸ ಅಸ್ತ್ರ ಸಿಕ್ಕಂತಾಗಿದೆ. ಒಂದು ಹೆಕ್ಟೇರ್ ಅರಣ್ಯದ ಮೌಲ್ಯ ೧೨೬.೭೪ ಲಕ್ಷ ರೂ.ಗಳಾಗಿದ್ದು, ಇದನ್ನು ಆಧಾರವಾಗಿಟ್ಟುಕೊಂಡು ಅರಣ್ಯ ಪ್ರದೇಶದಲ್ಲಿ ದಾಖಲೆ ಇಲ್ಲದೆ ಕೃಷಿ ಮಾಡುತ್ತಿರುವವರಿಗೆ ಭಾರಿ ದಂಡ ವಿಧಿಸಲಾಗುತ್ತಿತ್ತು.

ಉದಾಹರಣೆಗೆ ಹೇಳಬೇಕಾದರೆ, ೦.೯೭ ಎಕರೆ ಜಮೀನು ಹೊಂದಿದ್ದ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಸಂಸ್ಥೆಯ ಗಿರಿಜನ ಅಣ್ಣು ಬಿನ್ ದೊಂಬಯ್ಯಗೆ ಒಟ್ಟು ೬,೧೫,೩೧೭ ರೂ. ದಂಡ ವಿಧಿಸಲಾಗಿದೆ. ಇದೇ ಊರಿನ ೯ ಎಕರೆ ೩೭ ಗುಂಟೆ ಜಮೀನು ಹೊಂದಿದ ಇನ್ನೊರ್ವ ರೈತ ಗುರುವ ಬಿನ್ ದೊಂಬಯ್ಯಗೆ ೪೬ ಲಕ್ಷ ದಂಡ ವಿಧಿಸಲಾಗಿದೆ. ಈ ರೀತಿ ಭಾರಿ ದಂಡ ಹಾಕಿ, ಅರಣ್ಯವಾಸಿಗಳನ್ನು ಒಕ್ಕಲೆಬ್ಬಿಸಲು ಹೊರಟರೆ ಅವರು ಸುಮ್ಮನಿರುತ್ತಾರೆಯೇ ?

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಆರಂಭಿಸಿದವರು ಅರಣ್ಯನಿವಾಸಿಗಳು. ಪ್ರಭುತ್ವದ ಎಲ್ಲ ದೌರ್ಜನ್ಯಗಳನ್ನು ತೀರಾ ಅಗತ್ಯವೆನಿಸಿದಾಗ ಪ್ರಶ್ನಿಸಿಕೊಂಡೇ ಬಂದಿದ್ದಾರೆ. ಮಲೆನಾಡು ಭಾಗದ ಅರಣ್ಯನಿವಾಸಿಗಳ ಈ ರೀತಿಯ ಹೋರಾಟದ ಇತಿಹಾಸವೇ ಇದೆ. ದೇಶಾದ್ಯಂತ ಈ ರೀತಿಯಲ್ಲಿ ಅರಣ್ಯ ನಿವಾಸಿಗಳ ಮೇಲೆ ದೌರ್ಜನ್ಯ ನಡೆಯುತ್ತಿರುವುದರಿಂದಲೇ ಅಲ್ಲಲ್ಲಿ ಹೋರಾಟ ಉಗ್ರರೂಪ ಪಡೆದಿದೆ. ೧೩ ರಾಜ್ಯಗಳಲ್ಲಿ ಮಾವೋವಾದಿಗಳು ಪ್ರಾಬಲ್ಯ ಹೆಚ್ಚಿಸಿಕೊಂಡಿದ್ದಾರೆ.

ಈಗ ಸರ್ಕಾರ ಇದ್ದಕ್ಕಿದ್ದ ಹಾಗೆ ತನ್ನ ನಿಲುವು ಬದಲಾವಣೆ ಮಾಡಿಕೊಂಡು, ಅರಣ್ಯ ನಿವಾಸಿಗಳಿಗೆ ಅರಣ್ಯದಲ್ಲಿಯೇ ಬದುಕಲು ಅವಕಾಶ ನೀಡ ಹೊರಟಿರುವುದು ಆಶ್ಚರ್ಯಕರ ಬೆಳವಣಿಗೆ ಎನಿಸಿದರೂ, ಇದು ಅರಣ್ಯವಾಸಿಗಳು ಸತತವಾಗಿ ಹೋರಾಟ ನಡೆಸಿಕೊಂಡು ಬಂದಿರುವುದರ ಫಲ ಎಂದು ಇಲ್ಲಿ ಬಿಡಿಸಿ ಹೇಳಬೇಕಾಗಿಲ್ಲ.

**ಕಾಯ್ದೆಯಲ್ಲಿ ಏನಿದೆ ?**

೨೦೦೬ರ ಪರಿಶಿಷ್ಟ ಬುಡಕಟ್ಟು ಮತ್ತು ಇನ್ನಿತರ ಪರಂಪರಾಗತ ಅರಣ್ಯ ನಿವಾಸಿಗಳ (ಅರಣ್ಯ ಹಕ್ಕುಗಳ ಮಾನ್ಯತೆ) ಕಾಯ್ದೆಯಲ್ಲಿ ೨೦೦೫ರ ಡಿಸೆಂಬರ್ ೧೩ಕ್ಕಿಂತ ಮುಂಚಿತವಾಗಿ ಅರಣ್ಯದ್ಥೊಳಗೆ ಬದುಕುತ್ತಿರುವ ಗಿರಿಜನರಿಗೆ ಮತ್ತು ಮೂರು ತಲೆಮಾರಿನಿಂದ ಬದುಕುತ್ತಿರುವ ಸಾಂಪ್ರದಾಯಿಕ ಅರಣ್ಯವಾಸಿಗಳಿಗೆ ಅಲ್ಲಿಯೇ ಬದುಕಲು ಅವಕಾಶ ಕಲ್ಪಿಸಬೇಕು ಎಂದಿದೆ. ಜೊತೆಗೆ ಅವರ ನಾಲ್ಕು ಹೆಕ್ಟೇರಿನಷ್ಟು (ಹತ್ತು ಎಕರೆ) ಜಮೀನನ್ನು ಅಧಿಕೃತಗೊಳಿಸಬಹುದು. ಪರಿಗಣಿತ ಅರಣ್ಯಗಳಾದ ರಾಷ್ಟ್ರೀಯ ಉದ್ಯಾನ, ಅಭಯಾರಣ್ಯ, ರಕ್ಷಿತಾರಣ್ಯ ಮತ್ತು ಎಲ್ಲ ರೀತಿಯ ಅರಣ್ಯಗಳಲ್ಲಿ ಜನ ವಾಸಿಸಬಹುದು.

ಅರಣ್ಯದಲ್ಲಿ ಬದುಕುವ ಜನರ ಮೂಲಭೂತ ಅವಶ್ಯಕತೆಯಾದ ರಸ್ತೆ, ನೀರು, ಶಾಲೆ, ಕಿರು ನೀರಾವರಿ, ನ್ಯಾಯಬೆಲೆ ಅಂಗಡಿ, ಮಳೆ ನೀರು ಕೊಯ್ಲು, ಚಾನಲ್, ವಿದ್ಯುತ್, ಆಸ್ಪತ್ರೆ ಇತ್ಯಾದಿಗಳಿಗೆ, ಅಂದರೆ ಸಾರ್ವಜನಿಕ ಉದ್ದೇಶಗಳಿಗೆ ಎರಡುವರೆ ಹೆಕ್ಟೇರ್ ಅರಣ್ಯವನ್ನು ಬಳಸಬಹುದು. ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಬಹುದು. ಆದರೆ, ಅರಣ್ಯನಾಶ, ಹೆಂಡ ಇಳಿಸುವುದು, ಬೇಟೆಯಾಡುವುದು ಮಾಡುವಂತಿಲ್ಲ. ಪರಿಸರದೊಂದಿಗೆ ಸಹಬಾಳ್ವೆ ನಡೆಸಲು ಎಲ್ಲ ಹಕ್ಕುಗಳನ್ನು ನೀಡಲಾಗಿದೆ. ಈ ಎಲ್ಲ ಹಕ್ಕುಗಳ ಉಸ್ತುವಾರಿ ಜವಾಬ್ದಾರಿಯನ್ನು ಗ್ರಾಮ ಸಮಿತಿಯ ಸ್ವಾಯತ್ತತೆಗೆ ನೀಡಲಾಗಿದೆ.

ಅಲ್ಲದೆ ತಾಲ್ಲೂಕು, ಜಿಲ್ಲೆ ಮತ್ತು ರಾಜ್ಯಮಟ್ಟದ ಸಮಿತಿಗಳಿರುತ್ತವೆ. ಈ ಸಮಿತಿಗಳಲ್ಲಿ ಅರಣ್ಯ ಇಲಾಖೆ, ಕಂದಾಯ ಇಲಾಖೆ, ಗಿರಿಜನ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳು, ಜನಪ್ರತಿನಿಧಿಗಳು ಇರುತ್ತಾರೆ.

**ಬಲಗೈಯಲ್ಲಿ ಕೊಟ್ಟು, ಎಡಗೈಯಲ್ಲಿ...**

ಈ ಹಿಂದೆ ಹೇಳಿದಂತೆ ಮೇಲ್ನೋಟಕ್ಕೆ ಈ ಕಾಯ್ದೆ ಜನಪರವಾಗಿದೆ. ಪರಿಸರ ಪೂರಕವಾಗಿದೆ. ಅರಣ್ಯಗಳಲ್ಲಿ ಜೀವಸಂಕುಲಕ್ಕೇ ಸೇರಿದ ಮನುಷ್ಯ ಜೀವಿ ಇರಲೇಬಾರದು ಎಂದು ವಾದಿಸುವ ವಿದೇಶಿ ಪ್ರಣೀತ ಪರಿಸರವಾದಿಗಳ ವಾದವನ್ನು ಈ ಕಾಯ್ದೆ ಧಿಕ್ಕರಿಸಿದೆಯಾದರೂ ಕೊನೆಗೆ ತನ್ನ ಜುಟ್ಟನ್ನು ಅವರ ಕೈಗೇ ನೀಡಿದೆ.

ವಿನಾಶದ ಅಂಚಿನಲ್ಲಿರುವ ಅಪರೂಪದ ಜೀವಿಗಳ ಸಂರಕ್ಷಣೆಗೆ ಸರಿಪಡಿಸಲಾಗದ ಅನಾಹುತವಾಗುವ ಸಂದರ್ಭದಲ್ಲಿ ಗಿರಿಜನರನ್ನು ಪುನರ್ ವಸತಿಗೊಳಿಸಬಹುದು ಮತ್ತು ವನ್ಯಜೀವಿಗಳ ಸಂರಕ್ಷಣೆಯ ದೃಷ್ಟಿಯಿಂದ ಈ ಕಾಯ್ದೆಯನ್ನು ಪುನರ್ ವ್ಯಾಖ್ಯಾನಗೊಳಿಸಬಹುದು ಹಾಗೂ ಪುನರ್ ರಚಿಸಬಹುದು ಎಂದು ಕಾಯ್ದೆಯಲ್ಲಿ ಹೇಳಲಾಗಿದೆ.

ಇದನ್ನು ಬಳಸಿಕೊಂಡು ವಿದೇಶಿ ಪರಿಸರವಾದಿಗಳು, ಗಿರಿಜನರ ಮೇಲೆ ಗೂಬೆ ಕೂರಿಸಿ ಅವರನ್ನು ಒಕ್ಕಲೆಬ್ಬಿಸುವ ತಂತ್ರ ರೂಪಿಸದೇ ಇರುತ್ತಾರೆಯೇ ! ಕುದುರೆಮುಖ ಪರ್ವತ ಶ್ರೇಣಿಗಳಲ್ಲಿ 'ಸಿಂಗಳಿಕ' ಎಂಬ ಒಂದು ಜಾತಿಯ ಮಂಗಗಳಿದ್ದವು. ಅವುಗಳನ್ನು ಗಿರಿಜನರು ಎಂದೂ ತಿಂದವರಲ್ಲ. ಆದರೆ ಈ ಮಂಗ ಅಪರೂಪದ ಜಾತಿಯವು.



ಮುಂದೇನೆಂದು ಸಮಾಲೋಚನೆ

ಅವುಗಳು ವಿನಾಶದಂಚಿಗೆ ಬಂದಿವೆ. ಆದ್ದರಿಂದ ಕುದುರೆಮುಖ ರಾಷ್ಟ್ರೀಯ ಉದ್ಯಾನವಾಗಲೇಬೇಕು ಎಂದು ವಿದೇಶಿ ದುಡ್ಡು ತಿನ್ನುವ ಪರಿಸರವಾದಿಗಳು ವಾದಿಸುತ್ತಿದ್ದಾರೆ. ಈ ಜಾತಿಯ ಮಂಗಗಳನ್ನು ಬೇಟೆಯಾಡುವ, ತಿನ್ನುವ ಸಂಪ್ರದಾಯವೇ ಈ ಭಾಗದ ಗಿರಿಜನರಲ್ಲಿ ಇಲ್ಲ ಎಂಬ ಸಾಮಾನ್ಯ ಜ್ಞಾನವೂ ಅವರಿಗಿಲ್ಲ. ಅದೆಲ್ಲಾ ಅವರಿಗೆ ಬೇಕಾಗಿಯೂ ಇಲ್ಲ. ಅವರಿಗೆ ಬೇಕಾಗಿರುವುದು ಅರಣ್ಯ ಉಳಿಸುವ ನೆಪದಲ್ಲಿ ಕೋಟ್ಯಂತರ ರೂ. ವಿದೇಶದಿಂದ ನೆರವು ಪಡೆಯುವುದು ಅಷ್ಟೇ.

ಈಗ 'ಟೈಗರ್ ಪ್ರಾಜೆಕ್ಟ್'ನ್ನು ಈ ಭಾಗದಲ್ಲಿ ಜಾರಿಗೆ ತರುವ ಯತ್ನ ನಡೆದಿದೆ. ಅದೊಂದು ವಿದೇಶಿ ಹಣ ತಿನ್ನುವ ಸಂಸ್ಥೆಗಳ ಮೋಸದ ಜಾಲ. ಹುಲಿಗಳು ಎಲ್ಲಿ ಬದುಕುತ್ತವೆ, ಹೇಗೆ ಬದುಕುತ್ತವೆ ಎಂಬ ಸರಿಯಾದ ಜ್ಞಾನ ಇಲ್ಲದ ಮಂದಿ ವಿರಳವಾಗಿ ಹುಲಿಗಳಿರುವ ಕುದುರೆಮುಖ ಪರ್ವತ ಶ್ರೇಣಿಗಳಲ್ಲಿ ಹುಲಿಗಳನ್ನು ಪ್ರಾಣಿ ಸಂಗ್ರಹಾಲಯದಲ್ಲಿ ಸಾಕಿದಂತೆ ಸಾಕ ಹೊರಟಿದ್ದಾರೆ. ಅದಕ್ಕಾಗಿ ಕಾಡಿನ ಮಧ್ಯದಲ್ಲಿ ಕಾಡು ಕಾಯುತ್ತಾ ಬದುಕುತ್ತಿರುವ ನಮ್ಮ ಗಿರಿಜನರನ್ನು ಊರು ಸೇರಿಸಿ, ಅವರ ಬದುಕು ನಾಶ ಮಾಡ ಹೊರಟಿದ್ದಾರೆ.

ಕುದುರೆಮುಖ ಪರ್ವತ ಶ್ರೇಣಿಗಳಲ್ಲಿರುವ ಗಿರಿಜನರನ್ನು ಈ ಹುಲಿ ಸಾಕುವವರು ಬದುಕಲು ಬಿಟ್ಟಾರೆಯೇ ? ಅವರಿಗೆ ಈ ಕಾಯ್ದೆಯಿಂದ ಯಾವ ಪ್ರಯೋಜನವೂ ಆಗುವಂತೆ ಕಾಣುತ್ತಿಲ್ಲ. ಅವರ ಸಮಸ್ಯೆಗಳಿಗೆ ಈ ಕಾಯ್ದೆ ನಿರುತ್ತರವಾಗಿದೆ.

ಈ ಭಾಗದಲ್ಲಿರುವ ಪ್ರಾಣಿ ಅಪರೂಪದ್ದೇ ? ಅದಕ್ಕೆ ಜನರಿಂದ ಯಾವ ರೀತಿಯಲ್ಲಿ ತೊಂದರೆಯಾಗಿದೆ ? ಅದನ್ನು ಉಳಿಸಲು ಏನು ಮಾಡಬೇಕು ? ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳುವವರು ಯಾರು ಎಂಬುದನ್ನು ಕಾಯ್ದೆ ಸ್ಪಷ್ಟಪಡಿಸಿಲ್ಲ. ಈ ನಿರ್ಧಾರ ತೆಗೆದುಕೊಳ್ಳುವ ಹಕ್ಕನ್ನು ಗ್ರಾಮಸಮಿತಿಗೆ ನೀಡಬೇಕಿತ್ತು. ಆದರೆ ಈ ಬಗ್ಗೆ ಉಲ್ಲೇಖವಿಲ್ಲದೆ, ಅರಣ್ಯ ಇಲಾಖೆಗೇ ಹೆಚ್ಚಿನ ಅಧಿಕಾರ ದೊರೆತಂತಾಗಿದೆ. ವನ್ಯಜೀವಿ ಸಂರಕ್ಷಣಾ ಕಾಯ್ದೆಯನ್ನು ಮುಂದಿಟ್ಟುಕೊಂಡು ಕಿರುಕುಳ ನೀಡಲು ಅವಕಾಶವಿದೆ.

ಅರಣ್ಯ ಪ್ರದೇಶದಲ್ಲಿ ಬದುಕುವ ಗಿರಿಜನರು ಮತ್ತು ಸಾಂಪ್ರದಾಯಿಕ ಅರಣ್ಯನಿವಾಸಿಗಳು ಸಾಮಾನು – ಉತ್ಪನ್ನಗಳನ್ನು ಸೈಕಲ್, ಕೈಗಾಡಿ ಮತ್ತು ತಲೆಹೊರೆಯ ಮೂಲಕ ಮಾತ್ರ ಸಾಗಿಸಬೇಕೆಂದು ಈ ಕಾಯ್ದೆ ನಿರ್ಬಂಧ ಹೇರಿದೆ. ಅರಣ್ಯ ಇಲಾಖೆಯ ಜೀಪು, ನಕ್ಸಲರ ಬೇಟೆಗೆ ಬರುವ ಪೊಲೀಸರ ವಾಹನಗಳು ಓಡಾಡಬಹುದು, ಗಿರಿಜನರು ಮಾತ್ರ ಮನುಷ್ಯ ಶ್ರಮದಿಂದಲೇ ಸಾಮಾನುಗಳನ್ನು ಸಾಗಿಸಬೇಕೆಂದರೆ ಯಾವ ನ್ಯಾಯ ?

ಸೂಕ್ಷ್ಮ ಪ್ರದೇಶದಲ್ಲಿ 'ಇಕೋ ಟೂರಿಸಂ' ಹೆಸರಿನಲ್ಲಿ ಪ್ರವಾಸಿಗರ ಅದರಲ್ಲೂ ವಿದೇಶಿ ಪ್ರವಾಸಿಗರ ಮೋಜಿಗೆ ಅವಕಾಶ ಮಾಡಿಕೊಡಲಾಗುತ್ತಿದೆ. ಸಂಶೋಧನೆಯ ಹೆಸರಿನಲ್ಲಿ ಜೀವ ಸಂಪನ್ಮೂಲದ ಲೂಟಿ ಮಾಡುವವರಿಗೆ ಅರಣ್ಯದಲ್ಲಿಯೇ ಎಲ್ಲ ರೀತಿಯ ಸೌಕರ್ಯ ಒದಗಿಸಲಾಗುತ್ತಿದೆ. ಆದರೆ ಕಾಡನ್ನು ನಂಬಿಯೇ ಬದುಕುತ್ತಿರುವವರು ಸಾಗಾಣಿಕೆಗೆ ವಾಹನ ಬಳಸಿದರೆ ಕಾಡು ನಾಶವಾಗುವುದೂ ಇಲ್ಲ, ವನ್ಯ ಜೀವಿಗಳು ಅಳಿಯುವುದೂ ಇಲ್ಲ ಎಂಬುದು ಈ ಕಾಯ್ದೆ ರೂಪಿಸಿದವರ ತಲೆಗೆ ಹೋದಂತಿಲ್ಲ.

ಇನ್ನು ಈ ಕಾಯ್ದೆಯಲ್ಲಿರುವ ಮತ್ತೊಂದು ದೊಡ್ಡ ದೋಷವೆಂದರೆ. ಗಿರಿಜನರು, ಸಣ್ಣ ರೈತರು ಮೂರು ತಲೆಮಾರುಗಳಿಂದ ಅರಣ್ಯ ಪ್ರದೇಶದಲ್ಲಿ ಬದುಕುತ್ತಿದ್ದರೆ ಮಾತ್ರ ಅವರಿಗೆ ಭೂಮಿ ಅನುಭವಿಸುವ ಹಕ್ಕಿದೆ ಎಂದು ಸ್ಪಷ್ಟವಾಗಿ ಹೇಳಿರುವುದು. ಹೆಚ್ಚಿನ ಜನ ಅರಣ್ಯ ಪ್ರದೇಶದಲ್ಲಿಯೇ ಬದುಕುತ್ತಿದ್ದಾರೆಯಾದರೂ ಒಂದೇ ಜಾಗದಲ್ಲಿ ಬದುಕುತ್ತಿಲ್ಲ. ಉದಾಹರಣೆಗೆ ಮಹಾಯುದ್ಧದ ಸಂದರ್ಭದಲ್ಲಿ, ದೊಡ್ಡ ದೊಡ್ಡ ಅಣೆಕಟ್ಟುಗಳು ನಿರ್ಮಾಣವಾದಾಗ ಜನತೆ ವಲಸೆ ಹೋಗಿ ಅರಣ್ಯ ಪ್ರದೇಶಗಳಲ್ಲಿಯೇ ನೆಲೆ ನಿಂತಿದ್ದಾರೆ. ಆದರೆ ಅವರಿಗೆ ಈ ಕಾಯ್ದೆಯಡಿ ಜಮೀನು ಮಂಜೂರಾಗುವುದಿಲ್ಲ.

ಉದಾಹರಣೆಗೆ ಲಿಂಗನಮಕ್ಕಿ ಅಣೆಕಟ್ಟು ನಿರ್ಮಾಣವಾದಾಗ ನಿರಾಶ್ರಿತರಾದವರಿಗೆ ಶಿವಮೊಗ್ಗ ಸಮೀಪದ ಶೆಟ್ಟಿಹಳ್ಳಿ ಅಭಯಾರಣ್ಯಕ್ಕೆ ಸೇರಿದ ಜಾಗದಲ್ಲಿ ಜಮೀನು ನೀಡಲಾಗಿತ್ತು. ಅವರಲ್ಲಿ ಹೆಚ್ಚಿನವರಿಗೆ ಸರಿಯಾದ ದಾಖಲೆ ನೀಡಲಾಗಿಲ್ಲ. ಅವರೆಲ್ಲ ಈಗ ಅರಣ್ಯ ನಿವಾಸಿಗಳೇ ಆಗಿದ್ದರೂ ಈ ಕಾಯ್ದೆ ಹೇಳುವಂತೆ ಅವರು ಮೂರು ತಲೆಮಾರುಗಳಿಂದ ಅಲ್ಲಿ ಬದುಕಿಲ್ಲ. ಹೀಗಾಗಿ ಅವರೀಗ ಅತಂತ್ರರಾಗಬೇಕಾಗುತ್ತದೆ. ಈ ರೀತಿ 'ಕಟ್ ಆಫ್' ಡೇಟ್ ನೀಡಿರುವುದು ಸರಿಯಾದ ಕ್ರಮವಲ್ಲ.

ಇನ್ನು ಗ್ರಾಮ ಸಮಿತಿಗಳಿಗಿಂತ ಜಿಲ್ಲಾ ಸಮಿತಿಗೆ ಹೆಚ್ಚಿನ ಅಧಿಕಾರ ನೀಡಲಾಗಿದೆ. ಜಿಲ್ಲಾ ಸಮಿತಿಯ ಅಧ್ಯಕ್ಷರು ಜಿಲ್ಲಾಧಿಕಾರಿಗಳಾಗಿದ್ದಾರೆ. ಅವರಿಗೆ ಗ್ರಾಮ ಸಮಿತಿಗಳ ನಿರ್ಣಯಗಳನ್ನು ವಜಾ ಮಾಡುವ ಅಧಿಕಾರವನ್ನೂ ನೀಡಲಾಗಿದೆ. ಈ ಮಹತ್ವದ ಸಮಿತಿಯಲ್ಲಿ ಹೆಚ್ಚಿನ ಜನಪ್ರತಿನಿಧಿಗಳಿಗೆ ಅವಕಾಶ ನೀಡಬೇಕಾಗಿತ್ತು. ಸಾರ್ವಜನಿಕರಿಗೇ ಬಹುಮತದಿಂದ ತೀರ್ಮಾನ ತೆಗೆದುಕೊಳ್ಳುವ ಅಧಿಕಾರವಿರಬೇಕಿತ್ತು.

ಗ್ರಾಮ ಸಮಿತಿ, ತಾಲ್ಲೂಕು ಸಮಿತಿ ಎಂದೆಲ್ಲಾ ಇದ್ದರೂ ಇವುಗಳಿಗೆ ಸ್ವಾಯತ್ತತೆ ಇಲ್ಲ. ಅಧಿಕಾರಿಗಳ ಬಿಗಿ ಹಿಡಿತ ಮುಂದುವರೆದಿದೆ. ಜನರಿಗೆ ಅಧಿಕಾರ ನೀಡದೆ, ಕಾಡು ಉಳಿಸುತ್ತೇವೆ ಎಂದರೆ ಅದು ಸಾಧ್ಯವಾಗದ ಮಾತು. ಅಧಿಕಾರಿಗಳು ತಮ್ಮ ಹಿತಾಸಕ್ತಿಗಳನ್ನು ಮುಂದಿಟ್ಟುಕೊಂಡು ಅರಣ್ಯವಾಸಿಗಳ ಮೇಲೆ ದೌರ್ಜನ್ಯ ನಡೆಸಿದ ಎಷ್ಟೋ ಉದಾಹರಣೆಗಳು ನಮ್ಮ ಕಣ್ಣ ಮುಂದಿದೆ. ಅದೇ ಇನ್ನೂ ಮುಂದುವರೆಯಲಿದೆ.

ಗಿರಿಜನರನ್ನು ಮತ್ತು ಅರಣ್ಯ ನಿವಾಸಿಗಳನ್ನು ಬಲಾತ್ಕಾರವಾಗಿ ಒಕ್ಕಲೆಬ್ಬಿಸುವಂತಿಲ್ಲ ಎಂದು ಹೇಳಲಾಗಿದ್ದರೂ, ಪುನರ್ವಸತಿಯ ಬಗ್ಗೆ ಹೆಚ್ಚಿನ ವಿವರಣೆ ನೀಡಲಾಗಿಲ್ಲ. ಹೀಗಾಗಿ ಹಳೆಯ ಸಮಸ್ಯೆಗಳಿಗೆ ಈ ಹೊಸ ಕಾಯ್ದೆಯಿಂದಲೂ ಪರಿಹಾರ ದೊರಕಿದಂತಾಗಿಲ್ಲ.

ಒಟ್ಟಾರೆ ಈ ಕಾಯ್ದೆಯಿಂದ ಅರಣ್ಯವಾಸಿಗಳ ಸಮಸ್ಯೆಗಳನ್ನು ಸರ್ಕಾರ ಸಮಗ್ರವಾಗಿ ನೋಡಿಲ್ಲ ಎಂಬುದನ್ನು ಮತ್ತೆ ಎತ್ತಿತೋರಿಸಿದೆ. ವಿದೇಶಿ ಪರಿಸರವಾದಿಗಳ ಮರ್ಜಿಗೆ ಒಳಗಾಗಿ ಮನುಷ್ಯನನ್ನು ಕಾಡಿನ ದ್ರೋಹಿಗಳಂತೆ ನೋಡಿಲ್ಲ ಎಂಬುದೊಂದೇ ಸಮಾಧಾನದ ವಿಷಯ.

ಇಂದು ಪ್ರಪಂಚ ಪರಿಸರ ಬಿಕ್ಕಟ್ಟನ್ನು ಎದುರಿಸುತ್ತಿದೆ. ಭೂತಾಪಮಾನ ಹೆಚ್ಚುತ್ತಿರುವುದರಿಂದ ಅರಣ್ಯ ಉಳಿಸಲೇಬೇಕಾದ ಅನಿವಾರ್ಯತೆ ಬಂದೊದಗಿದೆ. ಆದರೆ ಅಮೆರಿಕ ಮತ್ತು ಇತರ ಸಾಮ್ರಾಜ್ಯಶಾಹಿ ದೇಶಗಳು ಹೇಳುತ್ತಿರುವಂತೆ ಪಶ್ಚಿಮ ಘಟ್ಟದಲ್ಲಿ ಮತ್ತೆಲ್ಲೋ 'ಫ್ರಿಜ್‌ನಲ್ಲಿ'ಟ್ಟಂತೆ ಒಂದಿಷ್ಟು ಕಾಡು ಉಳಿದರೆ ಸಾಲದು. ಭೂಮಿಯ ಉದ್ದಗಲದಲ್ಲೂ ಕಾಡು ಇರಬೇಕು, ಅದರೊಂದಿಗೆ ಬೆರೆತು ಬದುಕುವ ಸಂಸ್ಕೃತಿ ನಮ್ಮದಾಗಬೇಕು. ಆ ನಿಟ್ಟಿನಲ್ಲಿ ಜನಪರವಾದ ಪರಿಸರ ಆಂದೋಲನವನ್ನು ನಾವು ಕಟ್ಟಬೇಕಾಗಿರುವುದು ಈಗಿನ ತುರ್ತು.

**ಕಲ್ಕುಳಿ ವಿಠ್ಠಲ ಹೆಗ್ಡೆ**
ಜನಪರ ಪರಿಸರವಾದಿ, ಶೃಂಗೇರಿ

# ದಯಮಾಡಿ ಮುಂದೆ ಬನ್ನಿ ಸಾಲಿನಲ್ಲಿ ನಿಂತವರೆ

(ಫಿಲಿಪ್ ಲಾರ್ಕಿನ್‌ನ ಅತ್ಯಂತ ಸುಂದರ ಸಾಂಕೇತಿಕ ಕವನಗಳಲ್ಲಿ ಇದೂ ಒಂದು. ಮಾನವನ ಆಸೆ ನಿರೀಕ್ಷೆಗಳ ಸ್ವಭಾವಕ್ಕೆ ಕನ್ನಡಿ ಹಿಡಿಯುತ್ತಾ, ಅಷ್ಟೇ ಸ್ಪಷ್ಟವಾಗಿ ಅವನಿಗೆ ಕಡೆಗೆ ನಿಜವಾಗಿ ಸಿಗುವುದೇನೆಂದು, ಪ್ರತಿಮೆಯ ಮೂಲಕ ತಿಳಿಸುವ ಕವನ Next Please)

ಭವಿಷ್ಯಕ್ಕಾಗಿ ಸದಾ ಅತಿಕಾತರಿಸುತ ನಾವು
ನಿರೀಕ್ಷಿಸುವ ದುರಭ್ಯಾಸವನು ಮಾಡಿಕೊಳ್ಳುವೆವು.
ಏನಾದರೂ ಒಂದು ಸದಾ ಹತ್ತಿರ ಬರುತ್ತಲೇ ಇರುವುದು, ನಾವು
ಆದರೂ ಪ್ರತಿದಿನವೂ ಹೇಳುವೆವು,
ಥಳಥಳಿಸುತ, ಭರವಸೆಗಳ ಪುಟ್ಟ ಸ್ಪಷ್ಟ ನೌಕಾದಳ ಹತ್ತಿರಾಗುವದ
ಕಡಿದಾದ ಎತ್ತರದ ಶಿಖರದಿಂದ ನಿರುಕಿಸುತ
"ಇವು ಬರುವುದದೆಷ್ಟು ನಿಧಾನ ! ಬೇಗ ಬೇಗ ಬರುವುದ
ನಿರಾಕರಿಸುತ ಮಾಡುತಿವೆ ಎಷ್ಟೊಂದು ಕಾಲ ವ್ಯರ್ಥ !"
ದೊಡ್ಡದೇನಾದರೂ ಬಂದು ಹತ್ತಿರಾಗುವುದನು ತಡೆಯದಿದ್ದರೂ, ಅವು
ಹಿಡಿಯಗೊಡುವುವು ನಿಮ್ಮನು ನಿರಾಸೆಯ ದರಿದ್ರ ರೆಂಬೆಗಳ
ನೋಡಗೊಡುವುವು, ಬೇರೆ ಬೇರೆಯಾಗಿ ಒಂದೊಂದೂ ಹಗ್ಗಗಳ,
ಮಾಟಾದ ಕಂಚು ಕಂಭಕ್ಕಾತುಕೊಂಡು
ಧ್ವಜ ಹೊತ್ತು ಸ್ವರ್ಣಸ್ಥನ ಮಂಡಲದ ಪುತ್ಥಳಿ
ನಮ್ಮೆಡೆಗೆ ಬಾಗುತಿರುವುದನು : ಆದರದು ಎಂದು ಲಂಗರು
ಹಾಕುವುದಿಲ್ಲ ಇಲ್ಲಿ,
ಅದಿಲ್ಲಿ ಹಾಜರಾಗುವುದೆ ತಡ, ಗತವಾಗಿಬಿಡುವುದು ಮರುಕ್ಷಣ.
ಬರುವ ತನಕವೂ ಕಟ್ಟಕಡೆಯ ಆ ಕ್ಷಣ
ನಾವಂದುಕೊಳ್ಳುವೆವು, ಈ ಒಂದೊಂದೂ ನಿಂತಿಲ್ಲ
ಇಳಿಸಿಬಿಡುವುವು ಒಳಿತೆಲ್ಲವನು, ನಮ್ಮ ಬಾಳಂಗಳದಲ್ಲಿ
ಆಭಾರಿಯಾಗಿರುವೆವು ಅದಕೆಂದೆ ಕಾಯುವಿಕೆಗೆ,
ಬಹುಕಾಲ ನಿಷ್ಠೆಯಲಿ
ನಾವು ತಪ್ಪಿರುವೆವು ಆದರೀ ವಿಷಯದಲ್ಲಿ,

ಒಂದೇ ಒಂದು ನೌಕೆ ಬರುತಲಿದೆ ನಮ್ಮನರಸುತ್ತ
ಕಪ್ಪುಹಾಯಿಯ, ಅಪರಿಚಿತ, ಅಗಾಧ
ಪಕ್ಷಿರಹಿತ ಮೌನವ ತನ್ನ ಬೆನ್ನ ಹಿಂದೆ ಎಳೆಯುತ್ತ
ಅವಳು ಸಾಗಿದ ಜಾಡಿನಲ್ಲಿ ನೀರೆಲ್ಲ ನಿರ್ಜೀವ ಸ್ತಬ್ಧ.



ಅನುವಾದ : ಎಲ್. ವಿ. ಶಾಂತಕುಮಾರಿ
೧೫೨, ೪ನೇ ಮುಖ್ಯರಸ್ತೆ
೫ನೇ ಅಡ್ಡರಸ್ತೆ, ಪೂರ್ಣಪ್ರಜ್ಞ ಲೇಔಟ್
ಬೆಂಗಳೂರು - ೫೬೦ ೦೮೫

ಡಾ॥ ಮನಮೋಹನ ಸಿಂಗ್ ನೇತೃತ್ವದ ಸರ್ಕಾರವು ೨೦೦೪ರ ಸೆಪ್ಟೆಂಬರ್ ೨೪ರಂದು ಒಂದು ಆಯೋಗವನ್ನು ರಚಿಸಿತ್ತು. ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಘೋಷಿಸಲಾಗಿದ್ದ ಆಶಯದ ಪೂರೈಕೆಯತ್ತ ಚಲಿಸಲು ಇದು ಮೊದಲ ಹೆಜ್ಜೆ. ''ನಮ್ಮ ದೇಶದ ದುಡಿಮೆಗಾರರ ಪೈಕಿ ಅಸಂಘಟಿತ ವಲಯದಲ್ಲಿರುವ ಶೇ. ೯೩ರಷ್ಟು ಮಂದಿಯ ಕ್ಷೇಮಾಭಿವೃದ್ಧಿಗಾಗಿ'' ಸಮಗ್ರ ಅಧ್ಯಯನ ನಡೆಸಿ ವರದಿ ಕೊಡುವುದು ಈ ಆಯೋಗಕ್ಕೆ ವಹಿಸಲಾಗಿದ್ದ ಜವಾಬ್ದಾರಿ. ಅದರ ಅಧ್ಯಕ್ಷರು ಡಾ॥ ಅರ್ಜುನ ಸೇನ್‌ಗುಪ್ತ ಆಗಿದ್ದುದರಿಂದ ವರದಿಯನ್ನು 'ಸೇನ್‌ಗುಪ್ತ ವರದಿ' ಎಂದು ಕರೆಯಲಾಗುತ್ತಿದೆ. ಅದರ ಇತರ ಸದಸ್ಯರು ಡಾ॥ ಕೆ. ಪಿ. ಕಣ್ಣನ್, ಡಾ॥ ಆರ್. ಎನ್. ಶ್ರೀವಾಸ್ತವ, ಡಾ॥ ಬಿ. ಎಸ್. ಪಾಪೋಲ ಮತ್ತು ಬಿ. ಎನ್. ಯುಗಂಧರ್, ಸದಸ್ಯ - ಕಾರ್ಯದರ್ಶಿ ವಿ. ಕೆ. ಮಲ್ಹೋತ್ರಾ. – ಈ ಆಯೋಗವು ೨೦೦೭ರ ಆಗಸ್ಟ್ ೬ರಂದು ತನ್ನ ವರದಿಯನ್ನು ಸಲ್ಲಿಸಿತು. ಅಸಂಘಟಿತ ದುಡಿಮೆಗಾರರ ಬವಣೆಯನ್ನು ನೀಗಿಸಲು ಹದಿಮೂರು ಅಂಶದ ಕಾರ್ಯಕ್ರಮವೊಂದನ್ನು ಆಯೋಗವು ಸೂಚಿಸಿದೆ. ಅದನ್ನು ''ಅಸಂಘಟಿತ ವಲಯದಲ್ಲಿ ದುಡಿಮೆಯ ಸನ್ನಿವೇಶ ಮತ್ತು ಜೀವನ ಸುಧಾರಣೆಗಾಗಿ ವರದಿ'' ಎಂದು ಕರೆಯಲಾಗಿದೆ. ಕೇಂದ್ರ ಸರ್ಕಾರವು ಈವರೆಗೆ ಯಾವ ಶಿಫಾರಸನ್ನೂ ಒಪ್ಪಿ, ಜಾರಿಗೊಳಿಸಲು ಕಾತುರತೆಯನ್ನೇನೂ ತೋರಿಲ್ಲ. ವರದಿಯನ್ನು ಒಪ್ಪುವ ಅಥವಾ ಪ್ರಶ್ನಿಸುವ ತೀರ್ಮಾನವನ್ನು ಕೈಗೊಂಡಂತೆಯೂ ಕಾಣುವುದಿಲ್ಲ. ವರದಿಯ ಪೀಠಿಕೆಯಲ್ಲಿ ಉಲ್ಲೇಖವಾಗಿರುವ ಒಂದು ಮಾತು ಈಗ ಎಲ್ಲೆಲ್ಲೂ ಪ್ರಸ್ತಾಪಿಸಲಾಗುತ್ತಿದೆ : ''ನಾವು ಅಸಂಘಟಿತ ವಲಯದ ಒಂದು ಭಾಗವನ್ನು 'ಬಡ ಮತ್ತು ಆಘಾತಕ್ಕೆ ಸಿಲುಕಿರುವ' ದುಡಿಮೆಗಾರರೆಂದು ಕರೆದಿದ್ದೇವೆ. ಈ ವಲಯವು ದೇಶದಲ್ಲಿ ಒಟ್ಟು ಶೇ. ೯೨ರಷ್ಟಿದೆ. ಆ ಪೈಕಿ 'ಬಡ ಮತ್ತು ಆಘಾತಕ್ಕೆ ಸಿಲುಕಿರುವ' ಜನ ಒಟ್ಟು ದೇಶದ ಜನಸಂಖ್ಯೆಯ ಶೇ. ೭೭ರಷ್ಟಿದ್ದಾರೆ. ಅವರ ದೈನಂದಿನ ತಲಾ ವೆಚ್ಚವು ೨೦೦೪-೦೫ರ ಅವಧಿಯಲ್ಲಿ ೨೦ ರೂಪಾಯಿಗಳವರೆಗಿತ್ತು. ಈ ಗುಂಪಿಗೆ ಸೇರಿದವರು ೧೯೯೯-೨೦೦೦ದಲ್ಲಿ ೮೧.೧ ಕೋಟಿ ಇದ್ದರು; ೨೦೦೪-೦೫ರ ವೇಳೆಗೆ ಅದು ೮೩.೬ ಕೋಟಿಗೆ ಏರಿದೆ.''

ಅಸಂಘಟಿತ ದುಡಿಮೆಗಾರರ ಕುಟುಂಬದ ಒಬ್ಬ ವ್ಯಕ್ತಿಯು ದಿನಕ್ಕೆ ೨೦ ರೂಪಾಯಿಗಿಂತಲೂ ಹೆಚ್ಚು ಖರ್ಚು ಮಾಡಲಾಗುತ್ತಿಲ್ಲವೆಂದರೆ ಆ ವ್ಯಕ್ತಿಯ ಮಾಸಿಕ ಆದಾಯವು ೬೨೦ ರೂಪಾಯಿಗಳಿಗಿಂತಲೂ ಹೆಚ್ಚಾಗಿಲ್ಲವೆಂದರ್ಥ. ನಾಲ್ಕು ಮಂದಿಯ ಕುಟುಂಬವಾದರೆ ಎಲ್ಲರ ದುಡಿಮೆಯೂ ಸೇರಿ ತಿಂಗಳಿಗೆ ಆ ಕುಟುಂಬದ ಆದಾಯ ೨೪೮೦ ರೂಪಾಯಿಗಳು. ದೇಶದಲ್ಲಿ ಶೇ. ೯ರಷ್ಟು ವಾರ್ಷಿಕ ಅಭಿವೃದ್ಧಿ ಆಗುತ್ತಿದೆಯೆಂದು ಹಣಕಾಸು ಸಚಿವರು ಹೇಳುತ್ತಲೇ ಇರುತ್ತಾರೆ. ಅದರ ಒಂದು ಕಿಲುಬುಗಾಸೂ ನಮ್ಮ ದುಡಿಮೆಗಾರರಿಗೆ ದಕ್ಕುತ್ತಿಲ್ಲ ಎಂಬುದು ಕಟುಸತ್ಯ. ಸರ್ಕಾರದ ಅಧಿಕೃತ ಆಯೋಗವು ಅದನ್ನು ಹೇಳುತ್ತಿದೆ. ಆದರೆ ಚಿದಂಬರಂ ಎಂಬ ಅರ್ಥಶಾಸ್ತ್ರ ಪಂಡಿತನಿಗೆ ಅದು ಕೇಳಿಸುತ್ತಿಲ್ಲ. ಅವರಿಗೆ ಕೇಳಿಸದಿದ್ದರೂ ಜನಸಾಮಾನ್ಯರಿಗೆ ಅದು ಕೇಳಿಸಬೇಕು. ಅಧ್ಯಕ್ಷ ಸೇನ್‌ಗುಪ್ತ ತಮ್ಮ ಪೀಠಿಕೆಯಲ್ಲಿ ಹೇಳಿರುವ ಒಂದು ಮಾತು ಹೀಗಿದೆ: ''ಮಹಿಳೆಯರು, ಮಕ್ಕಳು, ಜೀತದಾಳುಗಳು ಮತ್ತು ವಲಸೆ ಹೋಗುವ ದುಡಿಮೆಗಾರರಿಗೆ ಸಂಬಂಧಿಸಿದಂತೆ ಹೇಳುವುದಾದರೆ ತಾರತಮ್ಯದ ನಿಯಮವು ಸರ್ವವ್ಯಾಪಿ ಯಾಗಿದೆ. ಇಂತಹ ಪ್ರತಿಕೂಲದ ಸನ್ನಿವೇಶವು ಬಹುಮಟ್ಟಿಗೆ ಆಯಾ ವ್ಯಕ್ತಿಗಳ ಸಾಮಾಜಿಕ ಸ್ಥಿತಿ, ಗ್ರಾಮೀಣ ಜೀವನ ಮತ್ತು ಕಡಿಮೆ ಇಲ್ಲವೆ ಶೂನ್ಯ ಶಿಕ್ಷಣದ ಒಟ್ಟೊಟ್ಟಿಗೆ ಗುರುತಿಸಲ್ಪಡುತ್ತದೆ.'' ದೇಶದಲ್ಲಿ ಎಷ್ಟು ಮಂದಿ ಸಹಸ್ರಕೋಟಿಗಳ ಶ್ರೀಮಂತರಿದ್ದಾರೆಂಬ ಲೆಕ್ಕವನ್ನು ವಾರಕ್ಕೊಮ್ಮೆಯಾದರೂ ಜ್ಞಾಪಿಸುವ ನಮ್ಮ ಎಷ್ಟೋ ಮಾಧ್ಯಮಗಳಿಗೆ ಈ ಬಹುಸಂಖ್ಯಾತ ದಟ್ಟದರಿದ್ರರು ಕಣ್ಣಿಗೆ ಬೀಳದಿರುವುದು ಒಂದು ಕೇಡು.

ಪ್ರಸ್ತುತ ಸಂಚಿಕೆಯಿಂದ ಆರಂಭಿಸಿ 'ಹೊಸತು' ಪತ್ರಿಕೆಯು ಸೇನ್‌ಗುಪ್ತ ವರದಿಯ ಆಯ್ದ ಭಾಗಗಳನ್ನು ಸಂಕ್ಷಿಪ್ತ ರೂಪದಲ್ಲಿ ಪ್ರಸ್ತುತಪಡಿಸಲಿದೆ. ವರದಿಯ ಪೂರ್ಣ ಪಾಠವು ಪತ್ರಿಕೆಯ ಬಳಿ ಲಭ್ಯವಿದೆಯಾದರೂ ಅದನ್ನು ಇಡಿಯಾಗಿ ಓದುಗರಿಗೆ ಮುಟ್ಟಿಸಲು ಸಾಧ್ಯವಾಗುತ್ತಿಲ್ಲ. ಆಯ್ದ ಭಾಗಗಳನ್ನು ಪರಾಮರ್ಶೆ ಮಾಡಿ ಓದುಗರು ದೇಶದ ಸಾಮಾಜಿಕ-ಆರ್ಥಿಕ ಪರಿಸ್ಥಿತಿಯನ್ನು ಮನದಟ್ಟು ಮಾಡಿಕೊಳ್ಳಬಹುದು. ಅದಾದನಂತರ ರಾಜಕೀಯ ಕ್ರಿಯಾಶೀಲತ್ವವು ಯಾವ ದಿಕ್ಕಿನಲ್ಲಿ ಮುನ್ನಡೆಯಬೇಕೆಂಬುದನ್ನು ಓದುಗರೇ ತೀರ್ಮಾನಿಸಿಕೊಳ್ಳಬೇಕು ಮತ್ತು ಅದರಲ್ಲಿ ಭಾಗಿಗಳಾಗಬೇಕು.

*ಸಂಪಾದಕ*

# ಅಸಂಘಟಿತ ವಲಯದ ದುಡಿಮೆಗಾರರ ಕೂಲಿ ಮತ್ತು ಆದಾಯ



**ಡಾ||** ಅರ್ಜುನ ಸೇನಗುಪ್ತ ಆಯೋಗದ ವರದಿಯ ಪುಟಗಳು : ೪೦-೪೪ (ಪ್ಯಾರಾಗಳು : ೩.೫೫ರಿಂದ ೩.೭೫).

ಗಂಡಸರು ಮತ್ತು ಹೆಂಗಸರು ಒಂದೇ ದುಡಿಮೆಗೆ ಪಡೆಯುವ ಕೂಲಿಯಲ್ಲಿ ವ್ಯತ್ಯಾಸವಿದೆ. ಖಾಯಂ ಆದ 'ನೌಕರ'ರನ್ನು ಬಿಟ್ಟು ಉಳಿದವರು ಅಕ್ಷರಸ್ಥರಾಗಿರಲಿ, ಇಲ್ಲದಿರಲಿ, ಒಂದೇ ಕೂಲಿ ಪಡೆಯುತ್ತಾರೆ. ಇವರ ಕೂಲಿಯಲ್ಲಿ ಮೂರು ಬಗೆಗಳಿವೆ: (ಅ) ಕೆಳಮಟ್ಟದ ಕೂಲಿಯಾಳುಗಳಲ್ಲಿ ಹೆಂಗಸರಿಗೆ ೨೭ ರೂ.ಗಳಿಂದ ೪೭ ರೂ.ಗಳ ಕೂಲಿ, ಗಂಡಸರಿಗೆ ೩೭ರಿಂದ ೬೭ರೂ. ಕೂಲಿ; (ಆ) ಮಧ್ಯದ ಮಟ್ಟದಲ್ಲಿ ಮಹಿಳೆಯರಿಗೆ ೩೨ರೂ. ಮತ್ತು ಪುರುಷರಿಗೆ ೪೮ ರೂ. ಕೂಲಿ. ಭಾರ ಹೊರುವಂತಹ ಕೆಲಸವಾದರೆ ಗಂಡಸರಿಗೆ ೬೦ ರೂ. ಮತ್ತು ಹೆಂಗಸರಿಗೆ ೨೭ ರಿಂದ ೩೦ ರೂಪಾಯಿ. ಜವಾನರಾಗಿ ಕೆಲಸ ಮಾಡುವವರೆಲ್ಲಾ ಗಂಡಸರೇ, ಸೇವೆಯ ಅವಧಿಯನ್ನು ಅನುಸರಿಸಿ ಅವರಿಗೆ ೧೪೦೦ ರಿಂದ ೨೦೦೦ರೂ.ವರೆಗೆ ಸಂಬಳವಿರುತ್ತದೆ ; (ಇ) ಮೇಲಿನ ಮಟ್ಟದಲ್ಲಿ ಕೂಲಿಯು ಸೇವಾವಧಿಗೆ ತಕ್ಕಂತೆ ಇರುತ್ತದೆ; ಕನಿಷ್ಠ ಐದು ವರ್ಷಗಳ ಸೇವೆ ಸಲ್ಲಿಸಿರುವವರು ಮಾತ್ರ ಗಣನೆಗೆ ಬರುತ್ತಾರೆ.

ದಿನಗೂಲಿಯ ಲೆಕ್ಕಾಚಾರವಿದ್ದರೂ ವೇತನ ದೊರೆಯುವುದು ತಿಂಗಳಿಗೊಮ್ಮೆ ಮತ್ತು ವಾರದಲ್ಲಿ ೬ ದಿನಗಳ ಕೂಲಿ ಮಾತ್ರ ದೊರೆಯುತ್ತದೆ. ದಿನದ ಕೆಲಸವು ಕಾನೂನು ನಿಗದಿಗೊಳಿಸಿರುವ ೮ ಗಂಟೆಗಿಂತಲೂ ಹೆಚ್ಚಾಗಿಯೇ ಇರುತ್ತದೆ. ಹೆಚ್ಚಿನ ಕೆಲಸಕ್ಕೆ ಕೂಲಿಯ ಹೆಚ್ಚಳ ಆಗುವಾಗ ೧೦ ಗಂಟೆಗಳ ನಂತರದ ಅವಧಿಯನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುತ್ತದೆ; ಆದ್ದರಿಂದ ಅದರಿಂದ ತಿಂಗಳ ವರಮಾನದಲ್ಲಿ ಅಷ್ಟೇನೂ ಹೆಚ್ಚಿನ ಮೊತ್ತವಿರುವುದಿಲ್ಲ.

ದೆಹಲಿಯ ಆಸುಪಾಸಿನಲ್ಲಿ ಉಡುಪು ರಫ್ತು ಮಾಡುವ ಉದ್ದಿಮೆಯಲ್ಲಿ ದುಡಿಯುವವರ ಬಗ್ಗೆ ಅಧ್ಯಯನ ನಡೆದಿದೆ. ನುರಿತ ಕೆಲಸಗಾರರಲ್ಲಿ ಕೆಲವರನ್ನು ಬಿಟ್ಟರೆ ಯಾರಿಗೂ ಕೆಲಸದ ಕರಾರುಪತ್ರ ನೀಡಲಾಗಿಲ್ಲ. ಕರಾರುಗಳು ಮೂರು ತೆರನವು: (ಅ) ಕೌಶಲ್ಯವುಳ್ಳವರನ್ನು ಖಾಯಂ ನೇಮಕಾತಿ ಮಾಡಿಕೊಂಡು ಕರಾರುಪತ್ರ ನೀಡಲಾಗುವುದು; (ಆ) ಗುತ್ತಿಗೆದಾರರ ಮೂಲಕ ಗುತ್ತಿಗೆ ಆಧಾರದ ಮೇಲೆ ಆಳುಗಳನ್ನು ನೇಮಿಸಿಕೊಳ್ಳುವುದು; ಮತ್ತು (ಇ) ಇಂತಿಷ್ಟು ಕೆಲಸಕ್ಕೆ ಇಂತಿಷ್ಟು ಕೂಲಿಯೆಂಬ ಆಧಾರದ ಮೇಲೆ ಕೆಲಸ ಮುಗಿಸಿದ್ದಕ್ಕೆ ತಕ್ಕಂತೆ ಕೂಲಿ ನೀಡುವುದು. ಮೊದಲನೆಯ ವಿಭಾಗದಲ್ಲಿ ಗಂಡಸರೇ ಹೆಚ್ಚು. ಅವರಿಗೆ ೨೦೦೨ರಲ್ಲಿ ಮಾಸಿಕ ವೇತನ ೩೦೯೧ ರೂ.ಗಳಷ್ಟಿತ್ತು. ಅರೆಕುಶಲಿ ಕೆಲಸಗಾರರಿಗೆ ೨೮೩೩ ರೂ. ಮತ್ತು ಇತರರಿಗೆ ೨೪೯೭ ರೂಪಾಯಿಗಳಷ್ಟಿತ್ತು. ಮಹಿಳೆಯರಲ್ಲಿ ಶೇ. ೪೦ರಷ್ಟು ಮತ್ತು ಪುರುಷರಲ್ಲಿ ಶೇ. ೨೫ರಷ್ಟು ಮಂದಿಗೆ ಮಾಸಿಕ ವೇತನ ೨೦೦೦ ರೂಪಾಯಿಗಳನ್ನು ಮೀರಿರಲಿಲ್ಲ. ೩೫೦೦ ಅಥವಾ ಜಾಸ್ತಿ ಪಡೆಯುತ್ತಿದ್ದವರು ಸುಮಾರು ಶೇ. ೧೩ರಷ್ಟು ಗಂಡಸರು ಮತ್ತು ಶೇ. ೫ರಷ್ಟು ಹೆಂಗಸರು.

ಕೇರಳದ ಎರ್ನಾಕುಲಂಗೆ ಹೋಗಿ ಅಲ್ಲಿಯ ಅಂಗಡಿಗಳಲ್ಲಿ ಕೆಲಸಕ್ಕಿರುವವರನ್ನು ನೋಡಿದರೆ ಮತ್ತೆ ಇದೇ ಕತೆ : ಮಾರಾಟ ಮಾಡುವುದು ಅದೇ ಪದಾರ್ಥ, ಆದರೆ ಹೆಂಗಸರಿಗೆ ಕಡಿಮೆ ಕೂಲಿ. ಅವರು ಬಹುಕಾಲ ಕೆಲಸದಲ್ಲಿ ಉಳಿಯದಿರಬಹುದೆಂಬ ಕಾರಣಕ್ಕೆ ಹೀಗೆ ಮಾಡಲಾಗುತ್ತದೆಯೆಂಬ ವಿವರಣೆ ಕೊಡುತ್ತಾರೆ. ಖಾಯಂ ಎಂದು ಕೆಲಸಕ್ಕೆ ತೆಗೆದುಕೊಂಡಾಗಲೂ ಅವರು 'ಖಾಯಂ' ಆಗಿರುವುದು ಮದುವೆಯಾಗುವವರೆಗೆ ಮಾತ್ರ. ಅವರು ಹೇಗಿದ್ದರೂ ಹಂಗಾಮಿಯೇ ; ಆದ್ದರಿಂದ ಕಡಿಮೆ ಕೂಲಿ ಸಮರ್ಥನೀಯವೆಂದು ಮಾಲಿಕರು ವಾದಿಸುತ್ತಾರೆ. ದುಡಿಮೆಯಲ್ಲಿದ್ದ ಎಷ್ಟೋ ಹೆಂಗಸರಿಗೆ ತಾವೆಷ್ಟು ವರ್ಷ ಕೆಲಸ ಮಾಡಬಹುದೆಂಬ ಕಲ್ಪನೆಯೂ ಇರಲಿಲ್ಲ. ಅವರಿಗೆ ದೊರೆಯುತ್ತಿದ್ದ ಸರಾಸರಿ ಮಾಸಿಕ ವೇತನ ೪೪೮ ರೂಪಾಯಿ. ೧೯೯೧ರಲ್ಲಿ ಈ ಕ್ಷೇತ್ರದಲ್ಲಿ ಕನಿಷ್ಠ ಕೂಲಿ ಎಷ್ಟಿರಬೇಕೆಂಬ ಕಾನೂನು ಮಾಡಲಾಗಿತ್ತು. ಅದರ ಪ್ರಕಾರ ಕೂಲಿ ಕಡಿಮೆಯೆಂದರೆ ೮೮೧ ರೂ. ಇರಬೇಕಾಗಿತ್ತು. ಕಡಿಮೆ ವಯಸ್ಸಿನ ಹೆಂಗಸರು ಅದೇ ವಯಸ್ಸಿನ ಗಂಡಸರ ಕೂಲಿಯ ಶೇ. ೪೯ರಷ್ಟನ್ನು ಪಡೆಯುತ್ತಿದ್ದರು; ಆದರೆ ೪೧-೪೫ ವಯಸ್ಸಿನವರು ಶೇ. ೭೬ರಷ್ಟನ್ನು ಮಾತ್ರವೇ ಪಡೆಯುತ್ತಿದ್ದರು.



ತಮಿಳುನಾಡಿನ ಒಂದೆಡೆ ಮನೆ ಕಟ್ಟುವ ಕೆಲಸದಲ್ಲಿದ್ದವರಾರಿಗೂ ೧೯೯೩ರಲ್ಲಿ ನಿಗದಿಗೊಳಿಸಿದ್ದ ಕನಿಷ್ಠ ಕೂಲಿ ೪೦ ರೂ. ದೊರೆಯುತ್ತಿರಲಿಲ್ಲ. ಹೆಂಗಸರಿಗೆ ೨೦ರಿಂದ ೨೫ ರೂ. ಮತ್ತು ಗಂಡಸರಿಗೆ ೩೦ ರಿಂದ ೩೫ ರೂ. ಮಾತ್ರ ಕೊಡಲಾಗುತ್ತಿತ್ತು. ೧೯೯೭ರಲ್ಲಿ ಒಂದು ಸರ್ವೇಕ್ಷಣೆ ನಡೆಸಲಾಯಿತು. ದೇಶದ ಬೇರೆ ಬೇರೆ ಕಡೆ ೭೭ ಜಾಗಗಳಲ್ಲಿ ಮನೆ ಕಟ್ಟುವ ಕೂಲಿಗಳ ಪರಿಸ್ಥಿತಿಯ ಅಧ್ಯಯನ ಅದು. ಕೆಲಸದಲ್ಲಿದ್ದವರೆಲ್ಲಾ ಬಹುಮಟ್ಟಿಗೆ ಭೂರಹಿತ ವಲಸೆ ಕೆಲಸಗಾರರು, ತಮ್ಮ ಹಳ್ಳಿಗಳನ್ನು ಬಿಟ್ಟುಬಂದಿದ್ದವರು. ಅದೂ ಯಾವನೋ ಮೇಸ್ತ್ರಿಯ ಅಧೀನದಲ್ಲಿರುವ ಸನ್ನಿವೇಶ. ಸುಮಾರು ೯ ರಿಂದ ೧೨ ತಿಂಗಳುಗಳಲ್ಲಿ ತಿಂಗಳಿಗೆ ತಲಾ ೨೫ ದಿನಗಳಂತೆ ಕೂಲಿ ಮಾಡಿದವರೇ ಹೆಚ್ಚು. ಅವರು ಕುಶಲ ಕೆಲಸಗಾರರೆಂಬ ಹಣೆಪಟ್ಟಿ ಪಡೆಯಲು ೧೦ ರಿಂದ ೧೫ ವರ್ಷಗಳು ಬೇಕು. ಆಗ ಅವರ ಕೂಲಿ ಕಾನೂನು ನಿಗದಿಗೊಳಿಸುವ ಮಟ್ಟಕ್ಕಿಂತ ಸ್ವಲ್ಪ ಜಾಸ್ತಿ ಆಗುತ್ತದೆ. ಆಗಲೂ ಸಮಾನ ಕೆಲಸಕ್ಕೆ ಹೆಂಗಸರಿಗೆ ಕಡಿಮೆ ಕೂಲಿಯೇ ಗಟ್ಟಿ. ರಾಷ್ಟ್ರಮಟ್ಟದಲ್ಲಿ ನೋಡಿದರೆ ಮನೆ ಕಟ್ಟುವ ಕೆಲಸದವರಿಗೆ, ಗುತ್ತಿಗೆ ಆಳುಗಳಿಗೆ, ಕಾನೂನಿನಲ್ಲಿ ತಿಳಿಸಲಾಗಿರುವ ವೇತನವಾಗಲಿ ಇತರೆ ಸೌಲಭ್ಯಗಳಾಗಲಿ ಸರ್ವಥಾ ದಕ್ಕುತ್ತಿಲ್ಲ ಎಂಬುದು ಖಚಿತವಾಗುತ್ತದೆ. ತಮಿಳುನಾಡಿನಲ್ಲಿ ಅಸಂಘಟಿತ ದುಡಿಮೆಗಾರರ ಪರಿಸ್ಥಿತಿಯನ್ನು ಅಧ್ಯಯನ ಮಾಡಲು ೧೯೯೮ರಲ್ಲಿ ಒಂದು ಸಮಿತಿಯನ್ನು ರಚಿಸಲಾಗಿತ್ತು. ಕೂಲಿ ಕೊಡುವಲ್ಲಿ ಲಿಂಗ ತಾರತಮ್ಯವು ಆಳವಾಗಿದ್ದಿತೆಂದು ವರದಿ ತಿಳಿಸಿದೆ. ಹಪ್ಪಳ ಮಾಡುವ ಉದ್ದಿಮೆಯಲ್ಲಿ ಸಹ ಮಹಿಳೆಯರಿಗೆ ಪುರುಷರ ಕೂಲಿಯ ಅರ್ಧದಷ್ಟು ಮಾತ್ರ ಸಿಗುತ್ತಿತ್ತು. ಗಂಡಸರಿಗೆ ಹೆಚ್ಚೆಂದರೆ ೪೦ ರೂಪಾಯಿ. ಬೇರೆ ಉದ್ದಿಮೆಗಳಲ್ಲೂ ಇದೇ ಸನ್ನಿವೇಶವಿದ್ದಿತು.

ಇಟ್ಟಿಗೆ ಮಾಡುವ ಉದ್ದಿಮೆಯಲ್ಲಿ ಉನ್ನತ ತಂತ್ರಜ್ಞಾನವೇನೂ ಇಲ್ಲ. ಅಲ್ಲಿ ಸಾವಿರ ಇಟ್ಟಿಗೆಗಳಿಗೆ ಇಷ್ಟು ಕೂಲಿಯೆಂಬ ಲೆಕ್ಕವಿದೆ. ಇಟ್ಟಿಗೆ ಎರಕ ಹೊಯ್ಯುವವನು ತನ್ನ ಕುಟುಂಬದ ಹೆಂಗಸರು, ಮಕ್ಕಳನ್ನು ಮಣ್ಣು ಕಲೆಸಲು, ಇಟ್ಟಿಗೆಯನ್ನು ಬಿಸಿಲಿನಲ್ಲಿ ಒಣಗಿಸಲು ಬಳಸಿಕೊಳ್ಳುತ್ತಾನೆ. ಹರಿಯಾಣದಲ್ಲಿ ಅವನಿಗೆ ೧೦೦೦ ಇಟ್ಟಿಗೆಗಳಿಗೆ ೧೨೧ ರೂ. ದೊರಕುತ್ತಿತ್ತು. ಅದರಲ್ಲಿ ಅವನ ಕುಟುಂಬದವರ ಕೂಲಿಯೂ ಸೇರಿದೆ. ಇಟ್ಟಿಗೆ ಸುಡಲು ತಯಾರಿ ನಡೆಸುವವರು ಮುಂತಾದವರಿಗೆ ೧೦೦೦ ಇಟ್ಟಿಗೆಗಳಿಗೆ ೧೧ ರೂಪಾಯಿ ಮಾತ್ರ ಇದ್ದಿತು. ಇಟ್ಟಿಗೆ ಸುಡುವವರಿಗೆ ತಿಂಗಳಿಗೆ ೨೨೦೦ ರೂ. ದೊರೆಯುತ್ತಿತ್ತು.

ರಾಜಸ್ತಾನದಲ್ಲಿ ಕೋಟದೋರಿಯ ಎಂಬ ಒಂದು ಕೆಲಸವಿದೆ, ನೇಯ್ಗೆಗೆ ಸಂಬಂಧಿಸಿದ್ದು. ಅದರಲ್ಲಿ ಹೆಂಗಸರೇ ಹೆಚ್ಚು. ನೇಯ್ಗೆಯಲ್ಲಿ ಇವರಿದ್ದರೆ ಉಸ್ತುವಾರಿ ನೋಡಿಕೊಳ್ಳುವವನು ಗಂಡಸು. ಹೆಂಗಸರಿಗೆ ಮಾಸಿಕ ವೇತನ ೫೫೪ ರೂ. ಆದರೆ ಉಸ್ತುವಾರಿಯ ಗಂಡಸಿಗೆ ೫೩೪೯ ರೂಪಾಯಿ; ಮಗ್ಗ ರಿಪೇರಿ ಮಾಡುವವನಿಗೆ ೬೦೦ರಿಂದ ೮೦೦ ರೂಪಾಯಿ. ಇಲ್ಲಿ ಶೋಷಣೆಯು ಇನ್ನೊಂದು ರೂಪದಲ್ಲೂ ಕಾಣಸಿಗುತ್ತದೆ: ತಡವಾಗಿ ಕೂಲಿ ಹಣ ಕೊಡುವುದು ಮತ್ತು ಭಾಗಶಃ ಕೊಡುತ್ತಿರುವುದು. ಕೂಲಿ ಕೊಡದೆ ಮಾಲಿಕನಲ್ಲಿ ಉಳಿಯುವ ಹಣವು ಅವನಿಗೆ ಬಂಡವಾಳವಾಗಿ ಉಪಯೋಗಕ್ಕೆ ಬರುತ್ತದೆ. ನಿಗದಿತ ವೇಳೆಗಿಂತಲೂ ಹೆಚ್ಚು ಕೆಲಸ ಮಾಡಿದವರಿಗೆ ಕೊಡಲಾಗುವ ಕೂಲಿಯಲ್ಲಿ ಸರಿಯಾದ ಲೆಕ್ಕಾಚಾರವೇ ಇರುವುದಿಲ್ಲ. ಕೆಲ ವೇಳೆ ಕೆಲಸವೇ ಇಲ್ಲದೆ ಉಳಿಯಬೇಕಾದ ಸನ್ನಿವೇಶವೂ ಇರುತ್ತದೆ. ವಾರಕ್ಕೊಂದು ದಿನ ಕಡ್ಡಾಯವಾದ ರಜೆಯನ್ನು ಕೂಲಿರಹಿತವೆಂದು ಪರಿಗಣಿಸುತ್ತಾರೆ. ಎರಡು ತಿಂಗಳಿಗೊಮ್ಮೆ ಒಂದು ವಾರದಷ್ಟು ಕಾಲ ಹೆಂಗಸರನ್ನು ಕೆಲಸದಿಂದ ಹೊರಗಿಡುವುದೂ ಉಂಟು. ೩೦ ವರ್ಷಗಳಿಗೂ ಹೆಚ್ಚು

ದುಡಿದ ಗಂಡಸರ ಪೈಕಿ ಎಷ್ಟೋ ಮಂದಿಗೆ ಪ್ರಾವಿಡೆಂಟ್ ಸೌಲಭ್ಯವಿಲ್ಲ.

**ಕನಿಷ್ಠ ಕೂಲಿಯ ಕಾನೂನು**

೧೯೪೮ರಲ್ಲಿ ಜಾರಿಗೆ ಬಂದ ಕನಿಷ್ಠ ಕೂಲಿಯ ಕಾನೂನಿನಂತೆ ವಿವಿಧ ದುಡಿಮೆಗಳಿಗೆ ಇಂತಿಷ್ಟು ಕೂಲಿಯೆಂಬ ನಿಯಮವಿದೆ. ಅದು ಎಲ್ಲ ಬಗೆಯ ದುಡಿಮೆಗೂ ಅನ್ವಯವಾಗುವಂಥದು. ಕೂಲಿಯನ್ನು ನಿಗದಿಗೊಳಿಸುವ ಅಧಿಕಾರವು ಆಯಾ ರಾಜ್ಯ ಸರ್ಕಾರಗಳಿಗಿರುತ್ತದೆ. ಈ ಕೂಲಿಯಲ್ಲಿ ಎರಡು ಅಂಗಗಳಿವೆ : (ಅ) ದಿನಕ್ಕೆ ಅಥವಾ ತಿಂಗಳಿಗೆ ಇಂತಿಷ್ಟು ಮೂಲವೇತನ, ಮತ್ತು (ಆ) ವಿಶೇಷ ಭತ್ಯೆ. ಯಾವುದೇ ಉದ್ದಿಮೆಯ ಮೂಲವೇತನವನ್ನು ಕೆಲವು ವರ್ಷಗಳ ಅವಧಿಗೆಂದು ನಿಗದಿಗೊಳಿಸಲಾಗುತ್ತದೆ. ಅದು ಹಳ್ಳಿ-ಪಟ್ಟಣ-ನಗರ ಮುಂತಾಗಿ ಬೇರೆ ಬೇರೆ ಇರುತ್ತದೆ. ವಿಶೇಷ ಭತ್ಯೆಯನ್ನು ಕೆಲಸದ ಸ್ಥಳದ ಆಧಾರದ ಮೇಲೆ ಪ್ರತಿ ಆರು ತಿಂಗಳಿಗೊಮ್ಮೆ ಮರುಪರಿಶೀಲನೆ ಮಾಡುತ್ತಿರಬೇಕು. ಅಂತೆಯೇ, ಮೂಲ ವೇತನವೂ ಆಗಾಗ್ಗೆ ಹೆಚ್ಚುತ್ತಿರಬಹುದು.

ಕನಿಷ್ಠ ಕೂಲಿ ಎಷ್ಟಿರಬೇಕೆಂದು ನಿರ್ಧರಿಸುವ ಹಾಗೂ ಅದನ್ನು ಪರಿಷ್ಕರಿಸುವ ಬಗೆಯನ್ನು ಶಾಸನವು ಸ್ಪಷ್ಟವಾಗಿ ನಿರ್ದೇಶಿಸಿಲ್ಲ. ಸರ್ಕಾರಗಳು ಅದಕ್ಕಾಗಿ ಸಮಿತಿಗಳನ್ನು ನೇಮಿಸಬೇಕು ಅಥವಾ ಶಿಫಾರಸು ಮಾಡುವ ಸಂಬಳಗಳ ಪಟ್ಟಿಯನ್ನು ಅಧಿಕೃತವಾಗಿ ಪ್ರಕಟಿಸಿ ಅದರ ಫಲಾನುಭವಿಗಳಿಂದ ಪ್ರತಿಕ್ರಿಯೆಗಳನ್ನು ಪಡೆಯಬೇಕೆಂದು ಶಾಸನವು ಹೇಳುತ್ತದೆ. ತರಬೇತಿಯಲ್ಲಿರುವವರ ಸಂಬಳ ನಿಗದಿಗೊಳಿಸಲು ೧೯೬೧ರ ಶಾಸನವೊಂದಿದೆ. ಆಯಾ ವಿಭಾಗದ ಕುಶಲ ಕೆಲಸಗಾರರ ವೇತನದ ಶೇ. ೭೫ ರಷ್ಟಾದರೂ ಈ ತರಬೇತಿ ಪಡೆಯುವವರಿಗೆ ಕೊಡಬೇಕೆಂಬ ನಿಯಮವಿದೆ. ಕನಿಷ್ಠ ಕೂಲಿ ಶಾಸನವು ಔಪಚಾರಿಕ ಮತ್ತು ಅನೌಪಚಾರಿಕ, ಹೀಗೆ ಎರಡೂ ಕ್ಷೇತ್ರಗಳಿಗೆ ಅನ್ವಯಿಸುತ್ತದೆ. ಅಂತಹ ಕೆಲಸಗಳು ಯಾವುವೆಂಬುದರ ೨೦೦೨ರ ಪಟ್ಟಿಯಲ್ಲಿ ೪೭ ಸೇರ್ಪಡೆಯಾಗಿದ್ದವು. ಅದೇ ವರ್ಷದಲ್ಲಿ ತಮಿಳುನಾಡು ೯೦ನ್ನೂ ಮಣಿಪುರ ೧೫ನ್ನೂ ಹೆಸರಿಸಿದ್ದವು. ಎರಡನೆಯ ರಾಷ್ಟ್ರೀಯ ದುಡಿಮೆ ಆಯೋಗವು ಈ ಶಾಸನವನ್ನು ಸಮರ್ಥಿಸುತ್ತಾ ''ಮಾರುಕಟ್ಟೆಯ ಶಕ್ತಿಗಳು, ಬೇಡಿಕೆ ಮತ್ತು ಪೂರೈಕೆಯ ನಿಯಮ ಇತ್ಯಾದಿಗಳು ಉದ್ದಿಮೆಗಳಲ್ಲಿ ದುಡಿಯುವವರ ಸಂಬಳಗಳನ್ನು ಕಡಿತಮಾಡದಿರುವಂತೆ ನೋಡಿಕೊಳ್ಳಲು ಇದು ಅಗತ್ಯ'' ಎಂದು ಹೇಳಿತ್ತು. ಮಾಲಿಕನಿಗೆ ಏನೇ ತೊಂದರೆಯಿರಲಿ ಕನಿಷ್ಠ ಕೂಲಿಯನ್ನು ಕೊಡಲೇಬೇಕೆಂಬ ನಿಯಮವನ್ನು ಉಲ್ಲಂಘಿಸುವುದು ಬಲಾತ್ಕಾರದಿಂದ ದುಡಿಮೆ ಮಾಡಿಸುವುದಕ್ಕೆ ಸಮವೆಂದು ಸರ್ವೋಚ್ಚ ನ್ಯಾಯಾಲಯವು ೧೯೮೨ರಲ್ಲಿ ಒಂದು ತೀರ್ಪು ಕೊಟ್ಟಿತ್ತು. ಇಂತಹ ಬಲಾತ್ಕಾರವು ಸಂವಿಧಾನದ ೨೩ನೆಯ ವಿಧಿಯ ಉಲ್ಲಂಘನೆಯಾಗುತ್ತದೆ. ಕನಿಷ್ಠ ಕೂಲಿ ಶಾಸನವು ದುಡಿಮೆಗಾರರ ದುಡಿಮೆಯ ಕಾಲಾವಧಿ, ಹೆಚ್ಚುವರಿ ಕೆಲಸಕ್ಕೆ ಕೂಲಿ, ರಜೆ ಇತ್ಯಾದಿಗಳ ಸಂದರ್ಭದಲ್ಲಿ ದೊರೆಯುವ ಸೌಲಭ್ಯ ಇತ್ಯಾದಿಗಳನ್ನು ನಿಗದಿಗೊಳಿಸಿದೆ. ದಿನಕ್ಕೆ ೯ ಗಂಟೆಗಳನ್ನು ಮೀರದ ಕೆಲಸ ಮತ್ತು ಅದರಲ್ಲಿ ಮಧ್ಯೆ ೩೦ ನಿಮಿಷಗಳ ವಿರಾಮ ನಿಗದಿಯಾಗಿದೆ. ಆ ಅವಧಿಯನ್ನು ಮೀರಿ ದುಡಿಸಿಕೊಂಡರೆ ಕೂಲಿಯ ಎರಡರಷ್ಟು ಮೊಬಲಗನ್ನು ಕೊಡಬೇಕು.

ಈ ಶಾಸನವು ಕೆಲವು ವಿಧದ ದುಡಿಮೆಗೆ ಮಾತ್ರ ಅನ್ವಯಿಸುವುದರಿಂದ ಎಲ್ಲ ದುಡಿಮೆಗಾರರೂ ಅದರ ಪರಿಧಿಗೆ ಬರುವುದಿಲ್ಲ. ಆಯಾ ರಾಜ್ಯ ಸರ್ಕಾರಗಳು ಯಾವುದಾದರೂ ದುಡಿಮೆಯನ್ನು ಪಟ್ಟಿಗೆ ಸೇರಿಸದಿದ್ದರೆ ಅಂತಹ ದುಡಿಮೆಗಾರರಿಗೆ ಯಾವ ಶಾಸನವೂ ಅನ್ವಯವಾಗುವುದಿಲ್ಲ. ಅನೇಕ ಅಧ್ಯಯನಗಳಿಂದ ತಿಳಿದುಬಂದಿರುವಂತೆ ಈ ಶಾಸನವು ಬಡ ಮತ್ತು ಅನೌಪಚಾರಿಕ ಕ್ಷೇತ್ರಗಳ ದುಡಿಮೆಗಾರರಿಗೆ ಯಾವ ಪ್ರಯೋಜನವನ್ನೂ ತಂದುಕೊಟ್ಟಿಲ್ಲ. ಎಷ್ಟೋ ರಾಜ್ಯಗಳು ನಿಗದಿಗೊಳಿಸಿರುವ ಕನಿಷ್ಠ ಕೂಲಿಯು ಬಡತನ ರೇಖೆಗಿಂತಲೂ ಕೆಳಗಿರುತ್ತದೆ. ಒಂದು ಕುಟುಂಬದಲ್ಲಿ ಮೂರು ಜನರಿದ್ದಾರೆಂಬ ಲೆಕ್ಕವನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಶಾಸನವು ಹೇಳಿದ್ದರೂ ರಾಜ್ಯ ಸರ್ಕಾರಗಳು ಅದನ್ನು ಗಾಳಿಗೆ ತೂರಿ ವೇತನ ನಿಗದಿಗೊಳಿಸಿವೆ. ಕಾಲಕಾಲಕ್ಕೆ ಏರುಪೇರಾಗುವ ಮಾರುಕಟ್ಟೆಯ ದರಗಳಿಂದಾಗಿ ಕನಿಷ್ಠ ವೇತನವು ಅರ್ಥ ಕಳೆದುಕೊಂಡಿದೆ. ಶಾಸನದಲ್ಲಿಯೇ ನ್ಯೂನತೆಗಳು ತುಂಬಿರುವುದು ಇಡೀ ಪ್ರಶ್ನೆಯನ್ನು ಇನ್ನೂ ಜಟಿಲಗೊಳಿಸಿದೆ. ಅಹಮದಾಬಾದಿನಂತಹ ನಗರದಲ್ಲಿ ಅಸಂಘಟಿತ ದುಡಿಮೆಗಾರರಲ್ಲಿ ಕೇವಲ ಶೇ. ೩೦ರಷ್ಟು ಮಂದಿ ಕನಿಷ್ಠ ಕೂಲಿ ಶಾಸನದಡಿ ಬರುತ್ತಾರೆಂದರೆ ಈ ಸಮಸ್ಯೆಯ ಗಹನತೆಯು ಸ್ಪಷ್ಟವಾಗುತ್ತದೆ. ಒಂದೇ ರಾಜ್ಯದಲ್ಲಿ, ಒಂದೇ ದುಡಿಮೆಗೆ, ಕೂಲಿಯ ಪ್ರಮಾಣದಲ್ಲಿ ವ್ಯತ್ಯಾಸಗಳಿವೆ; ಬೇರೆ ರಾಜ್ಯಗಳಿಗೆ ಹೋಲಿಸಿದಾಗ ಈ ವ್ಯತ್ಯಾಸದ ಪ್ರಮಾಣವು ಹೆಚ್ಚು ಅಥವಾ ಕಮ್ಮಿ ಆಗುತ್ತಿರುತ್ತದೆ. ಬೇರೆ ಬೇರೆ ದುಡಿಮೆಗಳಿಗೆ ಸಂಬಂಧಿಸಿದಂತೆ ಹಲವು ರಾಜ್ಯಗಳಲ್ಲಿ ಕೂಲಿಯ ಪ್ರಮಾಣದಲ್ಲಿ ಗಣನೀಯ ವ್ಯತ್ಯಾಸಗಳಿರುವುದು ಕಂಡುಬಂದಿದೆ. ಉದಾಹರಣೆಗೆ, ತಮಿಳುನಾಡಿನಲ್ಲಿ ಕನಿಷ್ಠ ೫೪ ಮತ್ತು ಗರಿಷ್ಠ ೧೧೦ ಎಂದು ೨೦೦೩ರಲ್ಲಿ ನಿಗದಿಗೊಳಿಸಲಾಗಿತ್ತು. ಕನಿಷ್ಠ ಕೂಲಿಯಲ್ಲೂ ಇಷ್ಟೊಂದು ವ್ಯತ್ಯಾಸವಿರುವುದು ವಿಚಿತ್ರವೆನಿಸುತ್ತದೆ.


ಗಾರ್ಮೆಂಟ್ಸ್ ಮಹಿಳೆಯರು

ಕನಿಷ್ಠ ಕೂಲಿಯ ನಿಯಮಕ್ಕೆ ಹೊರತಾದ್ದು ನಿರ್ದಿಷ್ಟ ಕೆಲಸಗಳಿಗೆಂದೇ ಗೊತ್ತುಮಾಡಲಾಗುವ ಕೂಲಿಯ ದರ. ಅದು ಇಷ್ಟು ಕೆಲಸಕ್ಕೆ ಇಷ್ಟು ಎಂದೋ, ಇಷ್ಟು ವೇಳೆಯ ದುಡಿಮೆಗೆ ಇಷ್ಟು ಎಂದೋ ಇರುತ್ತದೆ. ಅದು ಯಾವುದೇ ಉದ್ದಿಮೆಯಲ್ಲೂ ಚಾಲ್ತಿಯಲ್ಲಿರಲು ಸಾಧ್ಯ. ಆದರೆ ಕೆಲವು ಉದ್ದಿಮೆಗಳಲ್ಲಿ ಅದು ಹೆಚ್ಚು. ವೇಳೆಯ ಮತ್ತು ನಿರ್ದಿಷ್ಟ ಕೆಲಸದ ಲೆಕ್ಕ ಎರಡೂ ಇರುವೆಡೆ ಸಾಮಾನ್ಯವಾಗಿ ಗಂಡಸರಿಗೆ ವೇಳೆಯ ಲೆಕ್ಕದಲ್ಲಿ ನೇಮಕಾತಿಯಾಗಿರುತ್ತದೆ. ಉಚ್ಚಮಟ್ಟದ ಕೌಶಲ್ಯ ಮತ್ತು ಶಿಕ್ಷಣದ ಅಗತ್ಯವಿರುವಂತಹ ದುಡಿಮೆಗಳಲ್ಲಿ ಬಹುಮಟ್ಟಿಗೆ ವೇಳೆಯ ಲೆಕ್ಕಕ್ಕೆ ಪ್ರಾಧಾನ್ಯವಿರುತ್ತದೆ. ಯಾವಾಗಲೂ ಕೌಶಲ್ಯವೇ ಕೂಲಿಯ ಮಟ್ಟವನ್ನು ನಿರ್ಧರಿಸುತ್ತದೆಂದೇನೂ ಹೇಳಲಾಗದು. ಉದಾಹರಣೆಗೆ, ಚರ್ಮೋದ್ಯಮಗಳಲ್ಲಿ ಕುಶಲಕರ್ಮಿಗಳು ವೇಳೆ ಹಾಗೂ ನಿರ್ದಿಷ್ಟ ಕೆಲಸವೆಂಬ ಎರಡೂ ಆಧಾರಗಳಲ್ಲಿ ನೇಮಕಗೊಂಡಿರುತ್ತಾರೆ. ಆದರೆ ಈ ಉದ್ಯಮದಲ್ಲಿರುವ ಕೌಶಲ್ಯರಹಿತ ದುಡಿಮೆಗಾರರು ಬಹುಮಟ್ಟಿಗೆ ವೇಳೆಯಾಧಾರಿತ ಕೂಲಿಯನ್ನೇ ಪಡೆಯುತ್ತಾರೆ.

(ಮುಂದುವರಿಯುತ್ತದೆ)

**ಬಂಡವಾಳ**

'ಶೂನ್ಯ ಬಂಡವಾಳ'ದ
ನೈಸರ್ಗಿಕ ಕೃಷಿಯಂತೆ !
ಹಲವರದು
ನೈಸರ್ಗಿಕವಾದ
'ಬಂಡವಾಳವಿಲ್ಲದ ಬಡಾಯಿ'
(ಕೆಲವರದು ಭಂಡವಾಳ)

**ಆತ್ಮ**

ಹಕ್ಕಿಗಳೆಂದರೆ,
ಗಡಿಗೆರೆಗಳಿಲ್ಲದ
ಆಗಸದಲ್ಲಿ ಹಾರುವ
ಆತ್ಮಗಳು !

ಸಿ.ಪಿ.ಕೆ.
ಮೈಸೂರು

## ಸಾಮ್ರಾಜ್ಯಶಾಹಿಗಳ ಛಿದ್ರೀಕರಣ ರಾಜಕೀಯ

ಸೆರ್ಬಿಯದ ರಾಜಧಾನಿ ಬೆಲ್ಗ್ರೇಡಿನಲ್ಲಿರುವ ಅಮೆರಿಕದ ರಾಯಭಾರಿ ಕಚೇರಿಗೆ ಬೆಂಕಿ ಬಿತ್ತು ಕೆಲದಿನಗಳ ಹಿಂದೆ. ಸೆರ್ಬಿಯದ ವಿದ್ಯಾರ್ಥಿಗಳು ಪ್ರತಿಭಟನಾಪ್ರದರ್ಶನ ನಡೆಸಿದಾಗ ಈ ಘಟನೆ ಸಂಭವಿಸಿತು. ಒಡನೆಯೇ ಅಮೆರಿಕದ ವಿದೇಶಾಂಗ ಖಾತೆಯ ಅಧಿಕಾರಿಗಳು ಘಟನೆಯನ್ನು ಖಂಡಿಸಿದರು. ಅಂತಾರಾಷ್ಟ್ರೀಯ ನಿಯಮಗಳ ಉಲ್ಲಂಘನೆ ಎಂದು ಬೊಬ್ಬೆ ಹಾಕಿದರು. ವಿಪರ್ಯಾಸ ಎಂದರೆ ವಿದ್ಯಾರ್ಥಿಗಳು ಪ್ರತಿಭಟಿಸುತ್ತಿದ್ದುದು ಅಮೆರಿಕ ಎಲ್ಲ ಅಂತರರಾಷ್ಟ್ರೀಯ ನಿಯಮಗಳನ್ನು ಉಲ್ಲಂಘಿಸಿ ಕೊಸೊವೋ ಸ್ವತಂತ್ರ ರಾಷ್ಟ್ರ ಎಂದು ಘೋಷಿಸಿಕೊಂಡಿದ್ದ ಪ್ರತ್ಯೇಕವಾದಿಗಳನ್ನು ಮಾನ್ಯಮಾಡಿ, ನೀಡಿದ ಬೆಂಬಲಕ್ಕೆ ವಿರೋಧವಾಗಿ.

ಮೊದಲೇ ತುಂಡರಿದಿದ್ದ ಯುಗೋಸ್ಲಾವಿಯವನ್ನು ಮತ್ತಷ್ಟು ತುಂಡರಿಸಿ ದುರ್ಬಲಗೊಳಿಸಲು ಅಮೆರಿಕ ಮತ್ತು ನ್ಯಾಟೋ ಕೂಟದ ರಾಷ್ಟ್ರಗಳು ನಡೆಸಿರುವ ಸಂಚು ಇದು : ಏಕಾಏಕಿಯಾಗಿ ಸೆರ್ಬಿಯಾದ ಪ್ರತ್ಯೇಕವಾದಿಗಳ ಸ್ವಾತಂತ್ರ್ಯ ಘೋಷಣೆಗೆ ಮಾನ್ಯತೆ ನೀಡಿದ್ದು. ಈ ಘಟನೆ ಅಂತಾರಾಷ್ಟ್ರೀಯ ಸಂಬಂಧಗಳಲ್ಲಿ ಹೊಸ ಅಪಾಯಕಾರಿ ಅಧ್ಯಾಯವನ್ನು ತೆರೆಯಲಿದೆ. ಅಲ್ಲದೆ, ಎಲ್ಲೆಲ್ಲೂ ಪ್ರತ್ಯೇಕವಾದಿ ಗುಂಪುಗಳಿಗೆ ಪ್ರೋತ್ಸಾಹ ನೀಡುವುದಾಗಿದೆ. ಅಗತ್ಯವಿದ್ದಾಗ ಅವನ್ನು ಬಳಸಿಕೊಂಡು ರಾಷ್ಟ್ರಗಳನ್ನು ತುಂಡರಿಸುವ ಕುತಂತ್ರವಾಗಿದೆ. ಈ ಸಂದರ್ಭದಲ್ಲಿ ರಷ್ಯಾದ ಅಧ್ಯಕ್ಷ ಪುತಿನ್ ಕೊಸೊವೊಗೆ ಅಮೆರಿಕ ಮತ್ತು ನ್ಯಾಟೋಗಳು ನೀಡಿರುವ ಮಾನ್ಯತೆ ಇಡೀ ಅಂತಾರಾಷ್ಟ್ರೀಯ ಸಂಬಂಧಗಳಿಗೆ ಬಲವಾದ ಪೆಟ್ಟು ನೀಡುವುದಲ್ಲದೆ, ಭಯಂಕರ ದೃಷ್ಟಾಂತವಾಗುತ್ತದೆ ಎಂದು ಹೇಳಿರುವುದು ಗಮನಾರ್ಹ. ಕೊಸೊವೊ ಸೆರ್ಬಿಯಾದ ಒಂದು ಪ್ರಾಂತ. ಸುಮಾರು ಎರಡು ಮಿಲಿಯನ್ ಜನಸಂಖ್ಯೆಯನ್ನು ಹೊಂದಿರುವ ಇದು ಆಲ್ಬೇನಿಯದ ಗಡಿಯಲ್ಲಿದೆ. ಇಲ್ಲಿನ ಶೇ. ೮೫ರಷ್ಟು ಜನ ಆಲ್ಬೇನಿಯ ಮೂಲದವರು. ಪ್ರತ್ಯೇಕವಾದಿಗಳಿಗೆ ಅಮೆರಿಕ ಮತ್ತು ಪಶ್ಚಿಮ ಯೂರೋಪಿನ ರಾಷ್ಟ್ರಗಳು ಮೊದಲಿನಿಂದಲೂ ಬೆಂಬಲ ನೀಡುತ್ತಿದ್ದುವು. ಆಯಕಟ್ಟಿನ ಈ ಪ್ರದೇಶದಲ್ಲಿ ಅಮೆರಿಕದ ಸೈನ್ಯವನ್ನು ತಂದಿರಿಸುವುದೇ ಗುರಿ.

ಯುಗೋಸ್ಲಾವಿಯ ರಾಷ್ಟ್ರ ಅಸ್ತಿತ್ವಕ್ಕೆ ಬಂದದ್ದು ಮೊದಲನೆ ಮಹಾಯುದ್ಧಾನಂತರ ೧೯೧೮ರಲ್ಲಿ. ಸ್ಲೋವೇನಿಯ, ಕ್ರೋಷಿಯ ಮತ್ತು ಸೆರ್ಬಿಯ ಮೂರು ರಾಜ್ಯಗಳು ಒಂದುಗೂಡಿ ಸ್ವತಂತ್ರರಾಷ್ಟ್ರವೊಂದನ್ನು ಸ್ಥಾಪಿಸಿಕೊಂಡವು. ೧೯೨೯ರಲ್ಲಿ ಈ ಒಕ್ಕೂಟವನ್ನು ಯುಗೋಸ್ಲಾವಿಯ ಎಂದು ಕರೆಯಲಾಯಿತು. ಎರಡನೇ ಮಹಾಯುದ್ಧದ ಕಾಲದಲ್ಲಿ ಅದು ನಾಜಿಗಳ ಆಕ್ರಮಣಕ್ಕೀಡಾಗಿತ್ತು. ನಾಜಿ ದುರಾಕ್ರಮಣಕಾರರ ವಿರುದ್ಧ ಹೋರಾಟದಲ್ಲಿ ಯುಗೋಸ್ಲಾವಿಯ ಅಗ್ರಸ್ಥಾನದಲ್ಲಿತ್ತು. ಯುದ್ಧಾನಂತರದ ಕಾಲದಲ್ಲಿ ಯುಗೋಸ್ಲಾವಿಯ ಮಾರ್ಷಲ್ ಟೀಟೋ ನೇತೃತ್ವದಲ್ಲಿ ಸಾಕಷ್ಟು ಪ್ರಗತಿ ಸಾಧಿಸಿತು. ಶೀತಲಯುದ್ಧ ಕಾಲದಲ್ಲಿ ಯಾವ ಬಣಕ್ಕೂ ಸೇರದೆ ಆಲಿಪ್ತ ನೀತಿಯನ್ನು ತಳೆದ ಏಕೈಕ ಯುರೋಪಿಯನ್ ರಾಷ್ಟ್ರ ಯುಗೋಸ್ಲಾವಿಯ. ಆಲಿಪ್ತ ಚಳವಳಿಯ ಸ್ಥಾಪಕ ರಾಷ್ಟ್ರಗಳಲ್ಲೊಂದಾಗಿ ಅದರ ಬಲವರ್ಧನೆಗಾಗಿ ಶ್ರಮಿಸಿದ ರಾಷ್ಟ್ರ ಅದು. ಅರವತ್ತು ವರ್ಷಗಳ ಕಾಲ ಒಂದಾಗಿದ್ದ ಯುಗೋಸ್ಲಾವಿಯ ಟೀಟೋ ನಿಧನಾನಂತರ ೧೯೯೦ರಲ್ಲಿ ಛಿದ್ರಗೊಂಡಿತು. ಕ್ರೋಷಿಯ, ಸ್ಲೋವೇನಿಯ, ಸೆರ್ಬಿಯ ಮತ್ತು ಬೋಸ್ನಿಯ ಎಂದುದಾಗಿ ನಾಲ್ಕು ಹೋಳಾಯಿತು. ಈ ವಿಭಜನೆ ಯುರೋಪಿನ ಇತಿಹಾಸದಲ್ಲಿ ಒಂದು ದೊಡ್ಡ ದುರಂತ. ಸಾಕಷ್ಟು ರಕ್ತಪಾತವೂ ಆಯಿತು. ನ್ಯಾಟೋ ಕೂಟದ ಸೇನೆ ಈ ಭೂಭಾಗದಲ್ಲಿ ಬಾಂಬಿನ ಮಳೆಗರೆದದ್ದನ್ನು ಅಲ್ಲಿನ ಜನತೆ ಮರೆತಿಲ್ಲ. ಮತ್ತೆ ೧೯೯೯ರಲ್ಲಿ ನ್ಯಾಟೋಕೂಟ ಕೊಸೊವೊ ಆಕ್ರಮಿಸಿಕೊಂಡು ಸೆರ್ಬಿಯದ ಮೇಲೆ ಹನ್ನೊಂದು ದಿನಗಳ ಬಾಂಬು ದಾಳಿ ನಡೆಸಿದ್ದುಂಟು. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಮಧ್ಯ ಪ್ರವೇಶದಿಂದಾಗಿ ಕೊಸೊವೊ ಸೆರ್ಬಿಯದ ಅವಿಚ್ಛಿನ್ನ ಭಾಗ ಎಂದು ದೃಢಪಟ್ಟಿತು. ಆದರೆ ಈಗ ೨೦೦೮ರಲ್ಲಿ ಕೊಸೊವೊದ ಸ್ವಾತಂತ್ರ್ಯ ಘೋಷಣೆಗೆ ಅಮೆರಿಕ ಮತ್ತು ನ್ಯಾಟೋ ಕೂಟ ಮಾನ್ಯತೆ ನೀಡಿವೆ.

ಅಂತಾರಾಷ್ಟ್ರೀಯ ರಂಗದಲ್ಲಿ ಇದು ಅತ್ಯಂತ ಅಪಾಯಕಾರಿ ಬೆಳವಣಿಗೆ. ಅಮೆರಿಕದಂಥ ಪ್ರಬಲ ರಾಷ್ಟ್ರಗಳು ಬೇಕೆನಿಸಿದಾಗ ಪ್ರತ್ಯೇಕವಾದಿಗಳೊಂದಿಗೆ ಶಾಮೀಲಾಗಿ ರಾಷ್ಟ್ರಗಳನ್ನು ತುಂಡರಿಸಲು ಪರವಾನಗಿ ದೊರೆತಂತಾಗುತ್ತದೆ. ಹಾಗಾಗಿ ಕೊಸೊವೊ ಸ್ವಾತಂತ್ರ್ಯಕ್ಕೆ ಮಾನತೆ ನೀಡಿರುವ ಅಮೆರಿಕ ಮತ್ತು ನ್ಯಾಟೋ ರಾಷ್ಟ್ರಗಳ ನೀತಿ ಖಂಡನಾರ್ಹ. ಭಾರತ ಸರಕಾರ ಒಡನೆಯೇ ಈ ಕೃತ್ಯವನ್ನು ಖಂಡಿಸಿ, ಕೊಸೊವೊ ಸೆರ್ಬಿಯದ ಭಾಗವೆಂದು ಮಾನ್ಯಮಾಡುವಂತೆ ವಿಶ್ವಸಂಸ್ಥೆಯ ಮೇಲೆ ಒತ್ತಡ ತರುವುದು ಅಗತ್ಯ. ಭಾರತೀಯರಾದ ನಾವು ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಈ ಅನೀತಿಯ ರಾಜಕೀಯ ಪರಿಣಾಮಗಳನ್ನು ಅರ್ಥಮಾಡಿಕೊಳ್ಳುವುದು ಮುಖ್ಯವಾಗುತ್ತದೆ. ಪ್ರತ್ಯೇಕವಾದಿಗಳಿಗೆ ಅನೇಕ ಕಡೆಗಳಲ್ಲಿ ಕುಮ್ಮಕ್ಕು ನೀಡುತ್ತಿರುವ ಅಮೆರಿಕ ಅದಕ್ಕೆ ಅನುಕೂಲವಾಗುವಂತಿದ್ದರೆ ಏನು ಮಾಡಲೂ ಸಿದ್ಧವಾಗಿರುತ್ತದೆ. ಭಾರತ ಸ್ವತಂತ್ರಗೊಂಡಾಗ ಹೈದರಾಬಾದ್ ಸಂಸ್ಥಾನದ ಸೇರ್ಪಡೆಗೆ ಕಾರ್ಯಾಚರಣೆ ತಡವಾಗಿದ್ದರೆ ತುಂಬಾ ತೊಡಕಾಗುತ್ತಿತ್ತು. ಆದ್ದರಿಂದಲೇ ಅಂದು ಶೀಘ್ರ ಕಾರ್ಯಾಚರಣೆ ಕೈಗೊಂಡದ್ದು. ಕಾಶ್ಮೀರದ ವಿಚಾರದಲ್ಲಿ ಮೊದಲಿನಿಂದಲೂ ಅಮೆರಿಕ ಅನುಸರಿಸಿರುವ ನೀತಿಯನ್ನು ನೆನಪಿನಲ್ಲಿರಿಸಿಕೊಳ್ಳಬೇಕು. ಹಾಗೆಯೇ ಗೋವಾ ಮತ್ತು ಪಾಂಡಿಚೇರಿ ಸ್ವಾಸ್ಥ್ಯಗಳ ವಿಚಾರವೂ ಕೂಡ. ಅಮೆರಿಕ ಆಗ ಸಾಕಷ್ಟು ನಮಗೆ ಕಿರುಕುಳ ನೀಡಿತ್ತು. ಅಂದು ಅಂತಾರಾಷ್ಟ್ರೀಯ ವಿದ್ಯಮಾನಗಳಲ್ಲಿ ಸೋವಿಯೆತ್ ಒಕ್ಕೂಟ ಪ್ರಬಲವಾಗಿದ್ದುದರಿಂದ ಅಮೆರಿಕಾಗೆ ನಿರ್ಬಂಧವಿತ್ತು. ಈಗಿನಂತಿದ್ದರೆ ಅಮೆರಿಕ ಹದ್ದು ಮೀರಿ ವರ್ತಿಸುತ್ತಿತ್ತು. ಈಗಿನಿಂದಲೇ ಎಚ್ಚರವಹಿಸದಿದ್ದರೆ ಮುಂದೆ ಅಮೆರಿಕ ಏನು ಬೇಕಾದರೂ ಮಾಡಬಹುದು. ವಿಶ್ವಸಂಸ್ಥೆಯ ಅಭಿಮತಕ್ಕೆ ಅಮೆರಿಕ ಮತ್ತು ನ್ಯಾಟೋ ಕಿಂಚಿತ್ತೂ ಕಿಮ್ಮತ್ತು ನೀಡುತ್ತಿಲ್ಲ. ೧೯೯೯ರಲ್ಲಿ ವಿಶ್ವಸಂಸ್ಥೆಯ ಅನುಮತಿ ಇಲ್ಲದೆ ಯುಗೋಸ್ಲಾವಿಯದ ಮೇಲೆ ಬಾಂಬು ದಾಳಿ ನಡೆಸಿರುವುದು, ೨೦೦೩ರಲ್ಲಿ ಇರಾಕಿನ ಮೇಲೆ ಯುದ್ಧ ನಡೆಸಿದ ಅಮೆರಿಕ, ಈಗ ಕೊಸೊವೊ ಪ್ರತ್ಯೇಕವಾದಕ್ಕೆ ಕುಮ್ಮಕ್ಕು ನೀಡಿದೆ.

## ಪಾಕಿಸ್ತಾನ ಪ್ರಜಾಪ್ರಭುತ್ವದ ಭವಿಷ್ಯ ?

ಪಾಕಿಸ್ತಾನದಲ್ಲಿ ಚುನಾಯಿತ ಸರಕಾರ ಅಸ್ತಿತ್ವಕ್ಕೆ ಬರುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ. ಸರ್ವಾಧಿಕಾರಿ ಮುಷರಫ್ ಪಕ್ಷವನ್ನು ತಿರಸ್ಕರಿಸಿದ ಪಾಕಿಸ್ತಾನದ ಜನತೆ ಪ್ರಜಾಪ್ರಭುತ್ವದ ಪರವಾಗಿ ಮತ ನೀಡಿದ್ದಾರೆ. ಹಿಂಸಾಚಾರದ, ಮೂಲಭೂತವಾದಿಗಳ ಅಟ್ಟಹಾಸದ, ಸರ್ವಾಧಿಕಾರದ ನೆರಳಿನಲ್ಲಿ ನಡೆದ ಚುನಾವಣೆಗಳಲ್ಲಿ ಹೆಚ್ಚು ಸ್ಥಾನಗಳನ್ನು ಪಡೆದಿರುವ ಪಾಕಿಸ್ತಾನ್ ಪೀಪಲ್ಸ್ ಪಾರ್ಟಿ ಮತ್ತು ಪಾಕಿಸ್ತಾನ್ ಮುಸ್ಲಿಮ್ ಲೀಗ್ (ನವಾಜ್) ಸಮ್ಮಿಶ್ರ ಸರಕಾರದ ನಡವಳಿಕೆಯ ಮೇಲೆ ಪ್ರಜಾಪ್ರಭುತ್ವದ ಅಳಿವು ಉಳಿವು ಅವಲಂಬಿಸಿದೆ. ಒಂದು ರಾಷ್ಟ್ರವಾಗಿ ಪಾಕಿಸ್ತಾನದ ಅಸ್ತಿತ್ವವೂ ನಿರ್ಧಾರವಾಗುತ್ತದೆ. ಚುನಾವಣೆಗಳಿಗೆ ಮುಂಚೆ ಹಾಗೂ ಆನಂತರವೂ ಮುಂದುವರಿದಿರುವ ಭಯೋತ್ಪಾದನಾ ಕೃತ್ಯಗಳು, ಉದಾಹರಣೆಗೆ, ಈಚೆಗೆ ಲಾಹೋರಿನಲ್ಲಿ ಜರುಗಿದ ಇಪ್ಪತ್ತೈದು ಜನರನ್ನು ಆಹುತಿ ತೆಗೆದುಕೊಂಡ ಆಸ್ಫೋಟಗಳು, ಮುಂದಿನ ಹಾದಿ ಸುಗಮವಲ್ಲ ಎಂಬುದನ್ನು ಸೂಚಿಸಿವೆ. ಸರಕಾರದ ರಚನೆಯಲ್ಲಿ ತೋರಿರುವ ಮುತ್ಸದ್ದಿತನವನ್ನೇ ಈ ಪಕ್ಷಗಳ ನಾಯಕರು ಸರಕಾರ ನಡೆಸುವುದರಲ್ಲಿ ತೋರಿದರೆ ಸಾರ್ಥಕವಾದೀತು.

ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವದ ಸ್ಥಿರತೆ ಚುನಾಯಿತ ರಾಜಕೀಯ ಪಕ್ಷಗಳ ಪ್ರತಿನಿಧಿಗಳಿಗಿಂತ ಹೆಚ್ಚಾಗಿ ಪಾಕಿಸ್ತಾನದ ಸೇನೆ ಮತ್ತು ಅಮೆರಿಕದ ಮರ್ಜಿಯ ಮೇಲೆ ನಿಂತಿದೆ. ಪಾಕಿಸ್ತಾನ್ ಪೀಪಲ್ಸ್ ಪಾರ್ಟಿಯ ನಾಯಕಿ ಬೆನಜಿರ್ ಭುಟ್ಟೋ ಹಾಗೂ ಪಾಕಿಸ್ತಾನ್ ಮುಸ್ಲಿಮ್ ಲೀಗ್ ನಾಯಕ ನವಾಜ ಷರೀಫ್ ಆಗಮನಕ್ಕೆ ಅನುವು ಮಾಡಿಕೊಟ್ಟಿದ್ದರಿಂದ ಹಿಡಿದು ಸರಕಾರದ ರಚನೆಯವರೆಗೆ ಅಮೆರಿಕ ವಹಿಸಿರುವ ಪಾತ್ರ ರಹಸ್ಯವೇನಲ್ಲ. ಒಬ್ಬರಾದ ಮೇಲೊಬ್ಬರು ಅಮೆರಿಕದ ಅಧಿಕಾರಿಗಳು ರಾಜಕೀಯ ನಾಯಕರುಗಳೊಂದಿಗೆ ಸಂಧಾನ ನಡೆಸಿದ್ದಾರೆ. ಒತ್ತಡ ಹೇರಿದ್ದಾರೆ. ಅಧ್ಯಕ್ಷ ಪೀಠದಲ್ಲಿರುವ ಮುಷರಫ್, ಪಾಕಿಸ್ತಾನಿ ಸೇನೆ ಮತ್ತು ಅಸ್ತಿತ್ವಕ್ಕೆ ಬಂದಿರುವ ಸರಕಾರದ ಮಧ್ಯೆ ಸಮತೋಲನ ಸಾಧಿಸಲು ಅಮೆರಿಕದ ನಾಯಕರು ಸರ್ಕಸು ಮಾಡುತ್ತಿದ್ದಾರೆ. ಸದ್ಯದ ಪರಿಸ್ಥಿತಿಯಲ್ಲಿ ಈ ಮೂರರಲ್ಲಿ ಯಾರನ್ನು ಕೈಬಿಟ್ಟರೂ ವಿಪತ್ತೆ. ಪಾಕಿಸ್ತಾನದ ದೀರ್ಘ ಇತಿಹಾಸದಲ್ಲಿ ಹೆಚ್ಚು ಕಾಲ ರಾಜಕೀಯ ಅಧಿಕಾರದ ರುಚಿಯನ್ನು ಕಂಡಿರುವ ಸೇನಾಧಿಕಾರಿಗಳು ಯಾವತ್ತೂ ಅಮೆರಿಕದ ಕೃಪಾಶ್ರಯದಲ್ಲಿದ್ದಾರೆ. ಭ್ರಷ್ಟಾಚಾರದಿಂದ ಸಾಕಷ್ಟು ಗಳಿಸಿರುವ ಸೇನಾ ಸಿಬ್ಬಂದಿ ಪಾಕಿಸ್ತಾನದ ಆರ್ಥಿಕ ಕ್ಷೇತ್ರದಲ್ಲಿ ಪ್ರಬಲ ಶಕ್ತಿಯಾಗಿದೆ. ಸೇನೆಯ ಹಿತಾಸಕ್ತಿಯನ್ನು, ಅಮೆರಿಕದ ಹಿತಾಸಕ್ತಿಯನ್ನು ಮೀರಿ ಪ್ರಜಾಪ್ರಭುತ್ವ ರೀತಿಯಲ್ಲಿ ಸರಕಾರದ ಆಡಳಿತೆಯನ್ನು ನಡೆಸಿಕೊಂಡು ಹೋಗುವುದು ಇಂದಿನ ಸಂದರ್ಭದಲ್ಲಿ ಅಸಾಧ್ಯ ಎನ್ನುವುದು ನಿಜ. ಹಾಗೆಂದ ಮಾತ್ರಕ್ಕೆ ಆ ದಿಶೆಯ ಪ್ರಯತ್ನ ಕೈಬಿಡಬೇಕೆಂದೇನಲ್ಲ. ಅಂಥ ಪ್ರಯತ್ನವೇ ಪ್ರಜಾಪ್ರಭುತ್ವದ ಮುಂದುವರಿಕೆಗೆ ಅಡಿಗಲ್ಲು.

ಸದ್ಯದ ಪರಿಸ್ಥಿತಿಯಲ್ಲಿ ಮುಷರಫ್ ಕೈಬಿಡಲು ಅಮೆರಿಕ ಸಿದ್ಧವಾಗಿಲ್ಲ. ಹಾಗೆಯೇ ಚುನಾಯಿತ ಪ್ರತಿನಿಧಿಗಳ ಸರಕಾರವನ್ನು ಕೂಡ. ಹೆಚ್ಚುತ್ತಿರುವ ತಾಲಿಬಾನ್ ಉಪಟಳ, ಅಲ್ ಖೈದಾ ಚಟುವಟಿಕೆ, ಮೂಲಭೂತವಾದಿಗಳ ಆತ್ಮಾಹುತಿ ದಾಳಿಗಳು ಪಾಕಿಸ್ತಾನವನ್ನು ತಲ್ಲಣಗೊಳಿಸಿವೆ. ವಾಯವ್ಯ ಪ್ರಾಂತದಲ್ಲಂತೂ ಪರಿಸ್ಥಿತಿ ಗಂಭೀರವಾಗಿದೆ. ಸಿಂಧು, ಪಂಜಾಬ್ ಪ್ರಾಂತ ಸರಕಾರಗಳ ಸ್ಥಾಪನೆಯಲ್ಲಿ ಸಮ್ಮಿಶ್ರ ಸರಕಾರದ ಪಾಲುದಾರಿ ಪಕ್ಷಗಳು ಒಡಂಬಡಿಕೆ ಮಾಡಿಕೊಂಡಿದ್ದರೂ ಅದು ಎಷ್ಟು ಕಾಲ ಉಳಿಯುವುದು ಎಂಬುದು ಸಂದೇಹ. ಕೇಂದ್ರದಲ್ಲಿ ಮುಷರಫ್ ಅಧ್ಯಕ್ಷ ಸ್ಥಾನದಲ್ಲಿರುವುದರಿಂದ ಸಮ್ಮಿಶ್ರ ಸರಕಾರದ ಮೇಲೆ ಸದಾ ತೂಗುಕತ್ತಿ ಇದ್ದಂತೆ. ಅವರನ್ನು ಎದುರು ಹಾಕಿಕೊಂಡು ಮುಂದುವರಿಯುವುದು ಕಷ್ಟ. ಸೇನೆಯ ಬೆಂಬಲ ಯಾವ ಕಡೆಗಿದೆ, ಅಮೆರಿಕದ ಮುಂದಿನ ಹೆಜ್ಜೆ ಏನು ಎನ್ನುವುದೆ ನಿರ್ಧಾರಕ ಅಂಶ. ಅಸ್ಥಿರತೆ ಮುಂದುವರಿಯುವ ಲಕ್ಷಣಗಳೇ ಹೆಚ್ಚು. ಈ ಸನ್ನಿವೇಶದಲ್ಲಿ ಭಾರತ ಸರಕಾರ ಎಚ್ಚರದಿಂದ ವ್ಯವಹರಿಸಬೇಕಾಗಿದೆ. ಪಾಕಿಸ್ತಾನದ ಬೆಳವಣಿಗೆಗಳಿಂದಾಗಿ ಸ್ಥಗಿತಗೊಂಡಿರುವ ಎರಡೂ ದೇಶಗಳ ನಡುವಣ ಮಾತುಕತೆಗಳು ಪುನರಾರಂಭವಾಗುವುದು ಅಗತ್ಯ. ಚುನಾಯಿತ ಸರಕಾರದ ವರಿಷ್ಠರು ಭಾರತದ ಜೊತೆ ಸಂಬಂಧಗಳನ್ನು ಸಹಜಗೊಳಿಸಲು ಆದ್ಯತೆ ನೀಡಿದರೆ ಇದು ಸುಲಭವಾಗುತ್ತದೆ. ಮುಂಬರುವ ದಿನಗಳಲ್ಲಿ ಎಲ್ಲವೂ ಸ್ಪಷ್ಟವಾದೀತು.

– ಸೀಯಾರ್ಕೆ



# ಹ್ಯಾಲೀ ಧೂಮಕೇತುವಿನ ತುಣುಕುಗಳು

ಧೂಮಕೇತುಗಳು ಆಗಾಗ್ಗೆ ಭೇಟಿಕೊಡುವ ಕಾಯಗಳು. ವರ್ಷಕ್ಕೆ ೨೦ರಿಂದ ೨೫ ಧೂಮಕೇತುಗಳು ಬಂದು ಹೋಗುತ್ತವೆಯಾದರೂ ಎಲ್ಲವೂ ಬರಿಗಣ್ಣಿಗೆ ಕಾಣುವಷ್ಟು ಪ್ರಕಾಶಮಾನವಾಗಿರುವುದಿಲ್ಲ. ಸುದ್ದಿ ಮಾಡುವ ಧೂಮಕೇತುಗಳು ಬೆರಳೆಣಿಕೆಯಷ್ಟು ಮಾತ್ರ. ಅವುಗಳಲ್ಲೊಂದು ಹ್ಯಾಲೀ. ೭೬ ವರ್ಷಗಳಿಗೊಮ್ಮೆ ನಿಯಮಿತವಾಗಿ ಬಂದು ಹೋಗುತ್ತಿರುವ ಈ ಧೂಮಕೇತು ಇನ್ನೊಂದು ಕೌತುಕಕ್ಕೂ ಕಾರಣವಾಗಿದೆ. ಅದೇ ಉಲ್ಕಾವೃಷ್ಟಿ. ಬಾಲವಾಗಿ ಮೇಲೇರುವ ಕಣಗಳು ಧೂಮಕೇತುವಿನ ಕಕ್ಷೆಯಲ್ಲಿ ಉಳಿಯುತ್ತವೆ. ವರ್ಷಕ್ಕೊಮ್ಮೆ (ಕೆಲವು ಸಂದರ್ಭಗಳಲ್ಲಿ ಎರಡು ಬಾರಿ) ಭೂಮಿ ಈ ದೂಳಿನ ಸಮೂಹವನ್ನು ಸಮೀಪಿಸಿದಾಗ ಅವು ಭೂಮಿಗೆ ಅಪ್ಪಳಿಸುತ್ತವೆ. ಆದರೆ ಈ ಸಣ್ಣ ಕಣಗಳಿಂದ ತೊಂದರೆಯೇನಿಲ್ಲ. ಆಕಾಶದಲ್ಲಿ ಬಾಣಬಿರುಸು ಉಂಟಾಗುತ್ತದೆ ಅಷ್ಟೇ. ಹೀಗೆ ಏಪ್ರಿಲ್ ತಿಂಗಳಲ್ಲಿ ಎರಡು ಬಾಣಬಿರುಸುಗಳನ್ನು ನೋಡುವ ಅವಕಾಶವಿದೆ. ೨೨ರಂದು ಲಿರಿಡ್ಸ್ ಎಂಬ ಹೆಸರಿನ ಉಲ್ಕಾವೃಷ್ಟಿ ಗರಿಷ್ಠವನ್ನು ಮುಟ್ಟಲಿದೆ. ೧೮೬೧ರಲ್ಲಿ ಕಂಡು ಹಿಡಿಯಲಾಗಿದ್ದ ಧೂಮಕೇತುವೊಂದರ ದೂಳು ಈ ತುಣುಕುಗಳು. ಇದಕ್ಕೆ ಥ್ಯಾಚರ್ ಎಂಬ ಹೆಸರಿದೆ. ಇದರ ಚಟುವಟಿಕೆ ಕಡಿಮೆಯಾಗುತ್ತಿದ್ದ ಹಾಗೆ ಈಟಾ ಅಕ್ವಾರಿಡ್ಸ್ ಎಂಬ ವೃಷ್ಟಿ ಆರಂಭವಾಗುತ್ತದೆ. ಇದು ಹ್ಯಾಲೀ ಧೂಮಕೇತುವಿನ ಕಣಗಳ ಸೃಷ್ಟಿ. ಗರಿಷ್ಠ ಮುಟ್ಟುವುದು ಮೇ ೪ರಂದು. ಆದರೂ ಗಂಟೆಗೆ ೨೦-೩೦ ಉಲ್ಕೆಗಳು ಕಾಣುವ ಸಾಧ್ಯತೆ ಇದೆ. ಉಲ್ಕೆಗಳು ಯಾವ ವೃಷ್ಟಿಯದು ಎಂದು ತಿಳಿಯಲು ಈ ಅವಧಿ ಅತ್ಯಂತ ಸಮರ್ಪಕವಾಗಿದೆ. ಲಿರಿಡ್ಸ್ ವೃಷ್ಟಿಗೆ ಸೇರಿದ ಉಲ್ಕೆ ಲೈರಾ ಅಂದರೆ ವೀಣಾ ಎಂಬ ಪುಂಜದಿಂದ ಹೊರಟಂತೆ ಕಾಣುತ್ತದೆ. ಅಕ್ವಾರಿಡ್ಸ್ ಉಲ್ಕೆಗಳು ಅಕ್ವೇರಿಯಸ್ ಅಂದರೆ ಕುಂಭರಾಶಿಯಿಂದ ಹೊರಟಂತೆ ಕಾಣುತ್ತದೆ. ಸೂಕ್ಷ್ಮವಾಗಿ ಗಮನಿಸಿದರೆ ಅವುಗಳ ವ್ಯತ್ಯಾಸವೂ ತಿಳಿಯುತ್ತದೆ. ಅಕ್ವಾರಿಡ್ಸ್‌ನ ಉಲ್ಕೆಗಳು ಹೆಚ್ಚು ಉದ್ದದ ಗೆರೆಗಳನ್ನು ಮೂಡಿಸುತ್ತವೆ ಎಂಬಂಶವನ್ನು ಗಮನಿಸಿಯೇ ತಿಳಿಯಬೇಕು. ಉಲ್ಕಾವೃಷ್ಟಿಗಳನ್ನು ಗಮನಿಸಲು ಬೆಳಗಿನ ಜಾವವೇ ಸೂಕ್ತವಾದ ಸಮಯ. ಸಂಜೆ ಕಾಣುವ ಗ್ರಹಗಳೆಂದರೆ ಮಂಗಳ ಮತ್ತು ಶನಿ. ೧೨ರಂದು ಮಂಗಳಗ್ರಹವನ್ನು ಚಂದ್ರ ಮುಚ್ಚಿಹಾಕುವ ಆಚ್ಛಾದನೆ ನಡೆಯುತ್ತದೆ. ಆದರೆ ನಮಗೆ ಅವೆರಡೂ ಸಮೀಪ ಇದ್ದಂತೆ ಕಾಣುತ್ತದೆ. ಹಾಗೆಯೇ ೨ರಂದು ಮತ್ತು ೨೯ರಂದು ನೆಪ್ಚೂನ್ ಆಚ್ಛಾದನೆಯ ನೋಟವೂ ನಮಗಿಲ್ಲ. ಬೆಳಗಿನ ಜಾವ ಶುಕ್ರ ಮತ್ತು ಗುರುಗ್ರಹಗಳು ಬಹಳ ಪ್ರಕಾಶಮಾನವಾಗಿ ಕಾಣುತ್ತವೆ. ಆದರೆ ದಿನಕಳೆದಂತೆ ಶುಕ್ರ ದಿಗಂತದ ಅಂಚಿಗೆ ಸರಿದು ಮುಂಜಾವಿನ ಕೆಂಪಿನಲ್ಲಿ ಕರಗಿಹೋಗುವುದೆಂಬುದನ್ನು ಗಮನಿಸಬಹುದು. ಬುಧಗ್ರಹ ಈ ತಿಂಗಳುದ್ದಕ್ಕೂ ನೋಡಲು ಸಿಗುವುದೇ ಇಲ್ಲ. ಡಿಸೆಂಬರ್ ತಿಂಗಳಲ್ಲಿ ''ಅತಿ ದೊಡ್ಡ ಚಂದ್ರ'' ಎಂಬ ಗುಲ್ಲು ಎದ್ದಿದ್ದುದು ನೆನಪಿದೆ ಅಲ್ಲವೇ ? ಅದೇ ತತ್ವದ ಆಧಾರದ ಮೇಲೆ ಈ ತಿಂಗಳು ಮತ್ತು ಮುಂದಿನ ತಿಂಗಳ ಹುಣ್ಣಿಮೆಯ ಚಂದ್ರ ''ಅತಿ ಚಿಕ್ಕದು'' ಅಥವಾ ಅತಿ ಕಡಿಮೆ ಬೆಳಕಿನದು ಎಂದು ಕರೆಯಬಹುದು. ಮರೆಯದೆ ಹುಣ್ಣಿಮೆಯ ಚಂದ್ರನನ್ನು ನೋಡಿ. ಅದು ಚಿಕ್ಕದು ಎನಿಸಿತ್ತೆ? ಅಥವಾ ಬೆಳಕು ಸಾಲದು ಅನ್ನಿಸುತ್ತದೆಯೇ? ಗಮನಿಸಿ. ತಾತ್ಪರ್ಯ ಸರಳ-ಚಂದ್ರನ ಗಾತ್ರ ಹುಣ್ಣಿಮೆಯಿಂದ ಹುಣ್ಣಿಮೆಗೆ ಬದಲಾಗುವುದನ್ನು ಬರಿಗಣ್ಣು ಖಂಡಿತ ಗುರುತಿಸಲಾರದು. ಕ್ಯಾಮರಾ ಇರುವವರು ಹುಣ್ಣಿಮೆಯ ಚಂದ್ರನ ಚಿತ್ರಗಳನ್ನು ತೆಗೆದಿಟ್ಟುಕೊಂಡು ಹೋಲಿಸಿದಲ್ಲಿ ಮಾತ್ರ ಈ ವ್ಯತ್ಯಾಸ ಗೋಚರವಾಗುತ್ತದೆ.

ಸಿರಿಸ್ ಎಂಬ ಕುಬ್ಜಗ್ರಹ ಈ ತಿಂಗಳಲ್ಲಿ ಕೃತ್ತಿಕಾ ಮತ್ತು ರೋಹಿಣಿ ನಕ್ಷತ್ರಗಳ ನಡುವೆ ಚಲಿಸುತ್ತದೆ. ಆದ್ದರಿಂದ ಆ ಭಾಗವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರೆ ಅಥವಾ ಆಗಾಗ್ಗೆ ಆ ಭಾಗದ ಚಿತ್ರವನ್ನು ತೆಗೆದು ಹೋಲಿಸುತ್ತಿದ್ದರೆ ಈ ಕುಬ್ಜ ಗ್ರಹದ ಚಲನೆಯನ್ನು ಗಮನಿಸಬಹುದು.





೧೨ ಏಪ್ರಿಲ್‌ನ ಸಂಜೆಯ ನೋಟ ಚಂದ್ರ, ಮಂಗಳ, ಪುನರ್ವಸುಗಳು

**ಖಗೋಳ ದಿನಚರಿ**

ಏಪ್ರಿಲ್ ೨. ನೆಪ್ಚೂನ್ ಆಚ್ಛಾದನೆ

೫. ಶುಕ್ರ - ಚಂದ್ರ ನಡುವೆ ೫ ಡಿಗ್ರಿ ಕೋನ *

೬. ಅಮಾವಾಸ್ಯೆ ೦೯:೨೫ಕ್ಕೆ

೭. ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ

೧೨. ಮಂಗಳ- ಚಂದ್ರ ನಡುವೆ ೧.೨ಡಿಗ್ರಿ ಕೋನ * (ಆಚ್ಛಾದನೆ ಕಾಣುವುದಿಲ್ಲ) ಚಾಂದ್ರಮಾಸದ ಪ್ರಥಮಪಾದ (ಚಂದ್ರಾಸ್ತ ನಡುರಾತ್ರಿಗೆ)

೧೫. ಶನಿ- ಚಂದ್ರ ನಡುವೆ ಕನಿಷ್ಠ ಕೋನ *

೧೬. ಬುಧದ ಯುತಿ (ಸೂರ್ಯನ ಇನ್ನೊಂದು ಬದಿಯಲ್ಲಿ)

೨೦. ಹುಣ್ಣಿಮೆ ೧೫:೫೫ಕ್ಕೆ

೨೨. ಚಂದ್ರ-ಭೂಮಿ ನಡುವೆ ಗರಿಷ್ಠ ಅಂತರ

೨೭. ಗುರು-ಚಂದ್ರ ನಡುವೆ ೨.೮ ಡಿಗ್ರಿ ಕೋನ *

೨೮. ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)

೨೯. ನೆಪ್ಚೂನ್ ಆಚ್ಛಾದನೆ

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ


ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಕ್ಷಮೆಯಿರಲಿ ಕಂದಾ

ಚೀರಿಕೊಂಡಂತಾಗಿ ಎಚ್ಚರಾಗಿತ್ತು. ಮೈಯೆಲ್ಲ ಒದ್ದೆ ಮುದ್ದೆ. ಬಾಯಾರಿತ್ತು. ರಾತ್ರಿ ಜಾರುತ್ತಿರುವ ಹೊತ್ತು. ಬೆಳಗಿನ ಜೀರುಂಡೆಯ ಕೀಂಯ್ ಸ್ವರ. ಪಕ್ಕದಲ್ಲಿವನು ನಿದ್ದೆಯಲ್ಲಿದ್ದ. ಎಬ್ಬಿಸಲೇ ಎನಿಸಿತ್ತು. 'ಏನು ಕನಸು ?' ಎಂದರೆ ಏನನ್ನಲಿ ? ಆ ಹುಡುಗ ವಿಶ್ವಾಸ ಕನಸಿನ ಹಾದಿಯಲ್ಲಿ ನೆತ್ತರು ಬಸಿಯುತ್ತ ಒದ್ದಾಡುತ್ತಿದ್ದ. ಉಸಿರು ನಿಲ್ಲುವ ಕ್ಷಣದಲ್ಲಿ ಎಷ್ಟೊಂದು ಆರ್ತವಾಗಿ ನೋಡುತ್ತಿದ್ದ! ಕನಸು ಕಂಡ ಸಂಕಟವೇ ಸಾಕು. ಅದನ್ನು ಹೇಳಲು ಹೋಗಿ ಹೇಳಲಾಗದೆ ಒದ್ದಾಡಿ ಮತ್ತೆಲ್ಲ ಸಿಕ್ಕುಗೊಳಿಸುವುದು ಬೇಡ. ಆದರೆ ಇದೆಂಥದ್ದು? ಎಂದೂ ಇಲ್ಲದಂಥ ಕನಸು. ಓ, ಮಲಗುವ ಮುಂಚೆ ಟಿ.ವಿ.ಯಲ್ಲಿ ಅದ್ಯಾವ ಕಾಲೇಜಿನ ಮಕ್ಕಳೋ ಬಡಿದಾಡುತ್ತಿದ್ದುದ ಕಂಡಿದ್ದೆ. ಮನಸ್ಸಿನೊಳಗೆ ಆತಂಕವೊಂದು ಮಿಡಿಯುತ್ತ ಹೀಗೆ ರೂಪು ಪಡೆದಿರಬೇಕು. ಎಚ್ಚರದ ಮನ ಏನೆಲ್ಲ ಸಮಾಧಾನದ ಹುಡುಕಾಟದಲ್ಲಿತ್ತು. ಎಷ್ಟೋ ವರ್ಷಗಳ ಹಿಂದಿನ 'ವಿಶ್ವಾಸ' ಹಾಗೇ ಕಾಣಿಸಿದ್ದ. ಈಗವನು ಹಾಗಿರಲಿಕ್ಕಿಲ್ಲ. ಬದಲಾಗಿರಬಹುದು. ಬದಲಾಗಲೇಬೇಕಲ್ಲವೇ ?

ನಾನು ಆ ಕಾಲೇಜಿಗೆ ಹೋದಾಗ ಕಾಲೇಜಿಡೀ ಇನ್ನೂರು ವಿದ್ಯಾರ್ಥಿಗಳು. ಬಂದಾಗ ಬಂದರು, ಹೋದಾಗ ಹೋದರು. ಕ್ಲಾಸಿಗೆ ಕೂಡಬೇಕೆಂಬುದು ಇರಲಿಲ್ಲ. ಬಾಡಿಗೆ ಕಟ್ಟಡ. ಜುಲೈದಲ್ಲಿ ಕ್ಲಾಸುಗಳು ಶುರುವಾಗುತ್ತಿತ್ತಾದರೂ 'ಝೇಂಡಾ ಹಾರಿಸಿ ಶುರುಮಾಡಿ, ಝೇಂಡಾ ಹಾರಿಸಿ ಮುಗಿಸೋದು' – ಎಂಬ ಒಳ ಒಪ್ಪಂದ ಜಾರಿಯಲ್ಲಿತ್ತು. 'ಪಾಠ ಮಾಡೋದೊಂದೇ ಕೆಲಸವಾ ? ನಮಗೂ ನಮ್ಮ ಕರಿಯರ್ ಇರುತ್ತದಲ್ವಾ ?' ಎಂಬ ತಾತ್ವಿಕತೆಯ ಪಂಡಿತರ ಮೇಳ. ನಾನೋ ಮನೆಯ ಅಂಗಳದಿಂದ ಸೀದಾ ಕ್ಲಾಸ್‌ರೂಂ ಪ್ಲಾಟ್‌ಫಾರ್ಮ ಹತ್ತಿದ ಬೊದ್ದು ಹೆಂಗಸು. ಬೆಳಿಗ್ಗೆ೮ಕ್ಕೆ ಕಾಲೇಜಿನಲ್ಲಿದ್ದರೆ ಇನ್ನೂ ಮಲಗಿಯೇ ಇರುತ್ತಿದ್ದ ಪ್ಯೂನ್ ಶ್ರೀಕಂಠ ದಡಬಡಿಸಿ ಏಳುತ್ತಿದ್ದ, 'ಮುಂದಿನ ಬಸ್ಸಿಗೆ ಬರಬೇಕಿಲ್ಲರೀ' – ಅಂತ ರಾಗ ತೆಗೆಯುತ್ತಾ.



ಮಕ್ಕಳೋ ಹತ್ತು ಹೊಡೆಯುವವರೆಗೂ ಕಾಲೇಜಿಗೆ ಕಾಲುಹಾಕುತ್ತಿರಲಿಲ್ಲ. ಮೊದಮೊದಲ ಕ್ಲಾಸುಗಳಿಗೆ ಒಂದೋ ಎರಡೋ ಮೂರೋ ಮಕ್ಕಳು. ಅದೇ ಆಗ ಎಷ್ಟೆಲ್ಲ ಮಕ್ಕಳಿಗೆ ತಾಯಾಗಬೇಕೆಂಬ ಹಂಬಲವೊಂದು ಹತ್ತಿ ಬೆಳೀತಾ, ಆ ಹಂಬಲವೇ ದನಿಯಾಗಿ, ಮಾತಾಗಿ, ನನಗೆ ನಾನೇ ಹೊಸ ಹುಟ್ಟಾಗುವ ಬೆಸೆದ ದಿನಗಳವು. ಪಾಠದ ಬಗ್ಗೆ, ಮಕ್ಕಳ ಬಗ್ಗೆ ಪ್ರೀತಿ ಬಿಟ್ಟರೆ ಮತ್ತೇನೂ ತಿಳಿದಿರಲಿಲ್ಲ. ಆ ಸಣ್ಣ ಸಂಗತಿಯೇ ಮಣ್ಣು ಗುಡ್ಡವಾಗುವ ಹಾಗೆ ಎಲ್ಲ ಎಲ್ಲ ಹದಗೊಳಿಸುತ್ತ ಬಂತು. 'ಕಡೆಯ ವಿದಾಯಕ್ಕೆ ಕಣ್ಣೀರು ಹಾಕಲಾದರೂ ನಾಲ್ಕು ಮಕ್ಕಳಿವೆ' ಎಂಬ ಉಮೇದಿಯೊಂದು ಒಳಗೇ ಗೂಡಾಗುತ್ತಿತ್ತು. ಮಕ್ಕಳು ಅಧ್ಯಾಪಕರನ್ನು ಕೇಳಿ ಕ್ಲಾಸಿಗೆ ತರುತ್ತಿದ್ದರು. ಪ್ರಿನ್ಸಿಪಾಲರಿಗೆ ಸಹೋದ್ಯೋಗಿಗಳಿಗೆ ಇರುಸು ಮುರುಸು. ಹುಡುಗರು ಕಾಲೇಜಿನ ಬಗ್ಗೆ ಕಮೀಷನರಿಗೆ ಅರ್ಜಿ ಬರೆದು, ವಿಚಾರಣೆಯಾಗಿ ಕಡೆಗೆ ಎಲ್ಲ ಸಿಡಿಸಿಡಿ ಅಂದು ಕಡೆಗೂ 'ಇದೊಂದು ಕಾಲೇಜು' ಅನ್ನಿಸತೊಡಗಿತ್ತು.

ನನ್ನ ಮಗ ಸುಶಾಂತ ಹುಟ್ಟಿದ ದಿನಗಳವು. ನಾನು ರಜೆಯಲ್ಲಿದ್ದೆ. ಊರ ನಟ್ಟನಡುಮನೆ. ಈ ಮಕ್ಕಳೆಲ್ಲ ಕಾಲೇಜಿಂದ ಸೀದಾ ಮನೆಗೆ ಹೋಗದೆ ನಮ್ಮನೆಗೊಂದು ಸುತ್ತು ಹಾಕಿ ಹೋದವೇ. ಮಟಮಟ ಮಧ್ಯಾಹ್ನ ಫ್ರಿಜ್ಜಿನಿಂದ ತಣ್ಣೀರು ಕುಡಿದು, 'ಸಂತೆ ಪೇಟೆ ಪೋಸ್ಟು..' ಅಂತೆಲ್ಲ ಕೆಲಸ ಕೇಳಿ ಮಾಡಿ; 'ಮಿಸ್, ಪಾಠ ಕೇಳದೆ ಬೇಜಾರಾಗಿದೆ ; ಎಂದು ಬರೋದು ನೀವು ?' ಅಂತ ಕೇಳುತ್ತ ನನ್ನ ಬದುಕಿಗೂ ಒಂದು ಲಯವಿದೆಯೆಂಬ ಭಾವ ತುಂಬಿದವರು. 'ಏನು ಮಾಡಿದ್ದೇನೆ ನಾನಿವರಿಗೆ ?' ನವಲೂರಿನಿಂದ ವರ್ಗವಾಗಿ ಬರುವಾಗ ಮನೆ ಸಾಮಾನು ತುಂಬಿದ ಟ್ರಕ್ಕಿನಲ್ಲಿದ್ದೆ. ಆಗ ಆರು ತಿಂಗಳ ಗರ್ಭಿಣಿ ನಾನು. ಟ್ರಕ್ಕು ಬಾಡಿಗೆ ಮನಿ ಮುಂದೆ ನಿಂತಿತು. ಸಾಮಾನು ಹಿಡಿದುಕೊಂಡು ಹಿಂದೆ ನಿಂತಿದ್ದ ಈ ಮಕ್ಕಳೆಲ್ಲ ಇಳಿದರು. ನನಗೋ ಅಷ್ಟೆತ್ತರದ ಟ್ರಕ್ಕಿನಿಂದ ಇಳಿಯಲಾಗ್ತಿಲ್ಲ. ಇವನು ಬೈಕ್‌ನಲ್ಲಿ ಹಿಂದಿದ್ದ. ಆಗಲೇ ವಿಶ್ವಾಸ ಮತ್ತು ಅಮ್ಜದಲಿ 'ಮಿಸ್, ಇಲ್ಲಿ ಕಾಲಿಟ್ಟು ಇಳೀರಿ' ಅಂತ ಕೈಬೆರಳುಗಳ ಹೊಸೆದ ಹಸ್ತ ಚಾಚಿದರು. ತಬ್ಬಿಬ್ಬುಗೊಂಡೆ. 'ಅಯ್ಯೋ ಬೇಡವಪ್ಪಾ ಸರೀರಿ' – ಅಂದೆ. 'ಯಾಕೆ ಮಿಸ್, ನಮ್ಮವ್ವ ಇದ್ದರೆ ಇಳಿಸಿಕೊಳ್ತಿರಲಿಲ್ವಾ ?' ಅಂದ ವಿಶ್ವಾಸ. ಅಷ್ಟರಲ್ಲಿ ಟ್ರಕ್ಕ್ ಡ್ರೈವರ ಒಂದು ಸ್ಟೂಲ ಕೊಟ್ಟ. ನಿಧಾನ ಇಳಿದೆ. ಮಗ್ಗಲು ಹೊರಳಿದರೂ ನಿದ್ದೆ ಬರುತ್ತಿಲ್ಲ. ಇಂಥ ಎಷ್ಟೆಲ್ಲ ನೆನಪುಗಳು ನನ್ನ ಮುಕ್ಕುತ್ತಿವೆ. ದಿಂಬು ತೋಯುತ್ತಿದೆ. ಮನೆ ಜೋಡಿಸುವಾಗಲೂ ಹಾಗೇ. ''ಮಿಸ್, ನೀವು ಕೂಡಿ. ಹೇಳಿ ಅಷ್ಟೇ. ನಾವೆಲ್ಲ ಮಾಡುತ್ತೇವೆ.'' ಜೆಓಡಿಸಿಯಲ್ಲಿ ಇಲೆಕ್ಟ್ರಿಕ್ ಕೆಲಸ ಕಲಿತ ಕಟ್ಟಿಮಠ, ರಜಾದಿನಗಳಲ್ಲಿ ಪೇಂಟಿಂಗ್ ಮಾಡುತ್ತಿದ್ದ ಸಜ್ಜನ, ಕನೇರಿ, ಬಳ್ಳೊಳ್ಳಿ ಮಾರುತ್ತಿದ್ದ ರಾಜು ಕಲಾಲ, ಸುಣ್ಣದ ಭಟ್ಟಿಯಲ್ಲಿ ದಿನಗೂಲಿಗೆ ಹೋಗುತ್ತಿದ್ದ ಶಂಕರ ಲದ್ವಾ... ಹೀಗೆ ಎಲ್ಲರೂ ಸೇರಿ ದುಡಿದರು. ಸಾಕು ಬಿಡ್ರಪ್ಪಾ – ಅಂದರೂ ಕೇಳಲಿಲ್ಲ. ಮೂರೇ ದಿನದಲ್ಲಿ ಎಲ್ಲ ವಸ್ತುಗಳೂ ಹೊಂದಿಕೆಯಾಗಿತ್ತು, ನನಗೆ ಯಾವ ಸುಸ್ತೂ ಇಲ್ಲದೆ.

ವಿಶ್ವಾಸ ನಮ್ಮ ಮನೆಗೆ ಸ್ವಲ್ಪ ಸಮೀಪದವ. ಇಷ್ಟು ದಿನ ಕಾಲೇಜಿನಲ್ಲಿ ಉಡಾಳ ಎಂದೇ ಖ್ಯಾತ. ಆದರವ ದುಷ್ಟ ಅಂತೇನೂ ಅನ್ನಿಸಲಿಲ್ಲ. ಮಾತು-ರೀತಿ ರೂಢಿಯಿಂದ ಒರಟು ಅಷ್ಟೇ. ಈತ ಆಟದ ಮೈದಾನ ದಲ್ಲಿದ್ದರೆ ಕ್ಲಾಸ್ ರೂಂ, ಆಫೀಸ್ ರೂಂಗೆ ಓಡಾಡೋ ಸರ್‌ಗಳೆಲ್ಲ ತಲೆಗೆ ಪುಸ್ತಕ ಅಡ್ಡಲಾಗಿ ಹಿಡಿದು ಹೋಗುತ್ತಾರೆಂಬುವುದು ಪ್ರಸಿದ್ಧವಾಗಿತ್ತು. 'ವಿಶ್ವಾಸ, ನೀನು ರಮೇಶ ಸರ್‌ಗೆ ಕಲ್ಲಲ್ಲಿ ಹೊಡೆದಿದ್ದೆಯಂತಲ್ಲ. ಹೌದಾ ?' ಎಂದು ಕೇಳಿದರೆ, 'ಮತ್ತೆ ಅವ್ನ ಹುಡುಗಿಯರನ್ನ ಸ್ಟಾಫ್‌ರೂಂಗೆ ಕರ್ದು ತೀರಾ ಹೊಟ್ಟೆಹಚ್ಚಿ ನಿಂತು ... ಥೂ ಅವನವ್ವನ: ಹ್ಯಾಂಗೆಲ್ಲ ನಡ್ಕೋತಿದ್ದಾ ಗೊತ್ತಾ' ಎಂದ ಬಿರುಸಾಗಿ. 'ನೋಡು ವಿಶ್ವಾಸ, ಎದುರಿಸೋದಕ್ಕೂ ಒಂದು ಕ್ರಮ ಬೇಕಲ್ವಾ ? ಹೊಡಿ ಬಡಿ ಅಂದ್ರೇನೋ' – ಎಂದೆ ಸುಮ್ಮನಾದ. ಇದಾದ ಮೇಲೆ ಕೂಡ ಪ್ರಿನ್ಸಿಪಾಲ ನಾಡಗೌಡರಿಗೆ ಮಾತಿಗೆ ಮಾತು ಬೆಳೆದು 'ಹೊರಗ್ಬಾ, ನೋಡ್ಕೋತೀನಿ' ಎಂದಿದ್ದನಂತೆ. ಪ್ರಿನ್ಸಿಪಾಲರು ಸ್ಟಾಫ್ ಮೀಟಿಂಗ್‌ನಲ್ಲಿ – ಯಾರ್ಯಾರು ಹುಡುಗರ ಕೂಡ ಸಲಿಗೆಯಿಂದಿರ್ತೀರಿ, ನಿಮ್ಮ ಚಿತಾವಣೆಯೇನು ? – ಅಂತೆಲ್ಲ ಹಾಯಿಸಿ ಮಾತಾಡಿದರು. ಆವತ್ತು ಸಂಜೆಯೇ ವಿಶ್ವಾಸನನ್ನು ಕೂಡಿಸಿ ಮಾತಾಡಿದ್ದೆ. ಅಲ್ಲಿಂದಾಚೆ ಬದಲಾಗುತ್ತಿದ್ದಾನೆ ಅನ್ನಿಸಿತ್ತು. ಕಾಲೇಜಿನ ಯಾವುದೇ ಕೆಲಸ, ಎನ್.ಎಸ್.ಎಸ್. ಕ್ಯಾಂಪ್‌ಗಳಲ್ಲಿ ಅವನಿಲ್ಲದಿದ್ದರೆ ನಡೆಯುವುದಿಲ್ಲ ಅನ್ನುವಷ್ಟು.

ವಿಶ್ವಾಸ ಮತ್ತು ಅಮ್ಜದ್ ಅಕ್ಕಪಕ್ಕದ ಮನೆಯವರು. ಇಬ್ಬರ ಮನೆಯಲ್ಲೂ ತಂತಿ ಮೇಲಿನ ನಡಿಗೆ. ವಿಶ್ವಾಸನ ಅಪ್ಪನದು ಸಣ್ಣದೊಂದು ಟೇಲರಿಂಗ್ ಶಾಪು.

**ಡಾ॥ ವಿನಯಾ**

ಅಮ್ಜದ್‌ನ ಅಪ್ಪ ತೋಟ ಪಟ್ಟಿ ಕೆಲಸ ಮಾಡ್ತಿದ್ದ. ಇಬ್ಬರೂ ಕನ್ನಡ ಶಾಲೆಗೆ ಮುಂಚಿನಿಂದಲೂ ಜೊತೆಗಾಡಿದವರು. ನಮಗೆಲ್ಲ ಇದು ಎಷ್ಟು ರೂಢಿಯಾಗಿತ್ತೆಂದರೆ ಇಬ್ಬರನ್ನೂ ಬೇರೆ ಬೇರೆ ಅಂತ ನೋಡೋಕೆ ಆಗ್ತಿರಲಿಲ್ಲ. ಬಟ್ಟೆ ಕೂಡ ಒಬ್ಬರದನ್ನೊಬ್ಬರು ಹಾಕುತ್ತಿದ್ದರಂತೆ. ಇದೆಲ್ಲ ನಂಗೆ ಪೂರಾ ತಿಳಿದದ್ದು 'ಸುರಕುಂಬ'ದ ಪ್ರಕರಣದಲ್ಲಿ. ಹಾಗೆ ಕಂಡರೆ ಬಯಲೂರಿನ ಮುಸುಕುಗಳೆಲ್ಲ ತೆರೀತ, ಊರು ಸರಿಯಾಗಿ ಅರ್ಥವಾದದ್ದೂ ಆಗಲೇ. ಅದಾಗಿದ್ದು ಹೀಗೆ. ಕಾಲೇಜಿನಲ್ಲಿ ಪಾಟೀಲ ಸರ್‌ಗೊಂದು ಖಯಾಲಿ. ಪಂಚಮಿ ಬಂತಂದ್ರೆ – ಏನವ್ವಾ ಪರಿಮಳಾ, ಉಂಡಿ ತಂದಿಲ್ವಾ – ಅನ್ನೋದು. ರಮ್ಜಾನ್ ಬಂದರೆ – ಫಾತಿಮಾ, ಯಾಕವ್ವ ಸುರಕುಂಭ ಕುಡಿಸೋದಿಲ್ವಾ – ಅನ್ನೋದು. ಹೀಗಾಗಿ ಸರ್‌ಗಳಿಗೆಲ್ಲ ಸುರಕುಂಭ ಕೊಡಬೇಕಲ್ಲವಾ ಅಂತ ಶಫಿ ಯೆಂಕೋಬನ ಚಾದಂಗಡಿಯಲ್ಲಿ ಮಾತು ತೆಗೆದನಂತೆ. ಎಲ್ಲರಿಗೂ ಒಂಥರಾ ಥ್ರಿಲ್ ಅನ್ನಿಸ್ತು. ವಿಶ್ವಾಸನೂ ಅಮ್ಜದ್‌ನ ಜೊತೆ ನಾಲ್ಕೆಂಟು ದಿನ ಉಪವಾಸ ಮಾಡಿದ್ದನಂತೆ. ಹುಡುಗರೆಲ್ಲ ಸೇರಿ ಪ್ರಿನ್ಸಿಪಾಲರೊಂದಿಗೆ ಮಾತಾಡಿ, ದಿನ ವೇಳೆ ಎಲ್ಲ ನಿಗದಿಯಾಯ್ತು. ಎಲ್ಲ ತಯಾರಿ ಮುಗ್ದು ಕಾಲೇಜಿನಲ್ಲಿ ಗ್ಯಾಸು, ಸುರಕುಂಭದ ಪಾತ್ರೆ, ಸಾಮಾನು ಎಲ್ಲ ಬಂದು 'ನಾಳೆ ಇಷ್ಟು ಗಂಟೆಗೆ' ಅಂತ ಕ್ಲಾಸುಗಳಿಗೆಲ್ಲ ವಿನಂತಿ ಪತ್ರ ಹೋಗಿಯಾದ ಮಧ್ಯಾಹ್ನ ಬಯಲೂರಿನ ಎಸ್.ಆರ್.ಎಸ್. ಸಂಘದವರಿಗೆ ಧರ್ಮನಾಶದ ನಾತ ಹತ್ತಿ ಹತ್ತಾರು ಮೋಟಾರು ಬೈಕುಗಳಲ್ಲಿ ಪುತಪುತನೆ ಬಂದವರೇ ಪ್ರಿನ್ಸಿಪಾಲರನ್ನು ಛೇಂಬರಿನಲ್ಲಿ ಕೂಡಿಸಿ ಹಿಗ್ಗಾಮುಗ್ಗಾ ಪ್ರಶ್ನೆಗಳ ಕೇಳಿದರು. ''ಕಾಲೇಜಿಗೆ ಇದಕ್ಕೇ ಬರೋದಾ ? ಪುಕ್ಕಟೆ ಏನ್ ಸಿಕ್ರೂ ನೆಕ್ಕೋಕೆ ತಯಾರಿದ್ದೀರಲ್ರೀ. ನಾವೂ ದೀಪಾವಳಿಗೆ ಹೋಳಿಗೆ ಹಂಚ್ತೇವಿ. ಕಾಲೇಜಿಗೆ ನಮ್ಮ ಮನೆತನಸ್ಥ . ಹುಡುಗಿಯರೆಲ್ಲ ಬರ್ತಾರೆ. ನೀವು ಈ ಸಾಬ... ಮಕ್ಕಳಿಗೆಲ್ಲ ಹೀಗೆ ಸಲುಗೆ ಕೊಟ್ರೆ ಆಮೇಲೆ ಏನಾರ ಆಗೋದರ ಹೊಣೆ ಹೊರಬೇಕು...'' ಪ್ರಿನ್ಸಿಪಾಲರಿಗೆ ಕಣ್ಣೀರು ಕಪಾಳಕ್ಕಿಳಿಯುವುದೊಂದು ಬಾಕಿ. 'ಎಲ್ಲ ಕ್ಯಾನ್ಸಲ್' ಅಂತ ಫರ್ಮಾನು ಹೊರಡಿಸಿ ಕುಳಿತುಬಿಟ್ಟರು. ಇದ್ದಬಿದ್ದ ರೊಕ್ಕಾ ಹಾಕಿ ಎಂಥದೋ ಸಂಭ್ರಮದಲ್ಲಿದ್ದ ಹುಡುಗರು ಹೂತುಹೋದಂತೆ ದಂಗುಬಡಿದು ನಿಂತರು. ಕಾಲೇಜಿನಲ್ಲಿ ಗುಸುಗುಸು ಸುದ್ದಿಯಾಯಿತಾದರೂ ಬಹುಪಾಲು ವಿದ್ಯಾರ್ಥಿಗಳು 'ನಮಗ್ಯಾಕೆ ಇಲ್ಲದ ಉಸಾಬರಿ' ಎಂಬ ನಾಗರಿಕರಾಗಿಬಿಟ್ಟಿದ್ದರು. ಈ ಹುಡುಗರಿಗೆಲ್ಲ ಅವಮಾನ ಗಂಟಲ ಮುಳ್ಳಿನಂತಾಯಿತು. ಮಾರನೆಯ ದಿನ ಬೆಳಿಗ್ಗೆ ಕ್ರಿಕೆಟ್ ಆಡಲು ಕಾಲೇಜ್ ಬಯಲಿಗೆ ಬಂದಿದ್ದ ಎಸ್.ಆರ್.ಎಸ್. ಸಂಘದವರನ್ನು ವಿಶ್ವಾಸ ಮತ್ತು ಅಮ್ಜದ್ ಕೂಡಿ ಕೇಳಿದರಂತೆ : ''ಯಾಕೆ ಹಾಗೆ ಎಗರಾಡಿದಿರಿ ? ಕಾಲೇಜಲ್ಲಿ ಪ್ರತೀವರ್ಷ ಸರಸ್ವತೀಪೂಜೆ, ಗಣೇಶೋತ್ಸವ ಮಾಡಿದರೆ ನಡೀತದೆ. ನಾವು ಸುರಕುಂಭ ಹಂಚೋದು ಮಾತ್ರ ತಪ್ಪಾ ?'' ಇದನ್ನೇ ಕಾಯುತ್ತಿದ್ದವರಂತೆ ಮೈಮೇಲೇರಿ ಬಂದವರೇ ವಿಶ್ವಾಸನನ್ನು ದೂಕಿದರಂತೆ. ''ನೀನೇನು ಸಾಬರಿಗೆ ಹುಟ್ಟಿದ್ದೀಯಾ ? ಮೊನ್ನೆ ಮಂಜುಳಾನ ಮನೆಗೆ ನೋಟ್ಸ್ ಕೇಳಲು ಹೋದವ ಈ ಸಾಬನನ್ನೂ ಕರ್ಕೊಂಡೋಗಿದ್ದಿಯಂತಲ್ಲ. ತಲೆಹಿಡಕತನ ಮಾಡ್ತಿಯೇನೋ'' ಎಂದು ಬಡಿದಿದ್ದರು.

ಆವತ್ತು ಸಂಜೆ ವಿಶ್ವಾಸ್ ಮತ್ತು ಅಮ್ಜದ್ ಅಲ್ಲಲ್ಲಿ ಪಟ್ಟಿ ಹಚ್ಚಿಕೊಂಡು ತುಂಬ ಸೋತವರಂತೆ ಬಂದರು. ತಮ್ಮೂರಿನ ಜನವೇ ತಮ್ಮನ್ನು ವಿನಾಕಾರಣ ಮಾತೆತ್ತಿದರೆ ಬಡಿದದ್ದು ಆಘಾತವುಂಟು ಮಾಡಿತ್ತು. ನನಗೂ ಗಾಬರಿ, ಸಂಕಟ. ಹುಡುಗರ ಭವಿಷ್ಯ. ಇಷ್ಟೆಲ್ಲ ನಡೆದಿರೋದು ಆಕಸ್ಮಾತ್ ಆಗಿರಲಿಕ್ಕಿಲ್ಲ ಅನ್ನಿಸ್ತು. 'ಸದ್ಯ ದುಡುಕಬೇಡಿ. ದಿನ ಕಳೆಯಲಿ' ಎಂದು ಹೇಳಿ ಕಳಿಸಿದೆ. ಮತ್ತೊಂದೆರಡು ದಿನಗಳ ಮೇಲೆ ಮಟಮಟ ಮಧ್ಯಾಹ್ನ ವಿಶ್ವಾಸ ಒಬ್ಬನೇ ಬಂದ. ''ಮಿಸ್, ಇವತ್ತು ಚೇರಮನ್ ಮುದಿಗೌಡರ ಅದಾರಲ್ಲ, ಅವ್ರು ನಮ್ಮನೆಗೆ ಬಂದಿದ್ರು. ನಾನು ಅಮ್ಜದ್ ಜೊತೆ ಇರೋದರ ಬಗ್ಗೆ ಬಹಳ ಒದರಾಡಿದರು. ನಾವು ಬಡವರು ಮಿಸ್. ನಮ್ಮಪ್ಪ ಕಂಗಾಲಾಗಿದ್ದಾರೆ. ಯಾಕೆ ಮಿಸ್ ಹೀಗೆ ? ಎಷ್ಟೆಲ್ಲ ವರ್ಷಗಳಿಂದ ಒಟ್ಟಿಗೇ ಇದ್ದೇವೆ. ಏನು ತಪ್ಪು ? ಛೆ, ಎಂತೆಂಥ ಮಾತು ಕೇಳಬೇಕು.'' ಸಣಕಲು ಮೈಯ ವಿಶ್ವಾಸ ಗಡಗಡ ನಡುಗುತ್ತಿದ್ದ. ನನಗೂ ಅಳು ಬಂದಿತ್ತು. ಮಕ್ಕಳ ಮುಂದೆ ಅಳಬಾರದಲ್ಲವಾ ? ''ವಿಶ್ವಾಸ, ಯಾರದೋ ಅಪರಾಧಕ್ಕೆ ನೀವ್ಯಾಕಿಷ್ಟು ಆತಂಕಗೊಂಡಿದ್ದೀರಿ. ನೋಡು ಇದೆಲ್ಲ ಸ್ವಲ್ಪದಿನ. ರಾಜಕೀಯ ಕಾರಣಗಳಿವು. ತಲೆಕೆಡಿಸಿಕೊಳ್ಳೋದು ಬಿಟ್ಟು ಪರೀಕ್ಷೆ ತಯಾರಿ ಮಾಡಿ. ಊರ ಮಂದಿ ಉಸಾಬರಿ ಈಗ ಬೇಡ. ಸ್ನೇಹ ತಪ್ಪಲ್ಲ...'' ನನಗೇ ಖಾತ್ರಿಯಲ್ಲದ ಮಾತುಗಳು.

ಊರ ವಾತಾವರಣ ಉಬ್ಬಸಹತ್ತಿದಂತಿದ್ದ ದಿನಗಳಲ್ಲಿ ಅವರವರ ಹೊಟ್ಟೆಯೊಳಗಿನ ಮಾತು ಹಂಚಿಕೊಳ್ಳುವುದಕ್ಕವರಿಗೆ ನಮ್ಮ ಮನೆ ಪ್ರಶಸ್ತವಾಗತೊಡಗಿತ್ತು. ನಾನವರ ಮಾತಿನಲ್ಲಿರಲಿ, ಇಲ್ಲದಿರಲಿ, ತಮ್ಮ ಪಾಡಿಗೆ ತಾವು ಹೊರಕೋಣೆಯಲ್ಲಿ ಏನೇನೋ ಮಾತಾಡಿ ಹೋಗುತ್ತಿದ್ದರು. ತೀರಾ ಅನಿವಾರ್ಯವಿದ್ದಾಗ ಕರೆಯುತ್ತಿದ್ದರು. ಅಮ್ಜದ್‌ನ ಮನೆಯಲ್ಲಿ ಆಕಳು ಕರು ಹಾಕಿತ್ತಂತೆ. ಗಿಣ್ಣ, ಗಿಣ್ಣದ ಹಾಲು ಹೊತ್ತು ತಂದಿದ್ದ. ಗಿಣ್ಣ ತಿನ್ನದೆ ಅದ್ಯಾವ ಕಾಲವಾಗಿತ್ತೋ ? ಡಬ್ಬಿತೆಗೆದು ಚಪ್ಪರಿಸಿ ತಿಂದೆ. ''ನಮ್ಮ ಅಮ್ಮಿ ತಿನ್ನಲಿಕ್ಕಿಲ್ಲ. ಒಯ್ಯಬ್ಯಾಡ. ಬೇಕಿದ್ದರೆ ಹಾಲು ಒಯ್ಯಿ'' ಎಂದಿದ್ದರು ಅಂದ. ಅವನ ಮುಖ ನೋಡಿದೆ. 'ಅಯ್ಯೋ ದೇವರೇ' ಎಂದಿದ್ದೆ. ಬೇರಾವ ಮಾತೂ ಬರಲಿಲ್ಲ. ಅಮ್ಜದ್ ಯೂನಿವರ್ಸಿಟಿ ಮಟ್ಟದ ಲಾಂಗ್‌ಜಂಪ್ ಚಾಂಪಿಯನ್ ಆಗಿ ಕಾಲೇಜಿಗೆ ಹೆಸರು ತಂದಿದ್ದ. ವಿಶ್ವಾಸ ಜಾನಪದ ಹಾಡಿನ ಸ್ಪರ್ಧೆಗಳಲ್ಲಿ ಬಹುಮಾನ ಪಡೀತ ದಸರಾ ಸಮ್ಮೇಳನದವರೆಗೂ ಹೋಗಿ ಬಂದ. ಸ್ವಲ್ಪ ತಂಗಾಳಿ ಸುಳಿದಂತಾಗಿತ್ತು. ಬಲಗಾಲು ಸ್ವಲ್ಪ ವಾರೆಯಿದ್ದ ಹುಡುಗಿ ಪಾರ್ವತಿ ಪಾಟೀಲ ಒಂದು ಸಂಜೆ 'ಮಿಸ್, ನಾನು ಅಮ್ಜದ್‌ನನ್ನ ಪ್ರೀತಿಸ್ತೀನಿ. ಅವನನ್ನೇ ಮದ್ವೆ ಮಾಡ್ಕೋತೀನಿ' ಎಂದು ಅಳತೊಡಗಿದಳು. ಅವಳ ಮಾತು ಯಾವುದೋ ಉದ್ವೇಗದೊಳಗೆ ಹಾದಿತ್ತು. ತುಂಬ ವಿವೇಚನೆಯಿಂದ ಕೂಡಿದ ಮಾತಾಗಿರಲಿಲ್ಲ ಅದು. ''ಹುಡುಗಾಟವಲ್ಲ ಪಾರ್ವತಿ ಬದುಕು. ಒಂದು ಸುರಕುಂಭದ ಪ್ರಕರಣವೇ ಏನೆಲ್ಲ ಆಯಿತಲ್ಲವೇ ? ನಿಧಾನವಾಗಿ ಯೋಚನೆ ಮಾಡುವಿಯಂತೆ'' ಎಂದು ಸಮಾಧಾನಿಸಿ ಕಳಿಸಿದ್ದೆ. ಮುಂದಿನ ರಾಖಿ ಹಬ್ಬದಲ್ಲಿ ಪಾರ್ವತಿ ಅಮ್ಜದ್‌ನಿಗೆ ರಾಖಿ ಕಟ್ಟಿದ್ದಳು. ನಾನು ಕಾಣೋ ಹಾಗೆ. ಇದೇನೋ ಗೊತ್ತಿಲ್ಲದ ಅಮ್ಜದ್ ತನ್ನ ಸೈಕಲ್ ಹತ್ತಿಹೋಗಿ ಪಾರ್ವತಿಗೊಂದು ಪೆನ್ನು ಗಿಫ್ಟ್ ಕೊಟ್ಟಿದ್ದ.



'ವ್ಯಾಸಂಗ' ಮಾಡ್ತಾರೋ ಅಥವಾ ಯಾವ ಉಗ್ರರ 'ಸಂಗ' ಮಾಡಿ ಏನಾಗಿಬಿಡ್ತಾರೋ ಅಂತ ಶಾಲೆಗೆ ಕಳಿಸೋಕೂ ಆತಂಕ ಕಣ್ರೀ..!!

ವಿಶ್ವಾಸನ ಮನೇಲಿ 'ಬ್ಯಾಟಿ' ಇತ್ತಂತೆ. 'ನಾಳೆ ರಾತ್ರಿ ಊಟ ತರ್ತೇನೆ ಮಿಸ್' ಎಂದು ಹೋಗಿದ್ದ. ಆದರೆ ಬಂದಿದ್ದು ಮಾತ್ರ ಮಾರನೆಯ ಬೆಳಿಗ್ಗೆ. ಸಣ್ಣ ಸಣ್ಣ ಸಿಲ್ವಾರ್ ಡಬ್ಬಿ ಲೋಟಗಳಲ್ಲಿ ಹಸಿಖಾರ, ಒಣಖಾರ ಹಾಕಿದ ಸುಕ್ಕಾ, ಫ್ರೈ ಹೀಗೆ ತರಹಾವರಿ. ಅಡಿಗೆಮನಿ ಕಟ್ಟೆಯ ಮೇಲೆ ಒಂದೊಂದೇ ತೆಗೆದಿಡುತ್ತಿದ್ದ ಹಾಗೆ ಗಮಗಮ ಎಂಬುದು ಪದರ ಪದರಾಗಿ ಹಬ್ಬಿ... ಬೇಳೆಸಾರಿಗೆ ಜಿಡ್ಡುಗಟ್ಟಿದ್ದ ನನ್ನ ನಾಲಿಗೆ ಒಳಗೇ ಲವಲವ ಎನ್ನುತ್ತಿತ್ತು. ವಿಶ್ವಾಸನ ಮುಖ ಮಾತ್ರ ಹೀರಿ ಒಗೆದಂತಿತ್ತು. ಕಣ್ಣೆಲ್ಲ ಕೆಂಪು. 'ಯಾಕೋ ಒಂಥರಾ ಇದ್ದೀಯಾ' ಎಂದೆ. 'ಏನಿಲ್ಲ ಮಿಸ್' ಎಂದ. ನಿನ್ನೆಯ ಕೆಲಸದ ಸುಸ್ತಿದ್ದೀತು ಎಂದುಕೊಂಡು ನಾನು ನನ್ನ ತಾಪತ್ರಯಗಳಲ್ಲಿ ಮುಳುಗಿದೆ. ಎಷ್ಟೋ ಹೊತ್ತಿನ ಮೇಲೆ ಸುಶಾಂತ 'ಅಣ್ಣ ಅತ್ತಿದೆ... ಅಣ್ಣ ಅತ್ತಿದೆ' ಎನ್ನತೊಡಗಿದ. ವಿಶ್ವಾಸ ಕಣ್ಣೊರೆಸಿಕೊಳ್ತಿದ್ದ. ''ನಿನ್ನೆ ನಮ್ಮ ಅಪ್ಪ ಅಮ್ಜದ್‌ನನ್ನ ಊಟಕ್ಕೆ ಕರೀಬೇಡ ಎಂದರು ಮಿಸ್... ಇಷ್ಟು ವರ್ಷದಲ್ಲಿದು ಮೊದಲನೇ ಸಲ...'' ಮುಂದೆ ಮಾತಾಡಲಾಗುತ್ತಿರಲಿಲ್ಲ ಅವನಿಗೆ. ನನಗೂ ಕಣ್ಣೆಲ್ಲ ಉರಿ ಉರಿ. ಏನಾಗುತ್ತಿದೆ ಹೀಗೆ, ಏನು ಮಾಡಲು ಸಾಧ್ಯ ? ಮೊನ್ನೆ ಅಂಗಳದ ಕಸ ಹೊಡೆಯುವಾಗ ನೋಡಿದ್ದೆ. ಇವರ ಕ್ಲಾಸಿನದೇ ಹುಡುಗ ಹಿರೇಮಠ, ಅದೇ ಮೊದಲ ಡೆಸ್ಕಿನ ಮೊದಲ ಸೀಟಿನಲ್ಲಿ ಕೂತು – ಕರ್ಣರಸಾಯನದ ಸಂಕಟಕ್ಕೆ ಮುಖ ಬಾಡಿಸಿಕೊಳ್ಳುವವ ಆ ಅದೇ ಕವಾಯತಿಗೆ ಹೊರಟಿದ್ದ. ಅವನೇ, 'ಜಿಹಾದ್' ಕಲಿಸುವಾಗ – ಮಿಸ್ ಅಲ್ಲಿರೋ ಧರ್ಮದ ತಪ್ಪುಗಳ ಬಗ್ಗೆ ಅಷ್ಟೇ ಹೇಳಿ. ಅದ್ಯಾಕೆ ಹಿಂದೂಧರ್ಮದ ಉದಾಹರಣೆಗಳನ್ನು ಕೊಡ್ತೀರಿ – ಎಂದು ಸೆಟೆದು ಕೇಳಿದ್ದ. ತಣ್ಣಗೆ ವಿಷಾದ ಭಾವ ಗಾಳಿಯಷ್ಟೇ ಸಹಜವಾಗಿ ಆವರಿಸಿಕೊಳ್ಳುತ್ತಿತ್ತು.

ಎಷ್ಟೋ ದಿನಗಳ ನಂತರ ಮೊದಲ ಸರ್ತಿ ಅಮ್ಜದ್ ಒಬ್ಬನೇ ಬಂದಿದ್ದ. ಯಾಕೆ ಬಂದಿದ್ದನೋ ? ಎಷ್ಟು ಕೇಳಿದರೂ ಏನೂ ಹೇಳಲಿಲ್ಲ. ಎಲ್ಲೋ ಕೂತು ಅತ್ತು ಹಗುರಾಗಿ

ಬಂದವನಂತಿದ್ದ. ಸುಶಾಂತನನ್ನ ಎತ್ತಿಕೊಂಡು ''ಅಣ್ಣ, ಅರಬ್‌ಗೆ ಹೋಗ್ತೀನಿ ಅರಬ್‌ಗೆ. ಅಲ್ಲಿಂದ ಬರುವಾಗ ದೊಡ್ಡ ಚಾಕ್ಲೇಟ್ ತರ್ತೀನಿ'' ಅಂದದ್ದು ಕೇಳಿತ್ತು. 'ಅಮ್ಜದ್ ಏನಂದೆ ?' ಎಂದೆ. 'ಏನಿಲ್ಲ ಮಿಸ್' ಅಂದ. ನಾಚಿಕೆ ಮುಳ್ಳಿನಂತಹ ಹುಡುಗ.

ಸಂಕಟದ ಹಗಲು-ರಾತ್ರಿಗಳು. ಡಾಕ್ಟರ ಮಗಳು ನೀತಾ ಪಾರ್ಟ ಟೈಂ ಲೆಕ್ಚರರ ಹಮೀದ ನೊಡನೆ ಮಾತಾಡುತ್ತಿದ್ದಳಂತೆ. ಕಾಲೇಜು ಮುಗಿದ ಮೇಲೆ. ಡಾ|| ಹಮೀದನ ಮೇಲೆ ಇಂತಹ ಅನೈತಿಕಕ್ಕಾಗಿ ಹಲ್ಲೆಯಾಗಿದೆ. ಕೆ.ಎಂ.ಸಿ.ಯಲ್ಲಿ ಒಂದು ವಾರ ಅಡ್ಮಿಟ್ ಆದ ಹಮೀದ ಮತ್ತೆ ಕಾಲೇಜಿಗೆ ಬರಲಿಲ್ಲ. ಪ್ರಿನ್ಸಿಪಾಲರು ''ಮೇಡಂ ಹುಶಾರಾಗಿರಿ. ಹುಡುಗರ ಹತ್ರ ಭಾಳ ಒಡನಾಟ ಬೇಡ. ಊರ ಉಸಾಬರಿ ನಮಗ್ಯಾಕೆ ? ನೌಕರಿಗೆ ಎಷ್ಟೋ ಅಷ್ಟು'' ಎಂದರು. ಒಂದೆರಡು ಸರ್ತಿ ಪಾಟೀಲ್ ಸರ್ ಮನೆಗೆ ಫೋನ್ ಮಾಡಿ ''ಅಲ್ಲಿ ವಿಶ್ವಾಸ ಇದ್ದಾನಾ ಮೇಡಂ ? ಸ್ವಲ್ಪ ಕೆಲಸ ಇತ್ತು'' ಎಂದಿದ್ದರು. ಸಹಜವಾಗಿ, 'ಇದ್ದ ಸರ್, ಈಗ ಮನೆಗೆ ಹೋಗಿರಬೇಕು' ಎಂದಿದ್ದೆ. ಇವೆಲ್ಲ ಸರಳ ಮಾತುಗಳಲ್ಲ ಅಂತ ತಿಳಿದದ್ದು ಆಮೇಲೆ.

ಆ ಮಧ್ಯಾಹ್ನದ ಟಪಾಲಿನ ದೊಡ್ಡ ಲಕೋಟೆ ಬಂದ ಮೇಲೆ. ಗಲೀಜು ವಾಸನೆ. ವಿಷವೇರಿದ ತತ್ತರ. ''ಕಾಲೇಜಿನ ಹುಡುಗರನ್ನ ಮನೇಲಿಟ್ಟುಕೊಂಡು... ಒಬ್ಬ ಗಂಡ ಸಾಕಾಗೋದಿಲ್ಲವಾ ?... ಯಾವ ಯಾವ ಪಾಠ ಮಾಡುತ್ತೀ ?... ನಿನ್ನ ಗಂಡನಿಗೆ ತಿಳಿಸುವ ಮೊದಲು ಎಚ್ಚರಾಗು...'' ಈತ ಹಾವೇರಿಗೆ ಹೋಗಿ ಬರುತ್ತಿದ್ದ. ನನ್ನನ್ನು ಯಾವಾಗಲೂ ಅಂದವನಲ್ಲ. ಅನುಮಾನಿಸಿದವನಲ್ಲ. ಆದರೆ ಗೂಡು ನೆಲಕ್ಕೆ ಬಿದ್ದು ಮೊಟ್ಟೆ-ಮರಿಗಳೆಲ್ಲ ಅಪ್ಪಚ್ಚಿಯಾಗದ ಹಾಗೆ ಜೋಲಿ ಸಂಭಾಳಿಸಬೇಕಿತ್ತು. ಆ ಹೊಲಸು ಹಾಳೆಗಳೊಂದಿಗೇ ನನ್ನೊಳಗಿನ ಉತ್ಸಾಹ, ಛಲಗಳೆಲ್ಲ ಸುಟ್ಟುಹೋದವು. ಎಷ್ಟು ಮೆತ್ತಿದರೂ ಉದುರಿಬೀಳುವ ಉಸುಕಿನಂತಾಗಿತ್ತು ಮನಸ್ಸು. ಏನೂ ಆಗೇಯಿಲ್ಲ ಎಂಬ ನಾಟಕದಲ್ಲಿ ದಿನ ಸಾಗುತ್ತಿತ್ತು. ಒಳಗೆ ಅವಮಾನದ ಸಮುದ್ರ ಮೊರೆತ. ಎಲ್ಲರ ಮುಂದೆ ಜೋರಾಗಿ ಚೀರಿಕೊಳ್ಳಬೇಕೆನ್ನಿಸುತ್ತಿತ್ತು. ಊಹೂಂ. ಯಾವುದೂ ನಡೆಯಲಿಲ್ಲ. ಸುಮ್ಮನೆ ಮುದುಡಿ ಮುದುಡಿ ಅಬ್ಬೇಪಾರಿ ನಗುವುದಬಿಟ್ಟು.

ಅಮ್ಜದ್ ಪರೀಕ್ಷೆ ಫಾರ್ಮ ತುಂಬಲೇಯಿಲ್ಲ. ಆದರೆ ಸೆಂಡ್‌ಆಫ್‌ಗೆ ಬಂದ. ಮೊದಲ ಸರ್ತಿ ಮೈಕ್ ಹಿಡಿದ. 'ನಮ್ಮ ಮೇಡಂ ಹತ್ತುತ್ತಿದ್ದ ಬೆಂಕಿ ನಂದಿಸಿದರು' ಅಂತೇನೇನೋ ಬೆಪ್ಪು ಬೆಪ್ಪಾಗಿ ಅಂದ. ಕಣ್ಣಿಗೆ ಹಚ್ಚಿದ ಕರ್ಚೀಫ ತೆಗೆಯಲಾಗಲೇ ಇಲ್ಲ ನನಗೆ. ವಿಶ್ವಾಸ್ ಗಂಭೀರನಾಗಿದ್ದ. 'ಮಿಸ್ ನನ್ನೊಂದಿಗೆ ಸರಿಯಾಗಿ ಮಾತಾಡ್ತಿಲ್ಲ' ಅನ್ನಿಸಿಬಿಟ್ಟಿತ್ತು ಅವನಿಗೆ. 'ತಾನು ಮಾಡಿದ ತಪ್ಪೇನು ?' ಅಂತ ತಿಳಿಯದೆ ಕಂಗಾಲಾಗಿ ನೆಲನೋಡುತ್ತ ತೆವಳಿದಂತೆ ನಡೆಯತೊಡಗಿದ್ದ. ಅಮ್ಜದ್ ಮುಂಬೈಯಲ್ಲಿರೋ ಚಿಕ್ಕಪ್ಪನ ಅಂಗಡಿ ಕೆಲಸಕ್ಕೆ ಅಂತ ಹೋದ. ವಿಶ್ವಾಸನಿಗೆ ಹಿರೇಮಠನಂಥವರೊಂದಿಗೆ ಬೆರೆಯಲಾಗಲಿಲ್ಲ. ಬರಬರುತ್ತ ಸಪ್ಪಗಾಗುತ್ತಿದ್ದ. 'ಮಿಸ್ ಮಿಲಿಟ್ರಿ ಆಯ್ಕೆಯೇನಾದ್ರೂ ಪೇಪರಲ್ಲಿ ಗೊತ್ತಾದ್ರೆ ಹೇಳಿ' ಎಂದು ಹೇಳಿ ಹೋಗಿದ್ದ. 'ಮಿಲಿಟ್ರಿಗೆ ಹೋಗ್ತಿಯೇನಪ್ಪಾ ?' ಎಂದಿದ್ದೆ. ಯಾಕೋ ತಳಮಳವಾಗಿತ್ತು. 'ಇನ್ನೇನು ಮಾಡಲಿ ಮಿಸ್, ಅಪ್ಪ ಹೊಲಿದ ಅಂಗಿಗೆ ಗುಂಡಿ ಹಚ್ಚುತ್ತ ಕೂಡಬೇಕಷ್ಟೆ. ಅದೂ ತಿಂಗಳಿಗೊಂದು' ಎಂದು ನಕ್ಕಿದ್ದ. ಈಗಲೂ ಬರೆಯಿಟ್ಟಂಥ ಆ ನಗು ಕಾಡುತ್ತಿದೆ.

ತಪ್ಪು ಮಾಡಿದೆನೇ ನಾನು ? ಟ್ರಾನ್ಸ್‌ಫರ್ ಕೌನ್ಸಿಲಿಂಗ್‌ನಲ್ಲಿ ಹಾವೇರಿಗೆ ವರ್ಗವಾದಾಗ ಆಳದೊಳಗೆಲ್ಲೋ ಬಿಡುಗಡೆಯ ಉಸಿರು ಹೊಮ್ಮಿದ್ದು ನಿಜ. ದೊಡ್ಡ ಸುದ್ದಿ ಮಾಡದೆ ಬಯಲೂರ ದಾಟಿ ಬಂದಾಗಿದೆ. ಆವತ್ತು ಟ್ರಕ್ಕಿಳಿಸಿಕೊಳ್ಳುವಾಗ ಇದ್ದ ಮಕ್ಕಳು ಈಗ ಟ್ರಕ್ಕೇರುವಾಗ ಇರಲಿಲ್ಲ. ಅವರು ಹೊಂದಿಸಿಕೊಟ್ಟಿಲ್ಲದ ಮನೆಯನ್ನ ಇಷ್ಟು ವರ್ಷಗಳ ನಂತರವೂ ಹೊಂದಿಸುತ್ತಲೇ ಉಳಿದುಬಿಟ್ಟಿದ್ದೇನೆ.

ಈಗಲೂ ಕಾಡುತ್ತಿದೆ. ಬರುವಾಗ ಊರಲ್ಲಿದ್ದ ಮಕ್ಕಳೊಂದಿಗೆ ಮಾತಾಡಿ ಬರಬೇಕಿತ್ತು. ಕಡೆಗೆ ವಿಶ್ವಾಸನ ಬಳಿಯಾದರೂ. ನಾನ್ಯಾಕೆ ಅಷ್ಟು ಭಯಗೊಂಡೆ ? 'ಮಿಸ್, ಇಷ್ಟು ಬೇಗ ತಣ್ಣೀರಿಗೆ ಕೈ ಹಾಕಿದರೆ ಮುಂದೆ ಬೆರಳು ನೋಯುತ್ತವಂತೆ. ಅವ್ವ ಹೇಳಿದ್ದಾಳೆ' ಎನ್ನುತ್ತ ದೇಶಾಂತರ ಇರುವ ತಮ್ಮನ ಮಮಕಾರವನ್ನು ಉಣಬಡಿಸಿದ್ದ. ಸುಶಾಂತ ಮೂಗಿನ ಹೊಳ್ಳೆಯಲ್ಲಿ ಮುತ್ತು ಸೇರಿಸಿಕೊಂಡು ತೇಲುಗಣ್ಣಾದಾಗ ಮಗುವನ್ನೆತ್ತಿಕೊಂಡು ಓಡಿಯೇ ಹೋಗಿದ್ದ, ಡಾಕ್ಟರರ ಬಳಿ. ಎಷ್ಟೆಲ್ಲ ನೆನಪುಗಳ ಗಾಳಿಗೆ ತೂರಿದ್ದೆ ನಾನು ! ಕನಸಿನಲ್ಲೂ 'ನನ್ನ ತಪ್ಪೇನು ಮಿಸ್ ?' ಎಂದು ಕೇಳುವಂತಿತ್ತು. ''ಇಲ್ಲ ಕಂದ. ನಿನ್ನ ತಪ್ಪೇನೂ ಇಲ್ಲ. ಚೆನ್ನಾಗಿರು, ಧೈರ್ಯವಾಗಿರು. ಬಿರುಸು ನೆಲದ ಮರವಾಗು. ಅಮ್ಜದ್‌ನ ಸ್ನೇಹ ಎಂದೂ ಕಳಚಿಕೊಳ್ಳಬೇಡ...'' ಹೇಳಲೇಬೇಕಿದ್ದ ಮಾತುಗಳ ಹೇಳದೆ ಬಂದದ್ದಕ್ಕಾಗಿ ಕಡೆಗೊಮ್ಮೆ ನನ್ನ ಕ್ಷಮಿಸಿಬಿಡು ಕಂದಾ.


ಡಾ|| ವಿನಯಾ

'ನೆಮ್ಮದಿ', ೧೨೪, ಸಿಐಟಿಬಿ ಕಾಲನಿ, ಶ್ರೀನಗರ, ಧಾರವಾಡ - ೫೮೦ ೦೦೩


## ಕರುಣೆಯೆಂಬುದು

ಕರುಣೆಯೆಂಬುದು ಇರದೆ
ಮರ ಆಕಾಶದೆತ್ತರಕೆ ಬೆಳೆಯದು
ಚಿಗುರು ಹೂ ಬಿಡದು
ಹಕ್ಕಿ ರೆಕ್ಕೆ ಬಿಚ್ಚಿ ಸ್ವಚ್ಛಂದ ಹಾರದು
ಕೆಳಗಿಳಿದು ಬೆಚ್ಚಗೆ ಗೂಡು ಕಟ್ಟದು

ಶುದ್ಧ ನೀರು, ಶುದ್ಧ ಗಾಳಿ
ಸಿಗುವುದೇ ಪವಾಡ

ವಿರಸವಿದ್ದರೂ ಪತಿಪತ್ನಿಯರು
ಕೂಡಿ ಬದುಕುವುದು ಅದ್ಭುತ

ತುಸು ಏದುಸಿರುಬಿಟ್ಟರೂ
ಗಾಡಿ ಏರುದಾರಿಯಲ್ಲಿ
ಚಲಿಸುವುದು ದಿನನಿತ್ಯ

ಯಾವುದೋ ಕರುಣೆ ಯಾವುದೋ ಬದುಕನ್ನು
ನಿರಂತರ ಕಾಯುವುದು

ಆದರದು
ಕಪ್ಪು ಕತ್ತಲಿನಲ್ಲಿ
ಅಡಗಿ ಕುಳಿತಿರುವುದು


ಡಾ|| ಸಂತೋಷ ಚೊಕ್ಕಾಡಿ

೩೪೭೪, ನಗೀನವಿಲು, ೭ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ
'ಐ' ಬ್ಲಾಕ್, ಕನಕದಾಸನಗರ, ಮೈಸೂರು - ೫೭೦ ೦೨೨







ಬದಲು ಕೈತೋಟದಲ್ಲಿ ಔಷಧೀಯ ಸಸ್ಯಗಳನ್ನು ಬೆಳೆಸಿ ಅವುಗಳ ಕಷಾಯ ಕುಡಿದು ನೆಮ್ಮದಿಯಾಗಿರುವವರೂ ಇದ್ದಾರೆ.

ಅನೇಕ ದೃಷ್ಟಿಯಿಂದ ಸಾವಯವ ತಾರಸಿ ತೋಟ ಇಂದು ಮಹತ್ವದ್ದೆನಿಸಿದೆ. ಮುಖ್ಯವಾಗಿ, ಮನೆಯ ಜೈವಿಕ ತ್ಯಾಜ್ಯದ ಸದ್ಬಳಕೆ ಹಾಗೂ ಆರೋಗ್ಯಪೂರ್ಣ ತರಕಾರಿ ಬೆಳೆದುಕೊಳ್ಳುವುದಕ್ಕೆ ತಾರಸಿ ತೋಟ ಹೆಚ್ಚು ಸಹಕಾರಿ. ಮನೆಯ ಸೌಂದರ್ಯ ಹಾಗೂ ಮನೋಲ್ಲಾಸಕ್ಕೂ ಪೂರಕ. ಮನಸ್ಸಿದ್ದರೆ ಆರ್ಥಿಕ ಸಂಪಾದನೆ ಕೂಡ ಸಾಧ್ಯ. ರಾಜ್ಯದ ವಿವಿಧ ನಗರ ಪಟ್ಟಣಗಳಲ್ಲಿ ಇತ್ತೀಚಿನ ವರ್ಷಗಳಲ್ಲಿ ತಾರಸಿ ತೋಟ ಜನಪ್ರಿಯವಾಗುತ್ತಿದೆ.

ಬೆಂಗಳೂರಿನಲ್ಲಿ ನೆಲೆಸಿರುವ ಹಿರಿಯ ಲೇಖಕಿ ಅನುಸೂಯ ಶರ್ಮ ಕಳೆದ ಅನೇಕ ವರ್ಷಗಳಿಂದ ಶ್ರದ್ಧೆ, ಉತ್ಸಾಹದಿಂದ ತಾರಸಿ ತೋಟದ ಕೃಷಿ ಮಾಡುತ್ತಿದ್ದಾರೆ. ಅವರು ತಮ್ಮ ಅನುಭವವನ್ನು ಆಧರಿಸಿ 'ಸಾವಯವ ತಾರಸಿ ತೋಟ – ಒಂದು ಇಣುಕು ನೋಟ' ಕೃತಿ ರಚಿಸಿದ್ದಾರೆ. ಇದು ಅವರ ಮೊದಲ ಪುಸ್ತಕ ಹಾಗೂ ಧಾರವಾಡದ ಕೃಷಿ ಮಾಧ್ಯಮ ಕೇಂದ್ರದ ಮೂರನೇ ಪ್ರಕಟಣೆ.

ತಾರಸಿ ತೋಟದ ಆವಶ್ಯಕತೆ, ಆರಂಭಿಕ ಹೆಜ್ಜೆಗಳು - ವಿನ್ಯಾಸ, ಆಲಂಕಾರಿಕ ಸಸ್ಯಗಳು, ಹೂವಿನ ಗಿಡಗಳ ಬೇಸಾಯ ಕ್ರಮ, ವಿಷಮುಕ್ತ ತರಕಾರಿ, ಸುಗಂಧ ಸಸ್ಯಗಳು, ಔಷಧೀಯ ಸಸ್ಯಗಳು, ಗಿಡಗಳ ಪೋಷಣೆಗೆ ಕಾಂಪೋಸ್ಟ್, ಜೈವಿಕ ಕೀಟನಾಶಕಗಳು, ನೈಸರ್ಗಿಕ ನೆರಳುಮನೆ... ಹೀಗೆ ಹತ್ತಾರು ವಿಷಯಗಳ ಕುರಿತು ಪುಸ್ತಕದಲ್ಲಿ ವಿವರಗಳಿವೆ. ಶರ್ಮ ಅವರು ತಮ್ಮ ಅನುಭವದ ಹಿನ್ನೆಲೆಯಲ್ಲಿ ನೀಡುವ ಅನೇಕ ಸಲಹೆಗಳು ಈ ವಿಷಯದಲ್ಲಿ ಆಸಕ್ತಿ ಹೊಂದಿರುವವರಿಗೆ ಉಪಯುಕ್ತ. ಆಕರ್ಷಕ ಮುಖಪುಟ, ಸರಳ ವಿವರಣೆ ಹಾಗೂ ಅಚ್ಚುಕಟ್ಟಾದ ಮುದ್ರಣ ಪುಸ್ತಕದ ವೈಶಿಷ್ಟ್ಯ.

---

ಲೇಖಕರು
ಅನುಸೂಯ ಎಸ್. ಶರ್ಮ

ಪುಟ : ೮+೪೦
ಬೆಲೆ : ರೂ. ೩೦

ಪ್ರಕಾಶಕರು
**ಕೃಷಿ ಮಾಧ್ಯಮ ಕೇಂದ್ರ**
೧೯೯, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ
ಧಾರವಾಡ - ೫೮೦ ೦೦೮ ದೂರವಾಣಿ : ೯೯೦೦೫೧೭೭೪೯
e-mail : caam@sancharnet.in website : www.farmedia.org

# ಸಾವಯವ ತಾರಸಿ ತೋಟ

## ಒಂದು ಇಣುಕು ನೋಟ

**ಕೈ**ತೋಟದಲ್ಲಿ ಅದೆಷ್ಟು ವೈವಿಧ್ಯ ?! ಒಬ್ಬೊಬ್ಬರದೂ ಒಂದೊಂದು ಆಸಕ್ತಿ. ಕೆಲವರಿಗೆ ಸುಂದರ ಹೂಗಿಡಗಳನ್ನು ಬೆಳೆಸುವ ಹವ್ಯಾಸ; ಇನ್ನು ಕೆಲವರಿಗೆ ತೋಟವೂ ಬೇಕು, ತರಕಾರಿಯೂ ಬೇಕು. ಮನೆಯ ಜೈವಿಕ ತ್ಯಾಜ್ಯದ ಸಮರ್ಪಕ ನಿರ್ವಹಣೆಯ ಕಾಳಜಿಯಿಂದ ಕೈತೋಟ ಮಾಡುವವರೂ ಇದ್ದಾರೆ.

ಕೃಷಿ-ಗ್ರಾಮೀಣ ಹಿನ್ನೆಲೆಯುಳ್ಳವರು ನಗರಗಳಲ್ಲಿ ನೆಲೆನಿಂತಾಗ ಅವರಿಗೆ ಕೈತೋಟ ಮಾಡುವುದೆಂದರೆ ಊರಿನ ನೆನಪು ನಿತ್ಯ ನವೀಕರಿಸಿದಂತೆ. ಊರಿಗೆ ಭೇಟಿ ನೀಡಿದಾಗಲೆಲ್ಲ ಅಲ್ಲಿಂದ ಜೋಪಾನವಾಗಿ ತಂದ ಹೂವಿನ ಗಿಡವೋ ತರಕಾರಿ ಬೀಜವೋ ತಮ್ಮ ಪುಟಾಣಿ ಕೈತೋಟದಲ್ಲಿ ಚಿಗುರಿ ಬೆಳೆದಾಗ ಅವರಿಗೆ ಆಗುವ ಸಂತೋಷ ವರ್ಣನಾತೀತ.

ಮನೆಯ ಸುತ್ತ ಒಂದಿಂಚೂ ಜಾಗವಿಲ್ಲದವರು ಕೂಡ ತಾರಸಿ ತೋಟ ನಿರ್ಮಿಸುವ ಮೂಲಕ ತಮ್ಮ ಆಸಕ್ತಿಯನ್ನು ಪೋಷಿಸಿಕೊಳ್ಳುತ್ತಿರುವ ದೃಷ್ಟಾಂತಗಳೂ ಇವೆ. ಸಣ್ಣಪುಟ್ಟ ಕಾಯಿಲೆಗಳಿಗೂ ವೈದ್ಯರಲ್ಲಿಗೆ ಓಡುವ

**ಅನಿತಾ ಪೈಲೂರು**
ಕೃಷಿ ಮಾಧ್ಯಮ ಕೇಂದ್ರ, ೧೯೯, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ
ಧಾರವಾಡ - ೫೮೦ ೦೦೮



## ಗಗನ ಸಖಿ

ಸಾರಾ ಅಬೂಬಕ್ಕರ್

**ಪುಟ : v + ೧೨೬** **ಬೆಲೆ : ರೂ. ೭೦**

**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨, ಸೂಕ್ಷ್ಮತರಂಗ ನಿಲಯ ರಸ್ತೆ, ಮಂಗಳೂರು - ೫೭೫ ೦೦೬

ತಮ್ಮ ಕೃತಿಗಳ ಮೂಲಕ ಮುಸ್ಲಿಂ ಸಂವೇದನೆಯನ್ನು ದಟ್ಟವಾಗಿ ಪರಿಚಯಿಸಿದ ಹಾಗೂ 'ಹೆಣ್ಣ'ನ್ನು ಮುಖ್ಯವಾಗಿರಿಸಿಕೊಂಡು ಚಿಂತಿಸುವ ಸಾರಾ ಅಬೂಬಕ್ಕರ್ ಅವರ ಬರವಣಿಗೆ ಗಂಭೀರ ವಾದದ್ದು. ಅವರ 'ಗಗನ ಸಖಿ' ಕೃತಿ ವಿಭಿನ್ನ ವಸ್ತುವನ್ನುಳ್ಳ ಒಂಭತ್ತು ಕತೆಗಳಿಂದ ಕೂಡಿದೆ. ಎಲ್ಲಾ ಕತೆಗಳಲ್ಲೂ ಸ್ತ್ರೀಗೆ ಆಗುತ್ತಿರುವ ಅನ್ಯಾಯವನ್ನು, ಸ್ತ್ರೀಪರವಾದ ಕಾಳಜಿಯನ್ನು, ವ್ಯವಸ್ಥೆಯ ವಿರುದ್ಧದ ಪ್ರತಿಭಟನೆಯ ನಿಲುವನ್ನು ಕಾಣಲು ಸಾಧ್ಯ. 'ಗಗನ ಸಖಿ' ಕತೆ ಆರಂಭದಿಂದ ಕೊನೆವರೆಗೂ ಸಿನಿಮೀಯವಾಗಿ ಕಂಡರೂ, ವ್ಯವಸ್ಥೆಗೆ ವಿರುದ್ಧವಾಗಿ ಬದುಕಲು ನಿರ್ಧರಿಸುವ ಹೆಣ್ಣುಮಗಳೊಬ್ಬಳ ನಿರ್ಧಾರದಿಂದ ಪ್ರಗತಿಪರವಾಗಿದೆ. ಕೆಲವು ಕತೆಗಳು ವಾಸ್ತವದಲ್ಲಿ ನಡೆದ ಘಟನೆಗಳಾಗಿದ್ದು, 'ಓ... ರಾಮಾ' – ಕೋಮು ಗಲಭೆಯಿಂದ ಸುಟ್ಟು ಕರಕಲಾದ ಮುಸ್ಲಿಂ ಮಹಿಳೆಯೊಬ್ಬಳ ದಾರುಣ ಚಿತ್ರವನ್ನು ಯಾವ ಮುಲಾಜೂ ಇಲ್ಲದೆ ಕಟ್ಟಿಕೊಡುತ್ತದೆ.

## ನೊಬೆಲ್ ಪುರಸ್ಕೃತರು (ಸಮಗ್ರ ಮಾಹಿತಿ ಕೋಶ)

ಸಿ. ಆರ್. ಕೃಷ್ಣರಾವ್

**ಪುಟ : ೩೨೦** **ಬೆಲೆ : ರೂ. ೪೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧



ಇದು ಜಗತ್ತಿನ ಅತ್ಯಂತ ಶ್ರೇಷ್ಠ ಪ್ರಶಸ್ತಿಯಾದ ನೊಬೆಲ್ ಪುರಸ್ಕಾರವನ್ನು ಪಡೆದವರ ಸಮಗ್ರ ಮಾಹಿತಿಯನ್ನು ಒಳಗೊಂಡ ಕನ್ನಡದ ಮೊತ್ತಮೊದಲ ಬೃಹತ್ ಗ್ರಂಥ. ಒಟ್ಟು ೭೭೪' ಮಂದಿ ಮಹನೀಯರ ಜೀವನ ಮತ್ತು ಸಾಧನೆಗಳನ್ನು ಪರಿಚಯ ಮಾಡಿಕೊಡುವುದು ಈ ಕೃತಿಯ ಉದ್ದೇಶ. ಅಪಾರ ಓದು ಹಾಗೂ ಪರಿಶ್ರಮದ ಫಲವಾಗಿ ಲೇಖಕರ ಈ ಮಾಹಿತಿ ಕೋಶ ರೂಪುಗೊಂಡಿದೆ. ಪ್ರಶಸ್ತಿ ನೀಡಿದ ವರ್ಷ, ಪ್ರಶಸ್ತಿ ವಿಜೇತರ ಪೂರ್ಣ ಹೆಸರು, ಅವರ ಜೀವಿತ ಕಾಲ, ಪ್ರಶಸ್ತಿ ತಂದುಕೊಟ್ಟ ವಿಷಯ, ಬದುಕಿನ ಮುಖ್ಯ ಹಂತಗಳು ಮತ್ತು ಸಾಧನೆಗಳು – ಇದರ ಜತೆಗೆ ಅವರ ಭಾವಚಿತ್ರವಿದ್ದು ಆಕರ್ಷಣೀಯವಾಗಿದೆ. ಸಾಧ್ಯವಾದಷ್ಟು ಅಡಕವಾಗಿ ಮತ್ತು ಸ್ಪಷ್ಟವಾಗಿ ಅಧಿಕ ಮಾಹಿತಿಯನ್ನು ಒದಗಿಸಿರುವುದು ಈ ಕೃತಿಯ ವಿಶೇಷ. ಗ್ರಂಥಾಲಯಗಳಲ್ಲಿ, ಮನೆಗಳಲ್ಲಿ ಇರಲೇಬೇಕಾದಂಥ ಕೃತಿಯಿದು.



## ದ್ವಿಭಾಷಿಕರು

ಡಾ|| ಎಂ. ಭಾಗ್ಯಲಕ್ಷ್ಮಿ

**ಪುಟ : ೧೪ + ೨೩೬** **ಬೆಲೆ : ರೂ. ೧೫೦**

**ಸಖಿ ಪ್ರಕಾಶನ,** ಏಕಾಂತ ನಿಲಯ, ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ - ೫೮೩ ೨೦೧

ಇದು ಪಿಎಚ್.ಡಿ. ಪದವಿಗಾಗಿ ಒಪ್ಪಿಸಿದ ನಿಬಂಧದ ಪರಿಷ್ಕೃತ ರೂಪ. 'ದ್ವಿಭಾಷಿಕತೆ'ಯನ್ನು ಕುರಿತಾದ ಈ ಅಧ್ಯಯನ ಸಾಮಾಜಿಕ ಭಾಷಾಶಾಸ್ತ್ರದ ತಳಹದಿಯನ್ನು ಹೊಂದಿದೆ. ಇಲ್ಲಿ ದ್ವಿಭಾಷಿಕರ ಭಾಷಾಸ್ವರೂಪವನ್ನು ವಿವರಿಸು ವುದಷ್ಟೇ ಅಲ್ಲದೆ, ದ್ವಿಭಾಷಿಕತೆ ರೂಪುಗೊಳ್ಳಲು ಇರುವ ಕಾರಣಗಳು, ಅವರ ಮೇಲೆ ಇರುವ ಒತ್ತಡಗಳು, ಅದರ ನಿರ್ವಹಣೆಯ ತಂತ್ರಗಳು, ಭಾಷಾ ಕಲಿಕೆಯಲ್ಲಿ ಅದರ ಪ್ರಭಾವಗಳು – ಇವೇ ಮೊದಲಾದ ಸಂಗತಿಗಳ ಅಧ್ಯಯನದ ಮೂಲಕ 'ದ್ವಿಭಾಷಿಕತೆ' ಅಥವಾ 'ಬಹುಭಾಷಿಕ' ಸಂದರ್ಭವನ್ನು ಸಿದ್ಧ ಮಾದರಿಗಳನ್ನು ಅನುಸರಿಸದೆ, ವಿನೂತನ ವಿಧಿ-ವಿಧಾನದ ಮೂಲಕ ಆಳವಾಗಿ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನ – ಲಿಂಗ, ಶಿಕ್ಷಣ, ವರ್ಗ, ಕುಟುಂಬ, ಜಾತಿ ಆಧಾರಿತ, ಸಾಮಾಜಿಕ ಭಿನ್ನಾಂಶಗಳ ಮೂಲಕ ಹಾಗೂ ಕ್ಷೇತ್ರಕಾರ್ಯದ ಮೂಲಕ ವಿಸ್ತೃತವಾಗಿ ನಡೆದಿದೆ. 'ದ್ವಿಭಾಷಿಕತೆ' ಕುಗ್ಗುತ್ತಿರುವ, ಹಿಗ್ಗುತ್ತಿರುವ ಸನ್ನಿವೇಶ ಮತ್ತು ಕಾರಣ ಗಳು ಕುರಿತು ಅಧ್ಯಯನ ನಡೆಸಿದ್ದು, ಹಿನ್ನೆಲೆಯಲ್ಲಿ ಇದಕ್ಕೆ ಕಾರಣವಾದ ರಾಜಕೀಯ ಒತ್ತಡ ಹಾಗೂ ಇದರಿಂದಮೂಡುವ ಸಾಮಾಜಿಕ ಪರಿಣಾಮದ ಬಗ್ಗೆ ಈ ಕೃತಿ ಸೂಚನೆ ಗಳನ್ನು ನೀಡುತ್ತದೆ. ಭಾಗ್ಯಲಕ್ಷ್ಮಿಯವರ ಸಂಶೋಧನೆ, ಕ್ಷೇತ್ರಕಾರ್ಯ ಹಾಗೂ ನೂತನ ವಿಧಾನದಿಂದ ಮೂಡಿರುವ ಈ ಕೃತಿ ಭಾಷಾಧ್ಯಯನದ ಸಾಧ್ಯತೆಗಳನ್ನು ಹೆಚ್ಚಿಸಿದೆ.

ಹೊಸ ಓದು

## ಕಪಿಲಳ್ಳಿಯ ಒಂದಷ್ಟು ಕತೆಗಳು

ಡಾ|| ಬಿ. ಪ್ರಭಾಕರ ಶಿಶಿಲ



**ಪುಟ : xvi + ೧೨೦ = ೧೩೬** **ಬೆಲೆ : ರೂ. ೬೦**

**ರಾಜ್ ಪ್ರಕಾಶನ,** ನಂ. ೮೩, ಕೆ.ಎಸ್.ಆರ್.ಟಿ.ಸಿ. ಬಡಾವಣೆ, ಹನುಮಂತನಗರ, ಬನ್ನಿಮಂಟಪ, ಮೈಸೂರು - ೫೭೦ ೦೧೫

ಖ್ಯಾತ ಅರ್ಥಶಾಸ್ತ್ರಜ್ಞರೆಂದೇ ಗುರುತಿಸಲ್ಪಡುವ, ಅರ್ಥಶಾಸ್ತ್ರದ ಬಗ್ಗೆ ಅನೇಕ ಕೃತಿಗಳನ್ನು ಬರೆದಿರುವ ಪ್ರಭಾಕರ ಶಿಶಿಲರ ಈ ಕಥಾ ಸಂಕಲನದಲ್ಲಿ ವಿಭಿನ್ನ ವಸ್ತುಗಳನ್ನುಳ್ಳ ಹನ್ನೊಂದು ಕತೆಗಳಿವೆ. ಈ ಕತೆಗಳಲ್ಲಿ ಗ್ರಾಮೀಣ ಬದುಕು, ಜಾತಿ, ಧರ್ಮ ವ್ಯವಸ್ಥೆ, ವ್ಯಕ್ತಿ ಚಿತ್ರಣ, ಕಲೆ, ಮಾನವೀಯ ಮೌಲ್ಯಗಳನ್ನು ಚಿತ್ರಿಸಲಾಗಿದೆ. ಇಲ್ಲಿನ ಕತೆಗಳು ಹಳ್ಳಿಯೊಂದರ ಸಮಗ್ರ ಚಿತ್ರಣದೊಂದಿಗೆ, ಹಳ್ಳಿ ಬದುಕಿನಲ್ಲಿ ಕಾಲಿಟ್ಟ ಆಧುನಿಕತೆಯು ವ್ಯಕ್ತಿಗಳಲ್ಲಿ, ಸಂಪ್ರದಾಯದಲ್ಲಿ, ಮೌಲ್ಯಗಳಲ್ಲಿ ಉಂಟುಮಾಡಿದ ಪಲ್ಲಟವನ್ನು ದಾಖಲಿಸುತ್ತವೆ. 'ಕರಾಚಿ ಕಾರಣೋರು', 'ಒಂಟಿ ಬ್ಯಾರಿಯೂ ಅವಭೃತ ಉತ್ಸವವೂ' – ಕತೆಗಳ ಮೂಲಕ ಹಳ್ಳಿಗಳಲ್ಲಿ ಭಿನ್ನ ಧರ್ಮೀಯರ ನಡುವೆ ಸಾಧ್ಯವಾಗುವ ಕೋಮು ಸೌಹಾರ್ದತೆಯನ್ನು ಲೇಖಕರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.



## ಅಸ್ಪೃಶ್ಯತೆ ಮತ್ತು ಕಾನೂನು

ನ್ಯಾಯಮೂರ್ತಿ ಹೆಚ್. ಎನ್. ನಾಗಮೋಹನದಾಸ್

**ಪುಟ : ೧೦ + ೭೦ = ೮೦** **ಬೆಲೆ : ರೂ. ೨೦**

**ಕನ್ನಡ ಅಭಿವೃದ್ಧಿ ಪ್ರಾಧಿಕಾರ,** ವಿಧಾನಸೌಧ, ಬೆಂಗಳೂರು - ೧

ಅಸ್ಪೃಶ್ಯತೆಯ ನಿವಾರಣೆಯ ಕಾನೂನುಗಳು ಮತ್ತು ಯೋಜನೆ ಗಳನ್ನು ತಿಳಿಸುವುದಕ್ಕಾಗಿ ರೂಪುಗೊಂಡಿರುವ ಈ ಕೃತಿಯು ಬಹಳ ಉಪಯುಕ್ತವಾಗಿದೆ. ಲೇಖಕರು ಸರಳವಾಗಿ, ಸ್ಪಷ್ಟವಾಗಿ, ಸಂಕ್ಷಿಪ್ತವಾಗಿ 'ಅಸ್ಪೃಶ್ಯತೆ' ಎಂಬುದು ಬುದ್ಧನ ಕಾಲದಿಂದ ಇಂದಿನವರೆಗೂ ಹೇಗೆ ಸಾಗಿ ಬಂದಿದೆ ಎಂಬುದನ್ನು ಶಾಸನಗಳು, ಸಾಹಿತ್ಯ ಕೃತಿಗಳ ಮೂಲಕ ಹಾಗೂ ಸಮಾಜ ರಚನೆಯ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ. ಅಲ್ಲದೆ, 'ಅಸ್ಪೃಶ್ಯತೆ'ಯನ್ನು ನಿವಾರಿಸುವ ಮನೋಭಾವವೂ ಬೆಳೆದುಬಂದ ಬಗೆಯನ್ನು ಬುದ್ಧ, ಬಸವ, ಅಂಬೇಡ್ಕರ್, ಗಾಂಧಿ ಮೊದಲಾದವರ ವಿಚಾರಗಳ ಮೂಲಕ ತಿಳಿಸಲಾಗಿದೆ. ಅಸ್ಪೃಶ್ಯತೆ ಎಂಬ ಕಳಂಕವನ್ನು ತೊಳೆಯಲು ಕಾನೂನಿನ್ವಯ ರೂಪಿಸಿರುವ ಯೋಜನೆಗಳನ್ನು, ಹಕ್ಕು ಬಾಧ್ಯತೆಗಳನ್ನು ಇಲ್ಲಿ ಕ್ರಮಬದ್ಧವಾಗಿ ಪರಿಚಯಿಸಲಾಗಿದೆ. ವಸ್ತುನಿಷ್ಠವಾದ ಈ ಕೃತಿಯು ಜನಸಾಮಾನ್ಯನಿಗೂ ಅರ್ಥವಾಗುವ ರೀತಿಯಲ್ಲಿ 'ಅಸ್ಪೃಶ್ಯತೆ' ನಿವಾರಣೆಗೆ ಇರುವ ಕಾನೂನು ಗಳನ್ನು ತಿಳಿಸುವುದರ ಮೂಲಕ ಜನತೆಯಲ್ಲಿ ಜಾಗೃತಿ ಮೂಡಿಸುವ ಆಶಯ ಹೊತ್ತಿದೆ.

## ಆದಿವಾಸಿ ಆಖ್ಯಾನ

(ಸಮುದಾಯಗಳ ಅಧ್ಯಯನಗಳಿಗೊಂದು ಆಕರ)

ಸಂ. : ಎ. ಎಸ್. ಪ್ರಭಾಕರ



**ಪುಟ : xxx + ೭೨೬** **ಬೆಲೆ : ರೂ. ೪೦೦**

**ಸಿದ್ಧಾರ್ಥ ಪ್ರಕಾಶನ,** ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ - ೫೮೩ ೨೦೧

ಬುಡಕಟ್ಟು ಜನಾಂಗದ ವಾಸದ ನೆಲೆ, ಆರ್ಥಿಕ ಹಿನ್ನೆಲೆ, ಸಾಮಾಜಿಕ ಭದ್ರತೆ, ಶಿಕ್ಷಣ ಮತ್ತು ಆಧುನಿಕತೆಯ ಸಂಬಂಧ, ಸರ್ಕಾರದ ಯೋಜನೆಯಲ್ಲಿ ಪಾಲ್ಗೊಳ್ಳುವಿಕೆ, ಇವರ ಜನಸಂಖ್ಯೆಯ ಪ್ರಮಾಣ, ಇವರಲ್ಲೇ ಇರುವ ಶ್ರೇಣೀಕರಣ, ಸ್ವಯಂಸೇವಾ ಸಂಸ್ಥೆಗಳೊಂದಿಗೆ ಇರುವ ಸಂಬಂಧ – ಈ ಬಗ್ಗೆ ಇಲ್ಲಿನ ಲೇಖನಗಳು ತಿಳಿಸುತ್ತವೆ. ಈ ಸಂಪುಟದ 'ವಿಧಾನ' ಭಾಗದಲ್ಲಿ, ಭಾರತದ ಬುಡಕಟ್ಟು ಗಳ ಅಧ್ಯಯನದ ವೈಧಾನಿಕತೆಯನ್ನು, 'ಆಖ್ಯಾನ'ದಲ್ಲಿ ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನವನ್ನು, 'ಕಥನ'ದಲ್ಲಿ ಬುಡಕಟ್ಟು ಸಮುದಾಯಗಳ ಕಾವ್ಯ ಮತ್ತು ಕಥನ ಪರಂಪರೆಗಳ ವಿವೇಚನೆಯನ್ನು, 'ವರ್ತಮಾನ'ದಲ್ಲಿ ಅವರ ಸದ್ಯದ ಬದುಕಿನ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಕತ್ತಲೆ ಲೋಕದ ಚರ್ಚೆಯನ್ನು ಒಳಗೊಂಡ ಲೇಖನಗಳಿವೆ. 'ಅಭಿವೃದ್ಧಿ'ಯ ನಿರ್ವಚನಕ್ಕೆ ಹೊಸ ಭಾಷ್ಯವನ್ನು ಕೊಡುವ ಪ್ರಯತ್ನವನ್ನು ಈ ಭಾಗದ ಲೇಖನಗಳು ಮಾಡಿವೆ. ನಿಜಕ್ಕೂ ಈ ಕೃತಿ ಬುಡಕಟ್ಟು ಸಮುದಾಯಗಳ ಅಧ್ಯಯನಕ್ಕೆ ಒಂದು ಉಪಯುಕ್ತ ಆಕರವಾಗಿದೆ.

– ಸುಜಾತ ಲಕ್ಷ್ಮೀಪುರ
ಹೊಸ ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೭೫

ಪ್ರೇಮ್‌ಚಂದ್ ಅವರ ಕಥಾ ಸಾಹಿತ್ಯ ಭಾರತೀಯ (ಹಿಂದಿ) ಸಾಹಿತ್ಯದಲ್ಲಿ ಚಿರಸ್ಥಾಯಿಯಾದುದು. ರಶ್ಯನ್ ಸಾಹಿತ್ಯದಲ್ಲಿ ಟಾಲ್‌ಸ್ಟಾಯ್‌ಗಿರುವ ಸ್ಥಾನ ಭಾರತದಲ್ಲಿ ಪ್ರೇಮಚಂದ್ ಅವರಿಗಿದೆ. ಭಾರತದಲ್ಲಿ ವಸಾಹತುಶಾಹಿ ಶೋಷಣೆಯ ವಿರುದ್ಧ ಜನತೆಯ ಹೋರಾಟ ನಡೆಯುತ್ತಿದ್ದಾಗ ಪ್ರೇಮ್‌ಚಂದ್ ಅವರು ತಮ್ಮನ್ನು ಹೋರಾಟ ನಿರತ ಜನತೆಯ ನೆಲೆಯಲ್ಲಿ ಸ್ಪಷ್ಟವಾಗಿ ಗುರುತಿಸಿಕೊಂಡರು. ಭಾರತೀಯ ಸಮಾಜದ ಬಗ್ಗೆ ಪ್ರೇಮ್‌ಚಂದ್ ಅವರು ಕಥಾ ಸಾಹಿತ್ಯದ ಮೂಲಕ ಕೊಟ್ಟಿರುವ ಸೂಕ್ಷ್ಮಾತಿಸೂಕ್ಷ್ಮ ಒಳನೋಟಗಳು ಅಸಾಮಾನ್ಯ ಹಾಗೂ ಅಸಾಧಾರಣ. ಪ್ರೇಮ್‌ಚಂದ್ ಅವರ ಕಥಾ ಸಾಹಿತ್ಯ ಭಾರತದ ಅನೇಕ ಭಾಷೆಗಳಿಗೆ ಅನುವಾದವಾಗಿದೆ. ವಿಶೇಷವಾಗಿ ರಶ್ಯನ್ ಭಾಷೆಗೆ ಹೆಚ್ಚು ಅನುವಾದವಾಗಿದೆ. ಅಲ್ಲಿಯೂ ಪ್ರೇಮ್‌ಚಂದ್ ಅವರಿಗೆ ಅಪಾರ ಓದುಗರಿದ್ದಾರೆ. ಕನ್ನಡಕ್ಕೆ ಅವರ ಸಾಹಿತ್ಯ ಅನುವಾದದ ರೂಪದಲ್ಲಿ ಸಾಕಷ್ಟು ಬಂದಿದೆ. ಪ್ರೇಮ್‌ಚಂದ್ ಅವರ ಕಥೆಗಾರಿಕೆಯ ಕೌಶಲ್ಯದ ಪ್ರಭಾವ ಕನ್ನಡದ ಗಂಭೀರ ಕತೆಗಾರರ ಮೇಲಾಗಿದೆ. ಅವರ 'ಗೋದಾನ' ಕಾದಂಬರಿ ಕನ್ನಡ ಕಾದಂಬರಿಗಳ ಸಮುದಾಯದೊಳಗೆ ಎಂದೋ ಸೇರಿಹೋಗಿದೆ. ಅದು ಈಗ ಅನುವಾದಿತ ಕಾದಂಬರಿ ಎನ್ನಲಾರದಷ್ಟು ಕನ್ನಡ ಕಾದಂಬರಿ ಓದುಗರ ಪ್ರಜ್ಞೆಯೊಳಗೆ ಅಡಗಿ ಕೂತಿದೆ. ಕನ್ನಡ ಕಥಾ ಸಾಹಿತ್ಯವನ್ನು ಅಧ್ಯಯನ ಮಾಡುವವರು ಪ್ರೇಮ್‌ಚಂದ್ ಅವರನ್ನು ಓದಿದ್ದರೆ ಆ ಅಧ್ಯಯನವು ಪಡೆಯುವ ಆಕಾರವೇ ಬೇರೆ. ಯಾವುದೇ ಗಂಭೀರ ಸಾಹಿತಿಯ ಸಾಹಿತ್ಯವು ದೇಶ ಮತ್ತು ಭಾಷೆಗೆ ಸೀಮಿತವಾಗಿರುವುದಿಲ್ಲ. ಸಾಹಿತ್ಯ ಈ ಗಡಿಗಳನ್ನು ಮೀರಿ, ಓದುಗರ ಧೋರಣೆಯನ್ನು ಆಧರಿಸಿ ಅವರ ಪ್ರಜ್ಞೆಯ ಭಾಗವಾಗುತ್ತದೆ. ಭಾರತೀಯ ಸಾಹಿತ್ಯದ ಗಂಭೀರ ಓದುಗರು ಪ್ರೇಮ್‌ಚಂದ್, ಖಾಂಡೇಕರ್, ರವೀಂದ್ರನಾಥ ಠಾಗೋರ್, ಬಂಕಿಮಚಂದ್ರ, ಕುವೆಂಪು ಮುಂತಾದವರನ್ನು ಇದೇ ರೀತಿಯಲ್ಲಿ ಓದಿದ್ದಾರೆ ಮತ್ತು ಪ್ರತಿಕ್ರಿಯಿಸಿದ್ದಾರೆ.

ಪ್ರೇಮ್‌ಚಂದ್ ಅವರ ಹಿಂದಿಯ 'ಕಫನ್' ಕಥೆಯನ್ನು ಕನ್ನಡಕ್ಕೆ 'ಹೆಣದ ಬಟ್ಟೆ' ಶೀರ್ಷಿಕೆಯಲ್ಲಿ ಅನೇಕ ಆವೃತ್ತಿಗಳಲ್ಲಿ ಅನುವಾದಿಸಲಾಗಿದೆ. 'ಹೆಣದ ಬಟ್ಟೆ' ಕತೆಯನ್ನು ರಂಗಕೃತಿಯಾಗಿಸಿ ಅನೇಕ ಪ್ರಯೋಗಗಳನ್ನು ಮಾಡಲಾಗಿದೆ. ಆದರೆ ಈ ಕತೆಯನ್ನು ಕುರಿತು ಕನ್ನಡ ಸಾಹಿತ್ಯದಲ್ಲಿ ಅಷ್ಟಾಗಿ ಚರ್ಚೆ ನಡೆದಿಲ್ಲ. ಈ ಲೇಖನದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಕಥೆಯ ಸಾರಾಂಶವನ್ನು ಕೊಡಲಾಗಿದೆ. ಎರಡನೆ ಭಾಗದಲ್ಲಿ ಕಥೆಯ ಬಗ್ಗೆ ಹೊಸ ಓದನ್ನು ಮಂಡಿಸಲಾಗಿದೆ.

೧. ಕತೆಯ ಸಾರಾಂಶ: ಘೀಸು ಮತ್ತು ಮಾಧವ ಕೆಳವರ್ಗದ ಸಾಮಾನ್ಯ ರೈತಾಪಿಗಳು. ಘೀಸು ತಂದೆ. ಮಾಧವ ಅವನ ಮಗ. ಮಾಧವನ ಹೆಂಡತಿ ಬುಧಿಯಾ. ದುಡಿಮೆಯ ಸಂದರ್ಭದಲ್ಲಿ ರೈತಾಪಿ ವರ್ಗದಿಂದ ಇವರು ಪ್ರತ್ಯೇಕಗೊಂಡವರು. ಇವರಿಗೆ ಸ್ವಂತ ಜಮೀನು ಇತ್ಯಾದಿಗಳಿಲ್ಲ. ಹೀಗಿರುವಾಗ ಬುಧಿಯಾ ಬಸುರಿಯಾಗುತ್ತಾಳೆ. ಆಕೆ ಗುಡಿಸಲೊಳಗೆ ಪ್ರಸವ ವೇದನೆಯಲ್ಲಿ ನರಳುತ್ತಿರುತ್ತಾಳೆ. ಇವರಿಬ್ಬರು (ತಂದೆ+ಮಗ) ಗುಡಿಸಲ ಮುಂದೆ ಆಲೂಗೆಡ್ಡೆಯನ್ನು ಬೆಂಕಿಯಲ್ಲಿ ಸುಟ್ಟುಕೊಂಡು ತಿನ್ನುತ್ತಿರುತ್ತಾರೆ. ಗುಡಿಸಲೊಳಗೆ ಬುಧಿಯಾ ಪ್ರಸವ ವೇದನೆಯಿಂದ ನರಳುತ್ತ ಕಿರುಚಿಕೊಳ್ಳುತ್ತಾಳೆ. ಇದು ಇವರಿಬ್ಬರಿಗೂ ಕೇಳಿಸುತ್ತದೆ. ಆದರೆ ಇಬ್ಬರಲ್ಲಿ ಯಾರೊಬ್ಬರೂ ಒಳಗೆ ಹೋಗಿ ಆಕೆಯನ್ನು ನೋಡುವುದಿಲ್ಲ. ಸಂಬಂಧಿಸಿದ ಶುಶ್ರೂಷೆಯ ಕೆಲಸಗಳನ್ನು ಮಾಡುವುದಿಲ್ಲ. ಇಬ್ಬರೂ ಪರಸ್ಪರ 'ನೀನು ಹೋಗು, ನೀನು ಹೋಗು' ಎಂದು ಒತ್ತಾಯ ಮಾಡುತ್ತಿರುತ್ತಾರೆ. ಸುಡುತ್ತಿರುವ ಆಲೂಗೆಡ್ಡೆಯನ್ನು ತಿನ್ನುತ್ತಿರುತ್ತಾರೆ. ಈ ನಡುವೆ ಘೀಸು ಇಪ್ಪತ್ತು ವರ್ಷಗಳ ಹಿಂದೆ ತಾನು ಠಾಕೂರನ ಮದುವೆಯಲ್ಲಿ ಉಂಡ ಭರ್ಜರಿ ಊಟದ ಬಗ್ಗೆ ಮೈದುಂಬ ವರ್ಣಿಸುತ್ತಾನೆ. ಮತ್ತು 'ಆ ಊಟವನ್ನು ಜೀವನದಲ್ಲಿ ನಾನೆಂದೂ ಮರೆಯಲಾರೆ' ಎನ್ನುತ್ತಾನೆ. ಹೀಗೆ ಊಟದ ನೆನಪಿನಲ್ಲಿಯೇ ಇಬ್ಬರೂ ಮಲಗುತ್ತಾರೆ. ಆ ಕಡೆ ಬುಧಿಯಾ ನರಳಿ ನರಳಿ ಕೊನೆಗೂ ಗುಡಿಸಲೊಳಗೆ ಹೆಣವಾಗುತ್ತಾಳೆ. ಇದು ತಂದೆ ಮಗನಿಗೆ ಮಾರನೆ ದಿನ ಬೆಳಿಗ್ಗೆ ಗೊತ್ತಾಗುತ್ತದೆ. ಆಗ ತಂದೆ ಮತ್ತು ಮಗನಿಗೆ ಹೆಣ ಹೂಳುವ ಮತ್ತು ಅದಕ್ಕೆ ಬಟ್ಟೆ ತರುವ ಸಮಸ್ಯೆ ಎದುರಾಗುತ್ತದೆ. ಅವರಿಬ್ಬರೂ ಜಮೀನ್ದಾರನ ಹತ್ತಿರ ಹೋಗಿ ಹಣ ಕೇಳುತ್ತಾರೆ. ಆತ ಇವರಿಗೆ ಹೆಣಕ್ಕೆ ಬಟ್ಟೆ ಕೊಳ್ಳಲು ೨ ರೂಪಾಯಿ ಕೊಡುತ್ತಾನೆ. ಇಬ್ಬರೂ ಜಮೀನ್ದಾರ ಕೊಟ್ಟ ಹಣವನ್ನು ನೆಪವಾಗಿಸಿಕೊಂಡು, ವರ್ತಕ, ಸಾಹುಕಾರಾದಿಗಳಲ್ಲಿ ಹೆಣದ ಬಟ್ಟೆಗಾಗಿ ಹಣವನ್ನು ಸಂಗ್ರಹಿಸುತ್ತಾರೆ. ಒಟ್ಟು ಅವರಿಗೆ ೫ ರೂಪಾಯಿ ಸಿಗುತ್ತದೆ. ಈ ಹಣದಿಂದ ಹೆಣಕ್ಕೆ ಬಟ್ಟೆ ಕೊಳ್ಳಬೇಕಾಗಿತ್ತು. ಆದರೆ ಇವರಿಗೆ ಈ ಹಣದಲ್ಲಿ ಹೆಣಕ್ಕೆ ಬಟ್ಟೆ ಕೊಳ್ಳುವ ಉದ್ದೇಶ ಇರಲಿಲ್ಲ. ಇಬ್ಬರ ಒಳಮನಸ್ಸು ಹೆಂಡದ ಅಂಗಡಿಗೆ ಎಳೆಯುತ್ತಿತ್ತು. ಯಾರಾದರೂ ಮೊದಲು ಅದನ್ನು ಹೇಳಲಿ ಎಂದು ಕಾಯುತ್ತಾರೆ. ಕೊನೆಗೆ ಇಬ್ಬರೂ ಒಂದೇ ಸಲ ಹೆಂಡದ ಅಂಗಡಿಗೆ ನುಗ್ಗುತ್ತಾರೆ. ಕುಡಿಯುತ್ತಾರೆ. ಮೀನು ಇತ್ಯಾದಿ ತಿನ್ನುತ್ತಾರೆ. ಸಂತೋಷಪಡುತ್ತಾರೆ. ತಾವು ತಿಂದು ಉಳಿದ ಒಂದು ಪೂರಿಯನ್ನು ಮಾಧವ ಭಿಕಾರಿಯೊಬ್ಬನಿಗೆ ಕೊಡುತ್ತಾನೆ. 'ಇದನ್ನು ತಿಂದು ಖುಷಿ ಪಡು' ಎನ್ನುತ್ತಾನೆ. ಅದಕ್ಕೆ ಘೀಸೂ ಕೂಡ ಮಾತು ಸೇರಿಸಿ 'ಇದನ್ನು ಸಂಪಾದಿಸಿಕೊಟ್ಟ ಬುಧಿಯಾಳನ್ನು ಹರಸು' ಎಂದು ಕೇಳುತ್ತಾನೆ. ಕೊನೆಗೆ ಅವರಿಬ್ಬರೂ ತಿಂದು ಕುಡಿದು ಹಾಡಿ ಕುಣಿದು ಕುಪ್ಪಳಿಸಿ ನೆಲಕ್ಕುರುಳುತ್ತಾರೆ. ಅಲ್ಲಿಗೆ ಕಥೆ ಮುಗಿಯುತ್ತದೆ. ಇದಿಷ್ಟು ಕತೆಯ ಒಟ್ಟು ಸಾರಾಂಶ.

ಈ ಕಥೆಯನ್ನು ಓದಲು ಮತ್ತು ವಿಶ್ಲೇಷಿಸಲು ಮುಖ್ಯವಾಗಿ ಎರಡು ವಿಧಾನಗಳಿವೆ. ಒಂದು : ಕತೆಯನ್ನು ಅದರ ವಾಚ್ಯಾರ್ಥದಲ್ಲಿ ಮಾತ್ರ ಓದಿ ಗ್ರಹಿಸುವುದು, ವಿವರಿಸುವುದು ಮತ್ತು ತಾತ್ವೀಕರಿಸುವುದು. ಎರಡು: ಕತೆಯನ್ನು ಅದರ ವಾಚ್ಯಾರ್ಥದ ನೆಲೆಯಲ್ಲಿ ಮಾತ್ರ ಗ್ರಹಿಸದೆ ಅದರ ಅಪಾರ ಧ್ವನಿಸಾಧ್ಯತೆಗಳ ಮೂಲಕ ಅರ್ಥೈಸಿ, ಅದನ್ನು ತಾತ್ವೀಕರಿಸುವುದು. ಪ್ರೇಮ್‌ಚಂದ್ ಅಂಥವರ ಸಾಹಿತ್ಯವನ್ನು ಕೇವಲ ವಾಚ್ಯಾರ್ಥದ ನೆಲೆಯಲ್ಲಿ ಮಾತ್ರ ಗ್ರಹಿಸಿದರೆ ಆ ಸಾಹಿತ್ಯಕ್ಕೆ ಅಪಚಾರ ಮಾಡಿದಂತಾಗುತ್ತದೆ. ಅವರ ಸಾಹಿತ್ಯದ ಮೂಲಕ ಅನಾವರಣಗೊಳ್ಳುವ ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯದ ವಿಕೃತತೆಯ ವಿಭಿನ್ನ ಮುಖಗಳನ್ನು ಬಯಲಿಗೆಳೆಯದ ಅಪರಾಧಕ್ಕೆ ಲೇಖನ ಒಳಗಾಗಬೇಕಾಗುತ್ತದೆ. ಹಾಗಾಗಿ ಈ ಕತೆಯನ್ನು ವಾಚ್ಯ ನೆಲೆಗಿಂತ, ಅಲ್ಲಿ ಅಭಿವ್ಯಕ್ತಿಗೊಂಡಿರುವ ಧ್ವನಿಸಾಧ್ಯತೆಗಳ ಮೂಲಕ ಪ್ರವೇಶಿಸಬೇಕು. ಕತೆಯ ಓದಿನಿಂದ ಗ್ರಹೀತವಾಗುವ ವಿಭಿನ್ನ ಅನುಭವಗಳು ಈ ಬಗೆಯ ಪ್ರವೇಶಕ್ಕೆ ಅಪಾರ ಅವಕಾಶಗಳನ್ನು ಒದಗಿಸುತ್ತವೆ.

ಪೇಟೆಯಲ್ಲಿ ಪಾನಮತ್ತನಾದ ಮಾಧವ, 'ಹೆಣಕ್ಕೆ ಬಟ್ಟೆ ಯಾರು ಕೊಡ್ತಾರೆ? ' ಎಂದು ಅವನ ತಂದೆಯನ್ನು ಕೇಳುತ್ತಾನೆ. ಇದು ಆರಿಹೋಗಿರುವಂತೆ ಭಾಸವಾಗುವ ಅಗ್ಗಿಷ್ಟಿಕೆಯ ಒಳಗಣ ಕೆಂಡದ ಕತೆಯನ್ನು ಕೆದಕುತ್ತದೆ. ಮಾಧವನ ಈ ಪ್ರಶ್ನೆ ಮಾಧವ ಮತ್ತು ಘೀಸು ಇದ್ದ ಪರಿಸ್ಥಿತಿಯನ್ನು ಕೆದಕಿ ನೋಡುವಂತೆ ನಮ್ಮನ್ನು ಒತ್ತಾಯಿಸುತ್ತದೆ. ಬುಧಿಯಾ ಬಟ್ಟೆಗೆ ಗತಿಯಿಲ್ಲದೆ ಬದುಕಿದ್ದವಳು. ಆಕೆ ಸತ್ತಾಗ ಅವಳಿಗೆ ಬಟ್ಟೆ ಹೊದಿಸಬೇಕೆಂಬುದು [illegible] ವಿಪರ್ಯಾಸ. ಈ ವಿಪರ್ಯಾಸಕ್ಕೆ ಎದೆಗೊಡದ ಮಾಧವ ಮತ್ತು ಘೀಸು ತಮಗೇ [illegible]

# ಹೆಣದ ಬಟ್ಟೆ
# ಹೊಸ ಓದು

ಪ್ರೇಮ್‌ಚಂದ್ ಅವರ ಹಿಂದಿಯ 'ಕಫನ್' ಕಥೆಯನ್ನು ಕನ್ನಡಕ್ಕೆ 'ಹೆಣದ ಬಟ್ಟೆ' ಶೀರ್ಷಿಕೆಯಲ್ಲಿ ಅನೇಕ ಆವೃತ್ತಿಗಳಲ್ಲಿ ಅನುವಾದಿಸಲಾಗಿದೆ. 'ಹೆಣದ ಬಟ್ಟೆ' ಕತೆಯನ್ನು ರಂಗಕೃತಿಯಾಗಿಸಿ ಅನೇಕ ಪ್ರಯೋಗಗಳನ್ನು ಮಾಡಲಾಗಿದೆ. ಆದರೆ ಈ ಕತೆಯನ್ನು ಕುರಿತು ಕನ್ನಡ ಸಾಹಿತ್ಯದಲ್ಲಿ ಅಷ್ಟಾಗಿ ಚರ್ಚೆ ನಡೆದಿಲ್ಲ. ಈ ಲೇಖನದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಕಥೆಯ ಸಾರಾಂಶವನ್ನು ಕೊಡಲಾಗಿದೆ. ಎರಡನೆ ಭಾಗದಲ್ಲಿ ಕಥೆಯ ಬಗ್ಗೆ ಹೊಸ ಓದನ್ನು ಮಂಡಿಸಲಾಗಿದೆ.

ಸುಮತಿ

ಹೆಂಡದಂಗಡಿಯ ಮುಂದೆ ನಿಲ್ಲುತ್ತಾರೆ. ಬುಧಿಯಾಳ ಹಿಂಸಾತ್ಮಕ ಸಾವು ಇವರಿಗೆ ದೊರಕಿಸಿಕೊಟ್ಟ ೫ ರೂಪಾಯಿ ಗಂಟಿನಿಂದ ಇಬ್ಬರೂ ಕುಡಿದು ಪಾನಮತ್ತರಾಗಿ ತಿಂದು ತೇಗುತ್ತಾರೆ. ತಾವು ಕೈಬಿಟ್ಟ ಕಾರ್ಯವನ್ನು (ಹೆಣಕ್ಕೆ ಬಟ್ಟೆ ಕೊಳ್ಳುವುದು) ಪುನಃ ನೆನೆಯುತ್ತಾರೆ. ಇಬ್ಬರೂ ತಮ್ಮ ಕರ್ತವ್ಯಚ್ಯುತಿಗೆ ಬರುವ ಲೋಕ ನಿಂದನೆಯನ್ನು ಕ್ಷಣಕಾಲ ಯೋಚಿಸುತ್ತಾರೆ. ಆದರೆ ಅವರಿಗೆ ಇಹಲೋಕವನ್ನು ಎದುರಿಸುವ ಚಿಂತೆ ಇಲ್ಲ, ಕಾರಣ, ಕತೆಯೇ ಹೇಳುವಂತೆ ಅವರಾಗಲೇ ನಿಂದೆ, ಅವಮಾನ, ಹೊಡೆತ... ಎಲ್ಲವನ್ನೂ ಅನುಭವಿಸಿ ಮೀರಿ ನಿಂತಿದ್ದಾರೆ. ಅವರಿಗೆ ಈಗ ಕಾಡುತ್ತಿರುವುದು ಪರಲೋಕದ ಚಿಂತೆ. ಪರಲೋಕದಲ್ಲಿ ಸ್ವತಃ ಬುಧಿಯಾಳಿಂದಲೇ ಎದುರಾಗುವ ಪ್ರಶ್ನೆಯೊಂದನ್ನು ಮಾಧವ ತಂದೆಯ ಮುಂದಿಡುತ್ತಾನೆ. ಈ ಬಗ್ಗೆ ಇಬ್ಬರೂ ಚರ್ಚೆ ಮಾಡುತ್ತಾರೆ. ಈ ಚರ್ಚೆಯ ಮಧ್ಯದಲ್ಲಿಯೇ ಮೇಲಿನ ಪ್ರಶ್ನೆಗೆ ಉತ್ತರ ಹೊರಬೀಳುತ್ತದೆ. ಇವರ ಚರ್ಚೆಯನ್ನು ಕತೆಯ ಭಾಗದಿಂದಲೇ ಎತ್ತಿಕೊಳ್ಳೋಣ.

... ಕ್ಷಣಕಾಲದ ನಂತರ ಮಾಧವನ ಮನಸ್ಸಿನಲ್ಲಿ ಒಂದು ಶಂಕೆ ಹುಟ್ಟಿಕೊಂಡಿತು. ಅವನಂದ – ''ಒಂದಲ್ಲ ಒಂದು ದಿನ ನಾವೂ ಅಲ್ಲಿಗೆ ಹೋಗೇ ಹೋಗ್ತೀವಿ.''

ಘೀಸು ಈ ಸರಳ ಪ್ರಶ್ನೆಗೆ ಏನೂ ಉತ್ತರ ಕೊಡಲಿಲ್ಲ. ಅವನು ಪರಲೋಕದ ವಿಷಯ ಚಿಂತಿಸಿ ಈ ಲೋಕದ ಆನಂದವನ್ನು ಕೆಡಿಸಿಕೊಳ್ಳಬಯಸಲಿಲ್ಲ.

ಮಾಧವ – ''ನನಗೆ ಯಾಕೆ ಬಟ್ಟೆ ಹೊದಿಸಲಿಲ್ಲ ಅಂತ ಅವಳು ಅಲ್ಲಿ ನಮ್ಮನ್ನ ಕೇಳಿದರೆ ಏನು ಉತ್ತರ ಕೊಡ್ತಿ ?''

ಘೀಸು– ''ಕೇಳ್ತಾಳೆ, ನಿನ್ನ ತಲೆ !''

ಮಾಧವ – ''ಕೇಳೋದಂತೂ ಖಂಡಿತ''.

ಘೀಸು– ''ಅವಳಿಗೆ ಬಟ್ಟೆ ಹೊದಿಸೋಲ್ಲ ಅಂತ ನಿನಗೆ ಹೇಗೆ ಗೊತ್ತು? ನನ್ನನ್ನೇನು ಅಷ್ಟು ಕತ್ತೆ ಅಂತ ತಿಳಕೊಂಡೆಯಾ ? ಈ ಪ್ರಪಂಚದಲ್ಲಿ ಅರವತ್ತು ವರ್ಷದಿಂದ ಕತ್ತೆ ಕಾಯ್ಕೊಂಡಿದೀನಿ ಅಂದುಕೊಂಡೆಯಾ ? ಅವಳಿಗೆ ಬಟ್ಟೆ ಸಿಗುತ್ತೆ, ಇದಕ್ಕಿಂತ ಒಳ್ಳೇ ಬಟ್ಟೆಯೇ ಸಿಗುತ್ತೆ''.

ಮಾಧವನಿಗೆ ನಂಬಿಕೆ ಬರಲಿಲ್ಲ. ಅವನಂದ – ''ಯಾರು ಕೊಡ್ತಾರೆ? ಇದ್ದ ಹಣನೆಲ್ಲಾ ನೀನು ಉಡಾಯಿಸಿಬಿಟ್ಟೆ. ಅವಳು ಕೇಳೋದು ನನ್ನನ್ನ. ಅವಳ ಹಣೇಗೆ ಕುಂಕುಮ ಹಚ್ಚಿದೋನು ನಾನು ತಾನೇ ?''

ಘೀಸು ರೇಗಿ ಹೇಳಿದ – ''ಅವಳಿಗೆ ಬಟ್ಟೆ ಸಿಗುತ್ತೆ ಅಂತ ನಾನು ಹೇಳ್ತಿದೀನಿ. ನೀನು ಯಾಕೆ ನಂಬೊಲ್ಲ?''

ಮಾಧವ– ''ಯಾರು ಕೊಡ್ತಾರೆ ಅಂತ ಯಾಕೆ ಹೇಳಬಾರದು ?''

ಘೀಸು – ''ಈಗ ಯಾರು ಕೊಟ್ಟರೋ ಅವರೇ ಕೊಡ್ತಾರೆ. ಆದರೆ ಆಗ ಹಣ ನಮ್ಮ ಕೈಗೆ ಬರೋಲ್ಲ ಅಷ್ಟೇ.'' (ಪುಟ ೮೭-೮೮)

ಕತೆಯ ಈ ಭಾಗದ ಸಂಭಾಷಣೆಗಳಲ್ಲಿನ ಅಂಶಗಳು ಸೂಕ್ಷ್ಮವಾಗಿ ನಮ್ಮ ಗಮನ ಸೆಳೆಯುತ್ತವೆ. 'ಅವಳ ಹಣೆಗೆ ಕುಂಕುಮ ಹಚ್ಚಿದೋನು ನಾನು ತಾನೇ' ಎಂಬ ಮಾಧವನ ಪ್ರಶ್ನೆಯ ಸಂಶಯಾತ್ಮಕ ಧಾಟಿ ಅವನ ಮತ್ತು ಬುಧಿಯಾಳ ದಾಂಪತ್ಯ ಸಂಬಂಧದ ಸಡಿಲತೆಯನ್ನು ಸೂಚಿಸುತ್ತದೆ. ಕೆಳವರ್ಗದ ಕುಟುಂಬಗಳ ದಾಂಪತ್ಯ ಸಂಬಂಧಗಳ ಸಡಿಲತೆಗೆ ಊಳಿಗಮಾನ್ಯ ವ್ಯವಸ್ಥೆ ರೂಪಿಸಿದ ಆಳು – ಒಡೆಯ ಸಂಬಂಧಗಳೇ ಕಾರಣ. ಬುಧಿಯಾಳ ಸತ್ತ ದೇಹಕ್ಕೆ ಬಟ್ಟೆ ತರಲು ಹಣ ನೀಡಿದ ಜಮೀನ್ದಾರನಾದಿಯಾಗಿ ಉಳ್ಳವರ ವರ್ಗವೇ ಬುಧಿಯಾಳ ಸತ್ತ ದೇಹಕ್ಕೆ ಬಟ್ಟೆ ಕೊಡುತ್ತದೆ ಎಂಬ ಘೀಸುವಿನ ಅನುಭವದ ಮಾತು ನಮ್ಮನ್ನು ಅಲ್ಲಾಡಿಸುತ್ತದೆ. ಕತೆಯಲ್ಲಿ ನಾವು ವಿಶ್ಲೇಷಿಸಲು ಹೊರಟಿರುವ ಮುಖ್ಯ ವಿಷಯಕ್ಕೆ ಇಂಬು ಕೊಡುತ್ತದೆ. ಬದುಕಿದ್ದಾಗ ಬುಧಿಯಾಳನ್ನು ಭೋಗಿಸಿದವರೆ ಅವಳ ಸತ್ತ ದೇಹಕ್ಕೆ ಬಟ್ಟೆ ಕೊಡುತ್ತಾರೆ ಎಂಬುದನ್ನೇ ಘೀಸುನ ಅನುಭವದ ಮಾತುಗಳು ಧ್ವನಿಸುತ್ತವೆ. ಈ ಕಾರಣಕ್ಕಾಗಿ ಘೀಸು, ಬುಧಿಯಾಳ ಸಾವು ದೊರಕಿಸಿಕೊಟ್ಟ ಗಂಟನ್ನು ಅವಳ ಹೆಣಕ್ಕೆ ಬಟ್ಟೆ ಕೊಂಡು ವ್ಯರ್ಥ ಮಾಡುವುದಿಲ್ಲ. ಮಗನೊಂದಿಗೆ ಸೇರಿ ಜೀವಿತದ




ಬಹುದೊಡ್ಡ ಉದ್ದೇಶವಾದ ಹೊಟ್ಟೆ ತುಂಬ ಊಟ ಮಾಡುವ ಬಯಕೆಯನ್ನು ಈಡೇರಿಸಿಕೊಳ್ಳಲು ಬಳಸುತ್ತಾನೆ. ಆತನ ಈ ಬಗೆಯ ಯೋಚನೆಗೆ ಅನುಗುಣವಾಗಿ ಆತನ ಪೇಟೆಯ ಕಾರ್ಯ ಚಟುವಟಿಕೆಗಳೆಲ್ಲವೂ ಜರುಗುತ್ತವೆ. ಉಳ್ಳವರು ಎಸಗಿರುವ ಲೈಂಗಿಕ ಕ್ರೌರ್ಯದಿಂದ ಬುಧಿಯಾಳ ಮೇಲೆ ಉಂಟಾದ ಪರಿಣಾಮಕ್ಕೆ ತಾವು ಹೊಣೆಗಾರರಲ್ಲ. ಹಾಗೆಯೇ ಅವಳ ಸತ್ತ ದೇಹಕ್ಕೆ ಬಟ್ಟೆ ಹೊದಿಸಬೇಕಾದ ಹೊಣೆಗಾರಿಕೆಯೂ ತಮ್ಮದಲ್ಲ. ಆದ್ದರಿಂದ ಪರಲೋಕಧಲ್ಲಿ ಬುಧಿಯಾಳಿಂದ ತಮ್ಮ ಕರ್ತವ್ಯಚ್ಯುತಿಯ (ಹೆಣಕ್ಕೆ ಬಟ್ಟೆ ಹೊದಿಸೋದು) ಬಗೆಗೆ ಯಾವ ಪ್ರಶ್ನೆಗಳೂ ಕೇಳಿಬರುವುದಿಲ್ಲ ಎಂಬ ಭರವಸೆ ಘೀಸುಗಿದೆ. 'ಈಗ ಯಾರು ಕೊಟ್ಟರೋ ಅವರೇ ಕೊಡ್ತಾರೆ. ಆದರೆ ಆಗ ಹಣ ನಮ್ಮ ಕೈಗೆ ಬರೋಲ್ಲ ಅಷ್ಟೆ', ಎಂಬ ಘೀಸುನ ಮಾತು ಬುಧಿಯಾಳ ಸಾವಿನ ಕಾರಣದಿಂದಾಗಿ ತಮ್ಮ ಹೊಟ್ಟೆಗೆ ಇನ್ನು ಮುಂದೆ ಉಳ್ಳವರಿಂದ ಹಣ ಸಿಗುವುದಿಲ್ಲ ಎಂಬುದನ್ನೇ ಸೂಚಿಸುತ್ತದೆ. ಆದ್ದರಿಂದ ಸಿಕ್ಕ ಈ ಹಣವನ್ನು ನಾವೇಕೆ ಬಳಸಿಕೊಳ್ಳಬಾರದು ? ಎಂಬುದು ಘೀಸುನ ಮಾತಿನ ಧ್ವನಿ. ಸತ್ತ ಬುಧಿಯಾಳ ದೇಹಕ್ಕೆ ಯಾರು ಬಟ್ಟೆ ಹೊದಿಸಬೇಕೋ ಅವರೇ ಖಂಡಿತವಾಗಿಯೂ ಹೊದಿಸುತ್ತಾರೆ ಎಂಬುದನ್ನು ಘೀಸು ಮಾಧವನಿಗೆ ಮನವರಿಕೆ ಮಾಡಿಕೊಡುತ್ತಾನೆ. ಉಳ್ಳವರ ವರ್ಗ ಬದುಕಿದ್ದವರಿಗೆ ತೋರದ ಕಾಳಜಿಯನ್ನು ಸತ್ತ ಬುಧಿಯಾಳ ದೇಹಕ್ಕೆ ಏಕೆ ತೋರಿಸುತ್ತದೆ ? ಎಂಬ ನಮ್ಮ ಅನುಮಾನಕ್ಕೆ ಕತೆಯೇ ಉತ್ತರ ಕೊಡುತ್ತದೆ. ಬುಧಿಯಾಳ ಸಾವು ಜಮೀನ್ದಾರನ ಆತಂಕವನ್ನು ಹಗುರ ಮಾಡಿದೆ. ಬುಧಿಯಾಳ ಸಾವಿನ ಸುದ್ದಿಯನ್ನು ಘೀಸು ಜಮೀನ್ದಾರನಿಗೆ ತಿಳಿಸಿದ ಸಂದರ್ಭದಲ್ಲಿ ಅದು ಸ್ಪಷ್ಟವಾಗಿ ಗ್ರಹೀತವಾಗುತ್ತದೆ.

'... ಆದರೆ ಈಗ ಕೋಪ ಇಲ್ಲವೆ ಶಿಕ್ಷೆಗೆ ಹೊತ್ತಲ್ಲ. ಒಳಗಿಂದೊಳಗೇ ಕುದಿಯುತ್ತಿದ್ದರೂ ಜಮೀನುದಾರ ೨ ರೂಪಾಯಿ ತೆಗೆದೆಸೆದ. ಆರೆ ಅವನ ಬಾಯಿಂದ ಸಮಾಧಾನದ ಒಂದು ಮಾತಾದರೂ ಬರಲಿಲ್ಲ. ಅವನು ಘೀಸುನ ಕಡೆ ನೋಡಲೂ ಇಲ್ಲ. ಹೆಗಲಿನ ಮೇಲಿನ ಭಾರ ಕಳೆದುಹೋದಂತೆ ಸುಮ್ಮನಿದ್ದ'.

ಬುಧಿಯಾಳ ಸಾವಿಗೆ ಜಮೀನ್ದಾರನು ಕೇವಲ ೨ ರೂಪಾಯಿ ನೀಡುತ್ತಾನೆ. ಕಡುಬಡತನಕ್ಕೆ ಗುರಿಯಾದವರ ಸಾವಿನ ಬಗ್ಗೆ ಮಾನವೀಯತೆಗಾದರೂ ಅಥವಾ ತೋರಿಕೆಗಾದರೂ ಜಮೀನ್ದಾರನ ಮನಸ್ಸು ದುಃಖಪಡಲಿಲ್ಲ. ಬದಲಾಗಿ, ತನ್ನ ಹೆಗಲ ಮೇಲಿನ ಭಾರ ಕಳೆದುಕೊಂಡಷ್ಟು ಆತ ಹಗುರಗೊಂಡ. ಇದು ಆತನು ಬುಧಿಯಾಳೊಂದಿಗೆ ಹೊಂದಿದ್ದ ಅಕ್ರಮ ಲೈಂಗಿಕ ಸಂಬಂಧವನ್ನು ಸ್ಪಷ್ಟಗೊಳಿಸುತ್ತದೆ. ಅಮಾಯಕ ಹೆಣ್ಣಿನ ಮೇಲೆ ಲೈಂಗಿಕ ದೌರ್ಜನ್ಯವೆಸಗಿ ೨ ರೂಪಾಯಿ ಪರಿಹಾರವೆಂಬಂತೆ ಕೊಟ್ಟು ಭಾರ ಕಳೆದುಕೊಳ್ಳುವ ಜಮೀನ್ದಾರ, ಕತೆಯ ಚೌಕಟ್ಟಿನ ಮೇಲ್ಪದರದಲ್ಲಿ ದಯಾವಂತನಾಗಿ ಕಂಡುಬರುತ್ತಾನೆ. ಆದರೆ ಇನ್ನೊಬ್ಬರನ್ನು ಸದಾ ದೀನರನ್ನಾಗಿಯೇ ಉಳಿಸಿಕೊಂಡು ತಮ್ಮ ಎಲ್ಲ ಬಗೆಯ ದೌರ್ಜನ್ಯದ ವಿರುದ್ಧ ಧ್ವನಿ ಎತ್ತದಂತೆ ಮಾಡುವ ಧಣಿಗಳು ಘೀಸುವಿನ ಪಾಲಿನ ದೇವರುಗಳು. ಈ ಬಗೆಯ ಧಣಿಗಳ ದಯೆ ಸದಾ ಖಂಡನಾರ್ಹ. ಬದುಕಿದ್ದವರಿಗೆ ಸುಲಭವಾಗಿ ಸಿಗದ ಹಣ ಬುಧಿಯಾಳ ಸಾವಿಗೆ ದೊರೆಯುತ್ತದೆ. ಉಳ್ಳವರಿಂದ ಹಣವನ್ನು ಗಿಟ್ಟಿಸಿಕೊಟ್ಟ ಬುಧಿಯಾಳ ಸಾವು ಮಾಧವ ಮತ್ತು ಘೀಸುರ ಹಸಿದ ಹೊಟ್ಟೆಗೆ ಭಾಗ್ಯವಾಗಿ ಪರಿಣಮಿಸಿದ್ದು ಹೃದಯವನ್ನೆ ಕಲಕುತ್ತದೆ. ಘೀಸು ಮತ್ತು ಮಾಧವರನ್ನು ಇಂತಹ ಕಠೋರ ದಾರಿದ್ರ್ಯದವರನ್ನಾಗಿ, ಹೀನ ಮನಃಸ್ಥಿತಿಯವರನ್ನಾಗಿ ರೂಪಿಸಿದ ವ್ಯವಸ್ಥೆಯ ವಿಕೃತತೆ ಕತೆಯಲ್ಲಿ ಬಹಳ ದಟ್ಟವಾಗಿ ನಿರೂಪಿತವಾಗಿದೆ.

'ಯಾವ ಸಮಾಜದಲ್ಲಿ ಹಗಲೂ ರಾತ್ರಿ ಶ್ರಮ ಪಡುವವರ ಸ್ಥಿತಿ ಸಹ ಇವರದಕ್ಕಿಂತ ಹೆಚ್ಚೇನು ಚನ್ನಾಗಿರಲಿಲ್ಲವೋ, ಎಲ್ಲಿ ರೈತರ ದೌರ್ಬಲ್ಯಗಳಿಂದ ಲಾಭ ಪಡೆಯುವುದನ್ನು ಬಲ್ಲ ಜನ ಅವರೊಂದಿಗೆ ವ್ಯವಹಾರ ಮಾಡಿ ಅವರಿಗಿಂತ ಹೆಚ್ಚು ಶ್ರೀಮಂತರಾಗಿದ್ದಾರೋ ಅಲ್ಲಿ ಇಂತಹ ಮನೋವೃತ್ತಿ ಹುಟ್ಟುವುದು' ಆಶ್ಚರ್ಯವೇನಲ್ಲ. ಘೀಸು ರೈತರಿಗಿಂತ ಬಹುಪಾಲು ಹೆಚ್ಚು ಬುದ್ಧಿವಂತನೆಂದೇ ಹೇಳಬೇಕು. ಅವನು ವಿಚಾರಶೂನ್ಯರಾದ ರೈತರ

ಗುಂಪಿನೊಂದಿಗೆ ಒಂದಾಗುವುದರ ಬದಲು ಕೆಲಸಗೇಡಿಗಳಾದ ಕೀಳು ಜನರ ತಂಡದಲ್ಲಿ ಹೋಗಿ ಸೇರಿಕೊಂಡಿದ್ದ. ಅವನಲ್ಲಿ ಆ ಜನರ ನೀತಿ ನಿಯಮಗಳನ್ನು ಪಾಲಿಸುವ ಶಕ್ತಿ ಇರಲಿಲ್ಲ ನಿಜ. ಈ ಕಾರಣದಿಂದಾಗಿ ಅವನ ಗುಂಪಿನ ಇತರರು ಹಳ್ಳಿಯ ಮುಖಂಡರೂ ಮುಂದಾಳುಗಳೂ ಆಗಿದ್ದರೆ ಇಡೀ ಹಳ್ಳಿ ಇವನನ್ನು ಕಂಡು ಹೀಯಾಳಿಸುತ್ತಿತ್ತು. ಆದರೂ ಸಹ, ತಾನು ದುಃಸ್ಥಿತಿಯಲ್ಲಿದ್ದರೇನಂತೆ ರೈತರಂತೆ ಮೈಮುರಿದು ಕೆಲಸ ಮಾಡ ಬೇಕಾಗಿಲ್ಲವಲ್ಲ ಎಂಬ ಸಮಾಧಾನ ಫೀಸುಗಿತ್ತು. ಅವನ ಸರಳತೆ, ಶಾಂತಿಪ್ರಿಯತೆಗಳಿಂದ ಬೇರೆಯವರು ಅನುಚಿತವಾಗಿ ಲಾಭ ಪಡೆಯುವಂತಿರಲಿಲ್ಲ.

'ಇಬ್ಬರೂ ಆಲೂಗೆಡ್ಡೆ ತೆಗೆದು ಇನ್ನೂ ಬಿಸಿಯಾಗಿರುವಾಗಲೇ ತಿನ್ನತೊಡಗಿದರು. ನಿನ್ನೆಯಿಂದ ಅವರೇನನ್ನೂ ತಿಂದಿರಲಿಲ್ಲ. ಆಲೂಗೆಡ್ಡೆ ಆರುವ ತನಕ ಕಾಯುವಷ್ಟು ಸಹ ಅವರಿಗೆ ತಾಳ್ಮೆ ಇರಲಿಲ್ಲ. ಎಷ್ಟೋ ಸಲ ಇಬ್ಬರ ನಾಲಿಗೆಯೂ ಸುಟ್ಟಿತು. ಸಿಪ್ಪೆ ಸುಲಿದ ಮೇಲೆ ಆಲೂಗೆಡ್ಡೆಯ ಹೊರಭಾಗ ತುಂಬ ಬಿಸಿಯಾಗಿರುವಂತೆ ತೋರುತ್ತಿರಲಿಲ್ಲ. ಆದರೆ ಕಚ್ಚಿದೊಡನೆಯೇ ನಾಲಿಗೆ, ಅಂಗಳು, ಗಂಟಲುಗಳನ್ನು ಸುಡುತ್ತಿತ್ತು. ಆ ಸುಡುಗೆಂಡವನ್ನು ಬಾಯಿಯಲ್ಲಿಟ್ಟುಕೊಂಡಿರುವುದಕ್ಕಿಂತ ನುಂಗಿ ಹೊಟ್ಟೆಯೊಳಗೆ ಸೇರಿಸುವುದು ಎಷ್ಟೋ ಮೇಲೆನಿಸುತ್ತಿತ್ತು. ಅಲ್ಲಿ ಅವನ್ನು ತಣ್ಣಗೆ ಮಾಡಲು ಬೇಕಾದಷ್ಟು ಸಾಮಗ್ರಿಗಳಿದ್ದವು. ಇದರಿಂದಾಗಿ ಇಬ್ಬರೂ ಬೇಗ ಬೇಗ ನುಂಗಿಕೊಳ್ಳುತ್ತಿದ್ದರು. ಆದರೂ ಈ ಸಾಹಸದಿಂದಾಗಿ ಅವರ ಕಣ್ಣಲ್ಲಿ ನೀರು ಸುರಿಯುತ್ತಿತ್ತು.' (ಪುಟ ೮೨-೮೩)

ಫೀಸು ಮತ್ತು ಮಾಧವರ ಬದುಕಿಗೆ ಹಾಗೂ ಅವರೊಂದಿಗೆ ಬಾಳಿ ಬದುಕುತ್ತಿದ್ದ ಜನಾಂಗಕ್ಕೆ ಸಂಬಂಧಿಸಿದ ಕೆಲ ವಿಚಾರಗಳು ಇಲ್ಲಿ ಸ್ಪಷ್ಟಗೊಳ್ಳುತ್ತವೆ. ಸಮಾಜದಲ್ಲಿ ಕೀಳು ಜನಾಂಗದವರೆಂದು ಗುರುತಿಸಲ್ಪಟ್ಟಿದ್ದ ಜನರ ಮೇಲೆ ಊಳಿಗಮಾನ್ಯ ವ್ಯವಸ್ಥೆ ಕಠೋರ ನಿಯಮಗಳನ್ನು ಹೇರಿದೆ. ಫೀಸು ರೈತರ ಗುಂಪಿನಲ್ಲಿಯೇ ಹೆಚ್ಚು ಬುದ್ಧಿವಂತ. ಇಂತಹ ಫೀಸುನ ಸಂಸಾರವನ್ನೇ ಊಳಿಗಮಾನ್ಯಶಾಹಿ ರೂಪಿಸಿದ ಬಡತನ ಮತ್ತು ಅದರಿಂದ ಉಂಟಾಗಿರುವ ಲೈಂಗಿಕ ಸಂಬಂಧಗಳು ಬಲಿ ತೆಗೆದುಕೊಂಡಿವೆ. ಇದು ಇನ್ನುಳಿದ ರೈತರ ಬದುಕಿನ ಭೀಕರತೆಯನ್ನು ಸೂಚ್ಯವಾಗಿ ತಿಳಿಸುತ್ತದೆ. ಮೇಲುನೋಟಕ್ಕೆ ಕಂಡುಬರದ, ಆದರೆ ಕಚ್ಚಿದಾಗ ಬಾಯನ್ನು ಸುಡುವ ಆಲೂಗೆಡ್ಡೆಯ ಬಿಸಿಯಂತೆ ಊಳಿಗಮಾನ್ಯ

## ಒಂದು ದಾರಿಯ ಹಾಡು

ಇದೇ ದಾರಿಯಲ್ಲವೇ... ?
ಗೆದ್ದವರ ಹೂ ರಾಶಿಯನ್ನು
ಮೈತುಂಬಾ ಹಾಸಿಕೊಂಡು
ಸೋತವರ ಆಕ್ರೋಶದ
ತುಳಿತಕ್ಕೆ ಒಳಗಾಗಿದ್ದು!

ಅಡ್ಡಪಲ್ಲಕ್ಕಿಗೂ ಸ್ಮಶಾನಯಾತ್ರೆಗೂ
ದಿಕ್ಕು ತೋರಿದ್ದು...
ಕಳ್ಳರನ್ನು ಪೊಲೀಸರನ್ನು
ರೌಡಿ ನಂಜ – ಸಾಧುಸಂತರನ್ನು
ಮೈಮೇಲೆ ಓಡಾಡಿಸಿಕೊಂಡದ್ದು
ಇದೇ ದಾರಿಯಲ್ಲವೇ... ?!

ಸಣ್ಣ ಹುಡುಗನ ಸೈಕಲ್ಲಿಗೂ
ಕಾರ್ಖಾನೆಯ ದೊಡ್ಡ ವಾಹನಕ್ಕೂ
ದುರಸ್ತಿಗೂ ಅಗಲೀಕರಣಕ್ಕೂ
ಬಲಿಯಾಗಿ ಅಧಿಕಾರಿಯ
ಸಂಪಾದನೆಗೆ ನೆಲೆಯಾದದ್ದು...

ಪ್ರೇಮಿಗಳನ್ನು ಗುಪ್ತವಾಗಿ
ಓಡಾಡಿಸಿಕೊಂಡದ್ದು,
ಸಂಪು–ಚಳುವಳಿಗೆ
ಮೈಚಾಚಿಕೊಂಡದ್ದು
ಇದೇ ದಾರಿಯಲ್ಲವೇ ?!

ಹೆಣ ಹೊತ್ತವರ
ಭಾರವನ್ನು ಹೊತ್ತು
ನೆಮ್ಮದಿ ಹರಿಸಿ
ಬದುಕಿದವ ಭಾರಕ್ಕೆ
ನಿಟ್ಟುಸಿರಿಟ್ಟದ್ದು
ಇದೇ ದಾರಿಯಲ್ಲವೇ... ?!

ಅನ್ನ ನೀಡಿ ಸಾಲಮಾಡಿ
ಸತ್ತ ರೈತನ 'ಹೆಣ'
ಅನ್ನ ಕಸಿದು ಆಸ್ತಿ ಮಾಡಿ
ನಿಧನನಾದವರ 'ಪಾರ್ಥಿವ ಶರೀರ'
ಸಾಗುಮಾಡಿದ್ದು ಇದೇ
ದಾರಿಯಲ್ಲಲ್ಲವೇ... ?!

ಕಾರಿನಲ್ಲಿ ಹೋದ
ಆಶ್ವಾಸನೆಗಳನ್ನು ಬೀಳಿಸಿದ್ದು
ಬಂಡಿಯಲ್ಲಿ ಬಂದ
ನಿರಾಶೆಗಳನ್ನು ಕಳಿವಿದ್ದು
ಇದೇ ದಾರಿಯಲ್ಲಲ್ಲವೇ... ?!

* * *

ಕತ್ತಲು ಆವರಿಸಿ
ಬಿಸಿಲು ಬಿದ್ದು
ಮಳೆ ಸುರಿದರೂ

ಎದ್ದ ಮರ, ಬಿದ್ದ ಹಣ್ಣು
ಇದ್ದು ಮಣ್ಣೂ
ನಿನ್ನದಾಗಲಿಲ್ಲ,
ಒಂದು ದಿನವೂ ಕೂಗಲಿಲ್ಲ,
ರೋದಿಸಲಿಲ್ಲ, ಅಳುಕಲಿಲ್ಲ,
ಅಷ್ಟೆ ಏಕೆ ?
'ಉಶ್...' ಶಬ್ದವೂ ಇಲ್ಲ

* * *



ಧ್ಯಾನ ಕೊಡುವ
ಪೂರ್ಣಯೋಗ ನಿನಗೆ ದಕ್ಕಿದ್ದು ಹೇಗೆ ?
ಎದೆಯೊಡೆಯದ
ಭಾವವ
ಅವಿಸಿಕೊಳ್ಳಬಹುದೇ... ಹೀಗೆ ?

ಡಾ|| ಮೃತ್ಯುಂಜಯ ರುಮಾಲೆ
ಪ್ರಣವ, ಬಸವೇಶ್ವರ ಬಡಾವಣೆ, ಹೊಸಪೇಟೆ - ೫೮೩ ೨೦೧

ವ್ಯವಸ್ಥೆಯ ಕ್ರೌರ್ಯದ ಬಿಸಿ, ಘೀಸು ಮತ್ತು ಮಾಧವರ ಬದುಕನ್ನೇ ಸುಡುತ್ತಿದೆ. ದಟ್ಟ ದಾರಿದ್ರ್ಯದ, ಅಸಹಾಯಕತೆಯ ವಾತಾವರಣವೊಂದನ್ನು ನಿರ್ಮಾಣ ಮಾಡಿ, ಹಸಿವನ್ನು ಇಂಗಿಸಿಕೊಳ್ಳುವ ಅನಿವಾರ್ಯತೆಗೆ ಸುಡುವ ಕೆಂಡದುಂಡೆಗಳಂತಹ ಆಲೂಗೆಡ್ಡೆಯನ್ನು ತಿನ್ನಲೇಬೇಕೆಂದು ಒತ್ತಾಯಿಸುತ್ತಿರುವ ಮೇಲ್ವರ್ಗದ ಕ್ರೌರ್ಯಗಳು ಅಸಹನೀಯ ವಾದಂತಹವುಗಳು. ಕೀಳು ಜನಾಂಗದವರ ಬದುಕಿನ ಬಿಡಿ ಭಾಗವಾಗಿ ಮಾತ್ರ ಘೀಸು ಮತ್ತು ಮಾಧವರು ಕಂಡುಬರುವುದಿಲ್ಲ. ಈ ಬಗೆಯಲ್ಲಿ ಮೂರ್ತರೂಪಕ್ಕೆ ಸಿಗದ, ಆದರೆ ನೇರವಾಗಿ ಅನುಭವಕ್ಕೆ ಬರುವ ವ್ಯವಸ್ಥೆಯ ಅನ್ಯಾಯದ ಬಿಸಿ ಕೆಂಡಗಳನ್ನು ನುಂಗಿ ನರುಳುತ್ತಿರುವವರ ಇಡಿಯಾದ ಜೀವನದ ಚಿತ್ರಣವನ್ನು ಈ ಪಾತ್ರಗಳು ಪ್ರತಿನಿಧಿಸುತ್ತವೆ. ಘೀಸು ಮಾಧವ ಮಾತ್ರವಲ್ಲ; ಈ ಬಗೆಯ ಊಳಿಗಮಾನ್ಯಶಾಹಿ ವ್ಯವಸ್ಥೆಯ ಅನ್ಯಾಯಕ್ಕೆ ಗುರಿಯಾದ ಸಮುದಾಯವೇ ತಮ್ಮ ಮೇಲೆ ಎಸಗಲ್ಪಡುತ್ತಿರುವ ಅನ್ಯಾಯದ ಬಿಸಿಕೆಂಡವನ್ನು ಒಡಲೊಳಗೆ ಅಡಗಿಸಿಟ್ಟುಕೊಂಡು ಕಣ್ಣೀರು ಸುರಿಸುತ್ತಿದೆ.

ರೈತರಲ್ಲಿಯೆ ಹೆಚ್ಚು ವಿಚಾರವಂತನೆಂದು ಗುರುತಿಸಲ್ಪಡುವ ಘೀಸು ರೈತಾಪಿತನದಿಂದ ಹೊರಗುಳಿದಿದ್ದಾದರೂ ಏಕೆ ? ಈ ಪ್ರಶ್ನೆಗೆ ಕೇವಲ ಅವನ ಮೈಗಳ್ಳತನ ಮಾತ್ರವೇ ಕಾರಣ ಎಂಬ ವಿವರಣೆ ಉತ್ತರವಲ್ಲ. ಕತೆಯೇ ಹೇಳುವಂತೆ ರೈತರ ದುಡಿಮೆಯ ಫಲಾನುಭವಿಗಳು ರೈತರಲ್ಲ ಎಂಬ ವಾಸ್ತವ ಸತ್ಯ ಘೀಸುನನ್ನು ಮೈಗಳ್ಳನನ್ನಾಗಿಸಿದೆ. ದಿನವಿಡೀ ಮೈಬಗ್ಗಿಸಿ ದುಡಿದರೂ ಸಿಗುವ ಫಲವೇನು, ಎಂಬುದೇ ಮೈಗಳ್ಳನೆಂದು ಪರಿಗಣಿತವಾಗುವ ಘೀಸು ಬದುಕಿನ ಬಹುದೊಡ್ಡ ಸವಾಲು. ಅದೇ ಆತನನ್ನು ತಲೆಹಿಡುಕನನ್ನಾಗಿ ಪರಿವರ್ತಿಸಿ ಆತನ ಮಗನನ್ನು ಅದೇ ದಾರಿಯಲ್ಲಿ ಸಾಗಿಸಿದೆ. ಇದು ಊಳಿಗಮಾನ್ಯಶಾಹಿ ವ್ಯವಸ್ಥೆಯ ಕ್ರೌರ್ಯದ ಆತ್ಯಂತಿಕ ಸ್ಥಿತಿಯನ್ನು ಸೂಚಿಸುತ್ತದೆ. ಬುಧಿಯಾಳ ಸಾವು ಮಾತ್ರವಲ್ಲ; ಆಕೆಯ ಜೀವಿತವೂ ಕೂಡ ಘೀಸು ಮತ್ತು ಮಾಧವರಿಗೆ ಲಾಭದಾಯಕವಾಗುವಂತೆ ವ್ಯವಸ್ಥೆಯ ಶೋಷಕ ವರ್ಗ ಆಕೆಯನ್ನು ದುರುಪಯೋಗ ಪಡಿಸಿಕೊಳ್ಳುತ್ತದೆ. ಶೋಷಕ ವ್ಯವಸ್ಥೆ ತನ್ನಿಂದಾದ ಈ ದುರುಪಯೋಗವನ್ನು ಮುಚ್ಚಿಡಲು ಬುಧಿಯಾಳ ಮೂಲಕ ಘೀಸು ಮತ್ತು ಮಾಧವರ ಹಸಿವಿಗೆ ತಾತ್ಕಾಲಿಕ ಉಪಶಮನವನ್ನು ನೀಡಿದ ಅಂಶಗಳು ಕತೆಯಲ್ಲಿ ಕಂಡುಬರುತ್ತವೆ.

'... ಮಾಧವ ಕಳೆದ ವರ್ಷ ತಾನೆ ಮದುವೆ ಮಾಡಿಕೊಂಡಿದ್ದ. ಹೆಂಡತಿ ಬಂದಂದಿನಿಂದ ಅವಳು ಮನೆಯಲ್ಲಿ ವ್ಯವಸ್ಥೆಯ ತಳಪಾಯ ಹಾಕಿದ್ದಳು. ಹಿಟ್ಟು ಬೀಸಿಯೋ, ಹುಲ್ಲು ಕತ್ತರಿಸಿಯೋ ದಿನವೂ ಸೇರಿನಷ್ಟು ಹಿಟ್ಟನ್ನು ಹೇಗೋ ಹೊಂದಿಸಿ ಈ ನಾಚಿಕೆಗೇಡಿಗಳ ಹಸಿದ ಹೊಟ್ಟೆ ತುಂಬಿಸುತ್ತಿದ್ದಳು. ಅವಳು ಬಂದಾಗಿನಿಂದ ಇವರಿಬ್ಬರೂ ಇನ್ನೂ ಹೆಚ್ಚು ಆಲಸಿಗಳೂ ಆರಾಮಪ್ರಿಯರೂ ಆಗಿಬಿಟ್ಟಿದ್ದರು. ಅಷ್ಟೇ ಅಲ್ಲ, ಕೊಂಚ ಜಂಬ ತೋರಿಸಲು ಶುರುಮಾಡಿದ್ದರು. ಯಾರಾದರೂ ಕೆಲಸಕ್ಕೆ ಬರಹೇಳಿದರೆ ಹಿಂದೆಮುಂದೆ ನೋಡದೆ ಎರಡು ಪಟ್ಟು ಕೂಲಿ ಕೇಳುತ್ತಿದ್ದರು'. (ಪುಟ ೮೧)

ಹಸಿವು ಮತ್ತು ಶೋಷಿತ ಹೆಣ್ಣಿನ ಸಂಬಂಧವನ್ನು ಕತೆಯ ಈ ಭಾಗ ಬಿಚ್ಚಿಡುತ್ತದೆ. ಇಲ್ಲಿ ದುಡಿಯಲು ಶಕ್ತಿಯುಳ್ಳ ಇಬ್ಬರು ಪುರುಷರ ಹೊಟ್ಟೆ ಹಸಿವನ್ನು ಬುಧಿಯಾ 'ಹೇಗೋ' ತೀರಿಸಿದಳೆಂಬ ಧ್ವನಿ ಕೇವಲ ಬುಧಿಯಾಳ ನೇರ ದುಡಿಮೆಯನ್ನು ಮಾತ್ರ ಸೂಚಿಸುತ್ತಿಲ್ಲ. ಉಳ್ಳವರಿಂದ ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಬುಧಿಯಾಳ ಜೀವನ ಘೀಸು ಮತ್ತು ಮಾಧವರ ಹಸಿವನ್ನು ನೀಗಿಸಲು ಬಳಕೆಗೊಂಡಿರುವುದನ್ನೇ ಸೂಚಿಸುತ್ತದೆ. ಘೀಸು ಮತ್ತು ಮಾಧವ 'ಯಾರಾದರೂ ಕೆಲಸಕ್ಕೆ ಬರಹೇಳಿದರೆ ಹಿಂದೆಮುಂದೆ ನೋಡದೆ ಎರಡು ಪಟ್ಟು ಕೂಲಿ ಕೇಳುತ್ತಿದ್ದರು' ಎಂಬ ಕತೆಯ ಉಲ್ಲೇಖವು ಮೇಲಿನ ಮಾತನ್ನು ಗಟ್ಟಿಗೊಳಿಸುತ್ತದೆ. ಉಳ್ಳವರ ಲೈಂಗಿಕ ಕ್ರೌರ್ಯಕ್ಕೆ ಬಲಿಯಾದುದರ ಪರಿಣಾಮ ಬುಧಿಯಾಳು ಪ್ರಸವ ವೇದನೆಯಲ್ಲಿ ನರಳುತ್ತಿದ್ದಳು. ಆದರೆ ಘೀಸು ಮತ್ತು ಮಾಧವ ಅವಳ ಬಳಿ ಸುಳಿಯದಂತೆ ಅವರ ಹಸಿವಿನ ತೀವ್ರತೆ ತಡೆಯುತ್ತದೆ. ಹಸಿವಿನ ಅಸಹಾಯಕತೆ ಘೀಸು ಮತ್ತು ಮಾಧವರು ಬುಧಿಯಾಳನ್ನು ಎರಡು ಸಂದರ್ಭಗಳಲ್ಲಿ ಉಳಿಸಿಕೊಳ್ಳದಂತೆ ತಡೆಯುತ್ತದೆ. ಒಂದು: ಉಳ್ಳವರ ಕಾಮಪಿಪಾಸೆಯ ದೌರ್ಜನ್ಯಕ್ಕೆ ತುತ್ತಾಗದಂತೆ ಆಕೆಯನ್ನು ಪಾರುಮಾಡುವಲ್ಲಿ ಅವರು ಅಸಹಾಯಕರಾಗುತ್ತಾರೆ. ಇನ್ನೊಂದು: ದೌರ್ಜನ್ಯದ ಕಾರಣದಿಂದಾಗಿ ಬುಧಿಯಾ ಪ್ರಸವ ವೇದನೆಗೆ ತುತ್ತಾಗಿ ನರಳುತ್ತಿರುವ ಸಂದರ್ಭದಲ್ಲಿ ಆಕೆಯನ್ನು ಉಳಿಸಿಕೊಳ್ಳುವಲ್ಲಿ ಅವರು ಕೈಚೆಲ್ಲುತ್ತಾರೆ. ಈ ಎರಡೂ ಸಂದರ್ಭಗಳಲ್ಲಿಯೂ ಘೀಸು ಮತ್ತು ಮಾಧವ ಬುಧಿಯಾಳನ್ನು ಉಳಿಸಿಕೊಳ್ಳುವುದಿಲ್ಲ. ಹಸಿವು, ಘೀಸು ಮತ್ತು ಮಾಧವರು ಪ್ರಸವ ವೇದನೆಯಲ್ಲಿ ನರಳಿದ ಬುಧಿಯಾಳನ್ನು ರಕ್ಷಿಸದಂತೆ ತಡೆಯಿತು ಎಂಬುದು ಕತೆಯ ಆಂಶಿಕ ಗ್ರಹಿಕೆ ಮಾತ್ರ. ಹಸಿವಿನ ತೀವ್ರತೆ ಮತ್ತು ಅದನ್ನು ಹಿಂಗಿಸಿಕೊಳ್ಳುವ ತವಕ ಹಾಗೂ ಹಸಿವನ್ನು ಹಿಂಗಿಸಿಕೊಳ್ಳಲು ಅವರು ನಡೆಸುವ ಪೈಪೋಟಿ ಬುಧಿಯಾಳನ್ನು ಉಳಿಸಿಕೊಳ್ಳದಂತೆ ತಡೆಯುತ್ತದೆ. ಆದರೆ ವಾಸ್ತವವಾಗಿ ಹಸಿವು ಬಡತನದ ಕಾರಣಗಳು ದಾಂಪತ್ಯದ ಸಂಬಂಧವನ್ನು ಪ್ರೀತಿ ವಾತ್ಸಲ್ಯದ ನಂಟನ್ನು ಕೌಟುಂಬಿಕ ವ್ಯವಸ್ಥೆಯೊಳಗಡೆ ಶೂನ್ಯವಾಗಿಸುತ್ತವೆ ಎಂಬುದು ಅಷ್ಟು ಗಟ್ಟಿಯಾದ ವಿಚಾರವಲ್ಲ. ಪ್ರಾಪಂಚಿಕ ವಿಷಯ ಬಾಹಿರರಾದ, ಹಸಿವಿಗೆ ಹಂಬಲಿಸಿದ ಮಾಧವ ಮತ್ತು ಘೀಸುನ ಪರಿಸ್ಥಿತಿಗಳು ಮದುವೆಯಂತಹ ಸಂಬಂಧಗಳ ಬಗೆಗೆ ಅವರು ತಳೆದ ಒಲವನ್ನು ಮತ್ತೊಮ್ಮೆ ಶಂಕಿಸುವಂತೆ ಮಾಡುತ್ತವೆ. ಹಸಿವಿನ ಅಟ್ಟಹಾಸದಲ್ಲಿ ನರಳುತ್ತಿರುವ ಮಾಧವ ಮತ್ತು ಈ ಬಗೆಯ ಕೀಳು ಜನಾಂಗದವರಿಗೆ ಮದುವೆ ಎಂಬುದು ಅವರ ಸ್ವ ಇಚ್ಛೆಯ ಹಂಬಲಿಕೆಯೊ ಅಥವಾ ಶೋಷಕ ವ್ಯವಸ್ಥೆಯು ತನ್ನ ಹಂಬಲಿಕೆಯನ್ನು ತೀರಿಸಿಕೊಳ್ಳಲು ಹೂಡಿದ ತಂತ್ರವೊ ಎಂಬುದನ್ನು ಕತೆಯಲ್ಲಿ ಬಹಳ ಎಚ್ಚರಿಕೆಯಿಂದ ಗಮನಿಸಬೇಕಾಗಿದೆ. ಬುಧಿಯಾಳ ಪ್ರಸವ ವೇದನೆಯ ಗೋಳಾಟವನ್ನು ಕಿರಿಕಿರಿಯೆಂದು, ಆಕೆಯ ಬಳಿ ಹೋಗಲು ಭಯವಾಗುವುದೆಂದು ತರ್ಕಿಸುವ ಮಾಧವನ ಮನಸ್ಸನ್ನು ಆವರಿಸಿರುವುದು ಕೇವಲ ಹಸಿವಿನ ಪ್ರಶ್ನೆಯೊಂದೇ ಅಲ್ಲ. ಘೀಸು ಮತ್ತು ಮಾಧವ ಬುಧಿಯಾಳ ಬಳಿ ಸುಳಿಯಲು ಹಿಂಜರಿಯುತ್ತಿರುವುದರ ಹಿನ್ನೆಲೆಯಲ್ಲಿ ಹಸಿವನ್ನು ಹಿಂಗಿಸಿಕೊಳ್ಳುವ ಪ್ರಶ್ನೆ ಮಾತ್ರವೇ ಕಾರ್ಯಪ್ರವೃತ್ತವಾಗಿಲ್ಲ. ಹಸಿವು ಒಂದು ಹಂತದ ಅಡ್ಡಿ ಮಾತ್ರ. ಹಸಿವು ತಾತ್ಕಾಲಿಕವಾಗಿ ತೀರಿದ ನಂತರವೂ ಬುಧಿಯಾಳ ಜೀವ ಮಾಧವನಿಂದ ದಿವ್ಯ ನಿರ್ಲಕ್ಷ್ಯಕ್ಕೆ ಒಳಗಾಗಿದೆ. 'ತನ್ನದಲ್ಲದ ಪಿಂಡವನ್ನು ಹೆರುತ್ತಿರುವಳೆಂಬ' ಅನಾದರ, ಸಂಕಟ ಎರಡೂ ಮಾಧವನಲ್ಲಿ ಅಸ್ಪಷ್ಟವಾಗಿ ಜಾಗೃತವಾದಂತೆ ತೋರುತ್ತದೆ. ತಮಗೆ ಸಂಬಂಧಪಡದ ಜೀವವೊಂದರ ಹುಟ್ಟಿನ ಬಗೆಗೆ ಇವರು ಮಾತನಾಡುವ ಮಾತುಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ.

ಮಾಧವ – ''... ಮಗುವೇನಾದರೂ ಆಗಿಬಿಟ್ಟರೆ ಏನು ಗತಿ ಅಂತೀನಿ ? ಮನೇಲಿ ಶುಂಠಿ, ಬೆಲ್ಲ, ಎಣ್ಣೆ ಒಂದು ಚೂರೂ ಇಲ್ಲ''.

ಘೀಸು – ''ಎಲ್ಲಾ ಬರುತ್ತೆ. ದೇವರು ಕೊಡುವಾಗ, ಇದುವರೆಗೆ ಒಂದು ಕಾಸು ಸಹ ಬಿಚ್ಚದೇ ಇರೋ ಜನ ನಾಳೆ ತಾವಾಗಿಯೇ ಕರೆದು ರೂಪಾಯಿ ಕೊಡ್ತಾರೆ. ನನಗೆ ಒಂಬತ್ತು ಮಕ್ಕಳಾಗಿದ್ದವು. ಮನೆಯಲ್ಲಿ ಯಾವಾಗಲೂ ಏನೂ ಇರ್ತಿರಲಿಲ್ಲ. ಆದರೆ ದೇವರು ಹೇಗೋ ಕಷ್ಟದಿಂದ ಪಾರುಮಾಡಿಯೇ ಮಾಡಿದ''.

ಪ್ರಸವದ ನಂತರ ಬುಧಿಯಾಳನ್ನು ತಮ್ಮ ಹಸಿವನ್ನು ನೀಗಿಸಿಕೊಳ್ಳುವ ಸಾಧನವನ್ನಾಗಿಸಿಕೊಳ್ಳಬೇಕೆಂಬ ಮುನ್ಸೂಚನೆಗಳನ್ನು ಘೀಸುನ ಮಾತುಗಳು ತಿಳಿಸುತ್ತವೆ. ಇದು ಮತ್ತೊಮ್ಮೆ ಹಸಿವು ಮತ್ತು ಶೋಷಿತ ಹೆಣ್ಣಿನ ನಡುವಣ ಸಂಬಂಧವನ್ನು ಬಿಚ್ಚಿಡುತ್ತದೆ. ಈ ಬಗೆಯ ಸಮಾಲೋಚನೆ ಮಾಧವನಿಗಾಗಲಿ, ಘೀಸುಗಾಗಲಿ ತಪ್ಪು ಎಂದು ಅನಿಸುವುದೇ ಇಲ್ಲ. ಕಾರಣ, ವ್ಯವಸ್ಥೆಗೆ ಅನುಗುಣವಾಗಿ ಅವರು ತಮ್ಮ ತಲೆಹಿಡುಕತನದ ನಿಲುವನ್ನು ಗಟ್ಟಿಗೊಳಿಸಿಕೊಂಡಿದ್ದಾರೆ. ಈ ಕಾರಣಕ್ಕಾಗಿಯೇ ಘೀಸು ತನ್ನ ಬದುಕಿನಲ್ಲಿ ಹೊಟ್ಟೆ ತುಂಬ ಊಟವನ್ನು ಒದಗಿಸಿಕೊಟ್ಟ ಠಾಕೂರರ ಮದುವೆಯ ದಿಬ್ಬಣವನ್ನು ಮರೆಯದಂತೆ ನೆನಪಿನಲ್ಲಿರಿಸಿಕೊಂಡಿದ್ದಾನೆ ಮತ್ತು ಯಾವ ಎಗ್ಗಿಲ್ಲದೆ ಅದನ್ನು ಮಗನೊಂದಿಗೆ ಹಂಚಿಕೊಳ್ಳುತ್ತಾನೆ.

'... ಘೀಸುವಿಗೆ ಇಪ್ಪತ್ತು ವರ್ಷಗಳ ಹಿಂದೆ ತಾನು ಭಾಗವಹಿಸಿದ್ದ ಠಾಕೂರನ ದಿಬ್ಬಣದ ನೆನಪಾಯಿತು. ಅವತ್ತಿನ ಊಟದಲ್ಲಿ ಸಿಕ್ಕಿದ್ದ ತೃಪ್ತಿ ಅವನ ಜೀವನದಲ್ಲಿನ ಸದಾ ನೆನಪಿಡುವ ಸಂಗತಿಯಾಗಿತ್ತು. ಇವತ್ತಿನವರೆಗೂ ಅದರ ನೆನಪು ಹಸನಾಗಿತ್ತು! ಅವನು ಹೇಳಿದ – ''ಆ ಊಟಾನ ಮರೀಲಾರೆ. ಆದಾದ ಮೇಲೆ ಅಂತಹ ಊಟ, ಅಷ್ಟು ಹೊಟ್ಟೆ ಭರ್ತಿಯಾಗಿ ಮತ್ತೆ ಸಿಕ್ಕಿಲ್ಲ ನೋಡು. ಹೆಣ್ಣಿನ ಕಡೆಯೋರು ಎಲ್ಲರಿಗೂ ಹೊಟ್ಟೆ ತುಂಬ ಪೂರಿ ಬಡಿಸಿದ್ದರು - ಎಲ್ಲರಿಗೂ! ಚಿಕ್ಕೋರು ದೊಡ್ಡೋರು ಎಲ್ಲರೂ ಪೂರಿ ತಿಂದರು, ಅದೂ ಅಸಲೀ ತುಪ್ಪದಲ್ಲಿ ಕರಿದದ್ದು! ಚಟ್ನಿ, ರಾಯತ, ಮೂರೂ ತರಹ ಗಟ್ಟಿ ಪಲ್ಯ, ಒಂದು ನೀರು ಪಲ್ಯ, ಮೊಸರು, ಮಿಠಾಯಿ. ಆ ಊಟ ಎಷ್ಟು ರುಚಿಯಾಗಿತ್ತು ಅಂತ ಈಗೇನು ಹೇಳಲಿ ? ಯಾವ ಅಡೆತಡೆಯೂ ಇರ್ಲಿಲ್ಲ. ಬೇಕಾದ್ದನ್ನು ಕೇಳಬಹುದಾಗಿತ್ತು. ಬೇಕಾದಷ್ಟನ್ನು ತಿನ್ನಬಹುದಾಗಿತ್ತು. ಜನ ಹೇಗೆ ತಿಂದರು, ಹೇಗೆ ತಿಂದರು ಅಂದರೆ ಯಾರೂ ನೀರೂ ಸಹ ಕುಡೀಲಿಲ್ಲ. ಬಡಿಸೋರು ಬಿಸಿಬಿಸಿಯಾದ, ದುಂಡುದುಂಡಾದ, ಘಮ್ ಅನ್ನೋ ಕಚೋರೀನ ಎಲೇಗೆ ಹಾಕಿಬಿಡೋರು. ಬೇಡ ಬೇಡ ಅಂದರೂ, ಎಲೆ ಮೇಲೆ ಅಡ್ಡಗೈ ಹಾಕಿ ತಡೆದರೂ ಬಡಿಸಿ ಬಿಡೋರು. ಕೈತೊಳೆದುಕೊಂಡಾದ ಮೇಲೆ ಎಲಕ್ಕಿ ಹಾಕಿ ಕಟ್ಟಿದ್ದ ಬೀಡವೂ ಸಿಕ್ಕಿತು. ಆದರೆ ನನಗೆ ಬೀಡ ಇಸ್ಕೊಳ್ಳೋ ಅಷ್ಟು ಪ್ರಜ್ಞೆ ಎಲ್ಲಿತ್ತು? ನಿಂತುಕೊಳ್ಳೋಕೆ ಆಗ್ತಿರಲಿಲ್ಲ. ದಡದಡ ಅಂತ ಹೋಗಿ ಕಂಬಳಿ ಹಾಸಿ ಮಲಕೊಂಡುಬಿಟ್ಟೆ. ಹೊಳೆ ಹರಿದ ಹಾಗೆ ಹರಿಯಿತು ಮನಸ್ಸು ಆ ಠಾಕೂರನದು''...

...'ಮಾಧವ ಕೇಳಿದ. ''ನೀನು ಒಂದು ಇಪ್ಪತ್ತು ಪೂರಿನಾದರೂ ತಿಂದಿರಬೇಕು''.

ಘೀಸು – ''ಇಪ್ಪತ್ತಕ್ಕೂ ಜಾಸ್ತಿಯೇ !''

ಮಾಧವ – ''ನಾನಿದ್ದಿದ್ದರೆ ಐವತ್ತು ತಿಂದುಬಿಡ್ತಿದ್ದೆ''.

''ನಾನೂ ಸಹ ಐವತ್ತಕ್ಕಿಂತ ಕಡಿಮೆಯೇನೂ ತಿಂದಿಲ್ಲ. ಚೆನ್ನಾಗಿ ಗಟ್ಟಿಮುಟ್ಟಾಗಿದ್ದೆ.''

... ಆಲೂಗೆಡ್ಡೆ ತಿಂದು ಇಬ್ಬರೂ ನೀರು ಕುಡಿದರು. ಅದೇ ಅಗ್ಗಿಷ್ಟಿಕೆಯ ಮುಂದೆ ಧೋತಿ ಹೊದ್ದು ಮೈಮುದುಡಿಕೊಂಡು ಮಲಗಿದರು. – ಎರಡು ದೊಡ್ಡ ಹೆಬ್ಬಾವುಗಳು ಸುಳಿ ಸುತ್ತಿಕೊಂಡು ಬಿದ್ದಿವೆಯೋ ಎಂಬಂತೆ'. (ಪುಟ ೮೩-೮೪)

ಘೀಸು ದಿಬ್ಬಣದಲ್ಲಿ ಉಂಡು ಸವಿದ ಊಟದ ವರ್ಣನೆ ಇಡೀ ಘೀಸುನಂಥವರ ಬದುಕನ್ನೇ ಉಂಡು ತೇಗಿದ, ಭೋಗಿಸಿದ ಉಳ್ಳವರ ಕ್ರೌರ್ಯವನ್ನು ಅಣಕವಾಡುತ್ತದೆ. ತಮ್ಮ ಮೇಲೆ ಎಸಗಲ್ಪಟ್ಟ ಮತ್ತು ಎಸಗಲ್ಪಡುತ್ತಿರುವ ಶೋಷಣೆ ಮತ್ತು ಅನ್ಯಾಯದ ಇತಿಹಾಸವನ್ನು ಘೀಸು ಮರೆಯದಂತೆ ತನ್ನ ನೆನಪಿನಲ್ಲಿ ದಾಖಲಿಸಿಕೊಂಡಿದ್ದಾನೆ. ಇಪ್ಪತ್ತು ವರ್ಷಗಳ ಹಿಂದೆ ತನ್ನ ಮೇಲೆ ಭರ್ಜರಿ ಊಟದ ನೆಪದಲ್ಲಿ ಹೇರಲ್ಪಟ್ಟ ಕ್ರೌರ್ಯದ ಕತೆಯನ್ನು ಮುಂದಿನ ತಲೆಮಾರಿಗೆ ಒಪ್ಪಿಸುತ್ತಾನೆ. ಘೀಸುನ ಈ ಮಾತುಗಳು ಅವರ ಇಂದಿನ ಸ್ಥಿತಿಗೆ ಪಾರಂಪರಿಕ ಆಯಾಮವನ್ನು ಕಟ್ಟಿಕೊಡುತ್ತವೆ. ಬದುಕಿನಲ್ಲಿ ಹಿಂದೊಮ್ಮೆ ಉಂಡ ಭಾರೀ ಊಟದ ನೆನಪಿನಲ್ಲಿ ಇಂದು ಅಂತಹ ಊಟ ಇಲ್ಲವಾಗಿದೆ ಎಂಬ ನಿರಾಶೆಯಲ್ಲಿ ಹೆಬ್ಬಾವುಗಳಂತೆ ಮಾಧವ ಮತ್ತು ಘೀಸು ಮಲಗುತ್ತಾರೆ. ಮಾಧವ ಘೀಸುರನ್ನು ಹೆಬ್ಬಾವಿನಂತಹ ವಿಷಜಂತುವಿಗೆ ಹೋಲಿಸುವುದರಲ್ಲಿನ ಸೂಕ್ಷ್ಮತೆಯೂ ಅವರ ಮನೋಭಾವದ ಸೂಚಕವೇ ಆಗಿದೆ. ತನ್ನ ಹಸಿವನ್ನು ನೀಗಿಸಿಕೊಳ್ಳಲು ಯಾವ ಪಾಪ ಕೃತ್ಯಕ್ಕೆ ಬೇಕಾದರೂ ತೊಡಗಿ ಹೊಟ್ಟೆ ತುಂಬಿಸಿಕೊಳ್ಳುವ; ಆದರೆ ತನ್ನ ಕಾರ್ಯವನ್ನು ಪಾಪಕೃತ್ಯವೆಂದು ಪರಿಭಾವಿಸದ ಹೆಬ್ಬಾವಿನ ಸ್ಥಿತಿಗಿಂತ ಇವರ ಸ್ಥಿತಿ ಭಿನ್ನವಾಗಿರಲಿಲ್ಲ. ಇಬ್ಬರೂ ತಿಂದ ಆಹಾರವನ್ನು ಅರಗಿಸಿಕೊಳ್ಳಲು ಹೆಬ್ಬಾವಿನಂತೆ ಕಷ್ಟಪಟ್ಟಿರುವ ಸತ್ಯದ ಕಹಿ ಹೆಬ್ಬಾವನ್ನೂ ಮೀರಿ ಓದುಗರ ಮಾನವೀಯತೆ ಮತ್ತು ಅಂತಃಕರಣವನ್ನು ಕಲಕುವಂತಹದ್ದು. ಹೊಟ್ಟೆ ತುಂಬ ಊಟ ಮಾಡುವ ನಿರೀಕ್ಷೆಯಲ್ಲಿ ಮಲಗಿದ ಘೀಸು ಮತ್ತು ಮಾಧವರ ಬದುಕಿಗೆ ಬುಧಿಯಾಳ ಸಾವು ಭಾಗ್ಯವಾಗಿ ಪರಿಣಮಿಸುತ್ತದೆ. ಉಳ್ಳವರು ಕಟ್ಟಿಸಿದ ಗರ್ಭವನ್ನು ಹಡೆಯಲಾರದೆ ಒದ್ದಾಡಿ ಸತ್ತ ಬುಧಿಯಾಳ ಹೆಣ ಘೀಸು ಮತ್ತು ಮಾಧವರ ಹೊಟ್ಟೆ ತುಂಬಿಸುತ್ತದೆ. ಅವರ ಈ ಹತಾಶ ಸ್ಥಿತಿಯು ಒಂದು ಕಡೆ ಹೃದಯವನ್ನೆ ಕಲಕುತ್ತದೆ. ಮತ್ತೊಂದು ಕಡೆ ಅವರನ್ನು ಇಂತಹ ಹತಾಶ ಸ್ಥಿತಿಗೆ ತಳ್ಳಿರುವ ಊಳಿಗಮಾನ್ಯಶಾಹಿ ವ್ಯವಸ್ಥೆಯ ಬಗ್ಗೆ ಆಕ್ರೋಶವನ್ನು ಉಂಟುಮಾಡುತ್ತದೆ. ಬದುಕಿಯೂ ಇರಲಿಲ್ಲದ ಸತ್ತೂ ಇರಲಿಲ್ಲದ ಸ್ಥಿತಿಯನ್ನು ಅವರು ತಲುಪಿದ್ದರು. ಈ ಮಧ್ಯೆ ಪೇಟೆಯಲ್ಲಿ ಜರುಗುವ ಸಣ್ಣ ಘಟನೆ ಗಮನಿಸುವಂತಹದ್ದು.

> ## ಪ್ರತ್ಯಯ
>
> ಆತ್ಮ ಪ್ರತ್ಯಯ
> ಎಲ್ಲಿ ಬಂತು ?
> ನಾವು ಪದಗಳಿಗೆ
> ಪ್ರತ್ಯಯಗಳಷ್ಟೆ !
>
> ಸಿ.ಪಿ.ಕೆ.
> ಮೈಸೂರು

'... ಹೊಟ್ಟೆ ತುಂಬ ತಿಂದ ಮೇಲೆ ಮಾಧವ ಎಲೆಯಲ್ಲಿ ಉಳಿದಿದ್ದ ಒಂದು ಪೂರಿಯನ್ನು ಇವರ ಕಡೆ ಹಸಿವಿನಿಂದ ನೋಡುತ್ತ ನಿಂತಿದ್ದ ಭಿಕಾರಿಯೊಬ್ಬನಿಗೆ ಕೊಟ್ಟುಬಿಟ್ಟ. ಬದುಕಿನಲ್ಲಿ ಮೊತ್ತಮೊದಲ ಬಾರಿಗೆ ಹೀಗೆ 'ಕೊಡುವ' ಹೆಮ್ಮೆ, ಆನಂದ, ಉಲ್ಲಾಸಗಳನ್ನು ಅನುಭವಿಸಿದ.

ಘೀಸು ಹೇಳಿದ ''ತೊಗೊಂಡು ಹೋಗು. ತಿಂದು ಚನ್ನಾಗಿ ಹರಸು. ಇದನ್ನ ಸಂಪಾದಿಸಿದವಳು ಹೋಗಿಬಿಟ್ಟಳು. ನೀನು ಹರಸಿದರೆ ಆ ಹರಕೆ ಅವಳಿಗೆ ಖಂಡಿತ ತಲುಪುತ್ತೆ. ನಿನ್ನ ಒಂದೊಂದು ರೋಮವೂ ಹರಸಲಿ. ಬಲು ಕಷ್ಟದಿಂದ ಸಂಪಾದಿಸಿದ್ದು ಇದು !''(ಪುಟ ೮೮)

ಇಡೀ ಶೋಷಕ ವರ್ಗ ತಾನು ಮಾಡಿದ ಅನ್ಯಾಯವನ್ನು ಮುಚ್ಚಿಡಲು ಘೀಸು ಮತ್ತು ಮಾಧವರಿಗೆ ಬುಧಿಯಾಳ ಮೂಲಕ ತಾತ್ಕಾಲಿಕವಾಗಿ ಅವರ ಹೊಟ್ಟೆಗೆ ಊಟವನ್ನು ದಾನ ಮಾಡಿದೆ. ಇದರಲ್ಲಿ ಮದುವೆ ಊಟ ಶಿಖರಪ್ರಾಯವಾದುದು. ಘೀಸು ಮತ್ತು ಮಾಧವರು ತಪ್ಪಿಂದಾಗಿಯೂ ಬುಧಿಯಾಳಿಗೆ ಉಂಟಾದ ಪರಿಸ್ಥಿತಿಯನ್ನು ಮರೆಯಲು ಕುಡಿದು ಊಟ ಮಾಡಿ ಉಳಿದ ಒಂದು ಪೂರಿಯನ್ನು ಭಿಕಾರಿಗೆ ದಾನ ಮಾಡಿ ಹೆಮ್ಮೆ ಪಡುತ್ತಾರೆ. ಈ ಎರಡು ಬಗೆಯ ದಾನಗಳು ಸಾಮಾಜಿಕವಾದ ಎರಡು ತದ್ವಿರುದ್ಧ ವರ್ಗ ಹಿತಾಸಕ್ತಿಗಳನ್ನು ಪ್ರತಿನಿಧಿಸುತ್ತವೆ. ಈ ಎರಡು ಸ್ತರಗಳ ದಾನದ ಸ್ವರೂಪವನ್ನು ವಿವರಿಸುವುದಾದರೆ, ನಿರ್ದಿಷ್ಟ ಉದ್ದೇಶ, ಪ್ರತಿಫಲ ಅಪೇಕ್ಷೆಗಳನ್ನುಳ್ಳ ಶೋಷಕ ವರ್ಗದ ದಾನ ಒಂದು ಕಡೆಯಾದರೆ; ಇದಕ್ಕೆ ಪ್ರತಿಯಾಗಿ ಉದ್ದೇಶರಹಿತವಾದ ನಿರಪೇಕ್ಷಿತವಾದ ಘೀಸು ಮತ್ತು ಮಾಧವರ ದಾನ ಮತ್ತೊಂದು ಕಡೆಗಿದೆ. ಈ ಸಂದರ್ಭದಲ್ಲಿ ಈ ಎರಡೂ ವರ್ಗ ಹಿತಾಸಕ್ತಿಯ ದಾನಗಳು ಮುಖಾಮುಖಿಯಾಗುತ್ತವೆ. ದಾನಕ್ಕೆ ಪ್ರತಿಯಾಗಿ ಘೀಸು ಮತ್ತು ಮಾಧವ ದಾನಕ್ಕೆ ಕಾರಣೀಭೂತಳಾದ ಬುಧಿಯಾಳನ್ನು ಹರಸಲು ಕೇಳುತ್ತಿರುವ ಪ್ರಕ್ರಿಯೆ ಅವರಲ್ಲಿರುವ ಕೃತಜ್ಞತೆಯನ್ನು ಸೂಚಿಸುತ್ತದೆ. ಆದರೆ ಶೋಷಕ ವರ್ಗದ ದಾನ, ದಾನದ ಮುಖವಾಡದಲ್ಲಿ ಅದೇ ಬುಧಿಯಾಳನ್ನು ಅಕ್ರಮವಾಗಿ ಶೋಷಣೆ ಮಾಡಿರುವುದನ್ನು ಸೂಚಿಸುತ್ತದೆ. ಇಡೀ ಶೋಷಕ ವ್ಯವಸ್ಥೆಯೇ ತಮ್ಮನ್ನು ಭಿಕಾರಿಗಳನ್ನಾಗಿಸಿದೆ ಎಂಬುದನ್ನೇ ಮರೆತು ತಮ್ಮೆದುರಿನ ಭಿಕಾರಿಗೆ ಮಾಧವ ಪೂರಿಯನ್ನು ದಾನ ನೀಡುತ್ತಾನೆ. ಆದರೆ ತಮ್ಮೆದುರು ಬೇಡಿ ತಿನ್ನುವ ಭಿಕಾರಿಗಿಂತ ತಮ್ಮ ಸ್ಥಿತಿ ಎಷ್ಟೊಂದು ನಿಕೃಷ್ಟವಾದದ್ದು, ಹೀನಾಯವಾದದ್ದು ಎಂಬುದನ್ನು ಅರಿತ ಕ್ಷಣ ಇಬ್ಬರ ಮಾತು ಮತ್ತು ವರ್ತನೆಗಳು ಬದಲಾಗುತ್ತವೆ. ಹೆಂಡದಂಗಡಿಯ ಮುಂದೆ ಬದಲಾದ ಘೀಸು ಮತ್ತು ಮಾಧವರ ಮಾತುಗಳು 'ಅಮಲಿನ ಸ್ವಭಾವವಾದ ಅಸ್ಥಿರತೆ'ಯನ್ನು ಮಾತ್ರ ಸೂಚಿಸುವುದಿಲ್ಲ. ಶೋಷಕ ವರ್ಗ ಅಸ್ಥಿರತೆಗೊಳಪಡಿಸಿದ ಅವರ ಬದುಕನ್ನೇ ಸೂಚಿಸುತ್ತದೆ. ಬದಲಾದ ಅವರ ಮಾತುಗಳನ್ನು ಕತೆಯಲ್ಲಿಯೇ ಗಮನಿಸುವುದಾದರೆ,

'ಮಾಧವ ಹೇಳಿದ ''ಯಾಕೆ ಅಳ್ತಿ ಮಗು, ಸಂತೋಷದ ಸಂಗತಿ ಅಂದರೆ, ಅವಳು ಈ ಮಾಯಾಜಾಲದಿಂದ ಬಿಡುಗಡೆ ಪಡೆದಳು. ಬಂಧನ ಹರೀತು, ತುಂಬ ಭಾಗ್ಯವಂತೆ. ಇಷ್ಟು ಚಿಕ್ಕ ವಯಸ್ಸಿನಲ್ಲಿ ಮಾಯಾ ಮೋಹಗಳ ಬಂಧನ ತೊಡೆದುಹಾಕಿದಳು.

ಇಬ್ಬರೂ ಎದ್ದು ನಿಂತು ಹಾಡತೊಡಗಿದರು.

ಮಾಯಾವಿ, ಕಣ್ಣ ಹಿಂಗೇಕೆ ಕುಣಿಸುವಿಯೆ ?

ಮಾಯಾವಿ

ಪಡಖಾನೆಯ ಕುಡುಕರೆಲ್ಲರ ಕಣ್ಣು ಇವರ ಮೇಲೆಯೇ ಇದ್ದವು. ಇಬ್ಬರೂ ಪಾನಮತ್ತರಾಗಿ ಹಾಡುತ್ತಿದ್ದರು. ಆಮೇಲೆ ಇಬ್ಬರೂ ಕುಣಿಯತೊಡಗಿದರು. ಹಾರಿದರು. ನೆಗೆದರು. ಬಿದ್ದರು. ಮೈಕುಲುಕಿದರು. ಮುಖದಲ್ಲಿ ಭಾವ ತೋರಿಸಿದರು. ಅಭಿನಯ ಮಾಡಿದರು. ಕೊನೆಗೆ ಮದಮತ್ತರಾಗಿ ಅಲ್ಲೇ ಕೆಳಗೆ ಬಿದ್ದರು'. (ಪುಟ ೮೯)

ಘೀಸು ಬುಧಿಯಾಳ ಸಾವಿಗೆ ಪ್ರತಿಕ್ರಿಯಿಸುತ್ತಿರುವ ರೀತಿ ಧ್ವನಿಪೂರ್ಣವಾದದ್ದು. ಹಸಿವು, ಬಡತನದ ನಿಕೃಷ್ಟ ಬದುಕಿನಲ್ಲಿ ಸಿಲುಕಿಕೊಂಡವರಿಂದ ಸಾವಿನ ಬಗೆಗೆ ಬರುವ ಮಾತುಗಳಂತೆಯೇ ಘೀಸುನ ಮಾತುಗಳು ಕೇಳಿಬರುತ್ತವೆ. ಆದರೆ ಈ ಮಾತುಗಳಲ್ಲಿನ ಧ್ವನಿ ಸಾಧ್ಯತೆಗಳು ಬುಧಿಯಾಳ ಯಾತನೆಯ ಬದುಕಿನ ಇನ್ನೊಂದು ಮುಖವನ್ನು ತಿಳಿಸುತ್ತವೆ.

ಶೋಷಕ ವ್ಯವಸ್ಥೆ ರೂಪಿಸಿದ ಕಾಮದ ಮಾರ್ಜಾಲದಿಂದ ಬುಧಿಯಾ ಸಾವಿನ ಮೂಲಕ ಪಾರಾಗಿದ್ದಾಳೆ. ಅತಿ ಚಿಕ್ಕ ವಯಸ್ಸಿನಲ್ಲಿಯೇ ಬುಧಿಯಾಳು ಸಾವನ್ನಪ್ಪಿರುವುದು, ಶೋಷಕ ವ್ಯವಸ್ಥೆಯ ಬಂಧನವನ್ನು ಕಳಚಿಕೊಂಡದ್ದು, ಸೌಭಾಗ್ಯವೆಂದು ಘೀಸು ವ್ಯಾಖ್ಯಾನಿಸುತ್ತಾನೆ. ಸಾವಿನ ಬಗೆಗೆ ಘೀಸುನ ಈ ವ್ಯಾಖ್ಯಾನ ಶೋಷಕ ವ್ಯವಸ್ಥೆಯಿಂದ ಲೈಂಗಿಕ ಶೋಷಣೆಯನ್ನು ಬಹುಕಾಲ ಅನುಭವಿಸಿ ನರಳಿದ ಘೀಸುನ ಹೆಂಡತಿಯಂಥವರನ್ನು ಮತ್ತೆ ನೆನಪಿಗೆ ತಂದುಕೊಡುತ್ತದೆ. ತಮಗೆ ಸಂಬಂಧಿಸಿದ ಹೆಣ್ಣನ್ನು ಕ್ರೂರ ವ್ಯವಸ್ಥೆಯ ಲೈಂಗಿಕ ಶೋಷಣೆಯಿಂದ ಕಾಪಾಡಲು ಸಾವಿಗಾದರೂ ಸಾಧ್ಯವಾಯಿತಲ್ಲ ಎಂದು ಸಂತೋಷಪಡು, ಎಂಬುದಾಗಿ ಘೀಸು ಮಾಧವನಿಗೆ ಹೇಳಿದ. ಈ ಮಾತುಗಳು ಅರ್ಥಹೀನತೆಗೆ ಒಳಪಡಿಸಲಾದ ಅವರಿಬ್ಬರ ಜೀವಂತಿಕೆಯನ್ನು ಸೂಚಿಸುತ್ತದೆ. ಬುಧಿಯಾಳ ಹಿಂಸಾತ್ಮಕ ಸಾವಿನ ಬಗೆಗೆ ಎರಡು ತಲೆಮಾರುಗಳು ಪ್ರಕ್ರಿಯಿಸುತ್ತಿರುವ ರೀತಿ, ಕತೆಯ ಈ ಸಂದರ್ಭದಲ್ಲಿ ವ್ಯಕ್ತವಾಗುತ್ತದೆ. ತಮ್ಮ ಬದುಕಿನ ಮೇಲೆ ಎಸಗಲ್ಪಡುತ್ತಿರುವ ಅನ್ಯಾಯದಿಂದ ಪಾರಾದ ಬುಧಿಯಾಳ ಸಾವಿನ ಬಗ್ಗೆ ಘೀಸು ನೆಮ್ಮದಿಯ ನಿಟ್ಟುಸಿರಿಡುತ್ತಾನೆ. ಘೀಸುನ ನಂತರದ ತಲೆಮಾರಾದ ಮಾಧವ ಶೋಷಕ ವ್ಯವಸ್ಥೆಯ ಅನ್ಯಾಯದಲ್ಲಿ ಸಿಲುಕಿ ಸತ್ತ ಬುಧಿಯಾಳ ಕ್ರೂರ ಸಾವನ್ನು ನೆನೆದು ಕಣ್ಣೀರು ಸುರಿಸುತ್ತಾನೆ. ಕಣ್ಣೀರಿಡುವುದಕ್ಕಿಂತ ಹೆಚ್ಚಿನದೇನನ್ನೂ ಮಾಡಲಾಗದೆ ಮಾಧವ ತಂದೆಯಾದ ಘೀಸುನಂತೆ ಶೋಷಕ ವ್ಯವಸ್ಥೆಯ ಕ್ರೌರ್ಯದ ಮುಂದೆ ಅಸಹಾಯಕನಾದದ್ದು ಕತೆಯಲ್ಲಿ ಸ್ಪಷ್ಟವಾಗಿ ಮನವರಿಕೆಯಾಗುತ್ತದೆ. ಆದರೆ ಆಳದಲ್ಲಿ ಶೋಷಕ ವ್ಯವಸ್ಥೆಯ ಬಗೆಗೆ ಬಲವಾದ ಪ್ರತಿರೋಧ ಇದ್ದುದನ್ನು ತಿಳಿಸುವುದರಲ್ಲಿ ಇವರಿಬ್ಬರೂ ಸೋಲುವುದಿಲ್ಲ. 'ಮಾಯಾವಿ, ಕಣ್ಣ ಹಿಂಗೇಕೆ ಕುಣಿಸುವಿಯೆ ?' ಎಂದು ಹಾಡುವ ಘೀಸು ಮತ್ತು ಮಾಧವ

ಶೋಷಕ ವ್ಯವಸ್ಥೆಯನ್ನು ಪ್ರಶ್ನಿಸುತ್ತಾರೆ. ತಾನು ಬಯಸಿದ್ದೆಲ್ಲವನ್ನೂ ಭೋಗಿಸಿ ಬುಧಿಯಾಳನ್ನು ಕೊಂದದ್ದಾಯಿತಲ್ಲ. ಇನ್ನೂ ಕಣ್ಣು ಕುಣಿಸುವುದೇಕೆ ಎಂದು ಒಂದೇ ಸ್ವರದಲ್ಲಿ ಶೋಷಕ ವ್ಯವಸ್ಥೆಯನ್ನು ಪ್ರಶ್ನಿಸುತ್ತಾರೆ. ಆದರೆ ಇವರ ಪ್ರಶ್ನೆ ಒಂದು ಧ್ವನಿ ಮಾತ್ರ. ಉಳ್ಳವರ ಕಾಮದ ಕಣ್ಣಿನ ಅಟ್ಟಹಾಸದ ಕುಣಿತವನ್ನು ನಿಲ್ಲಿಸುವ ತ್ರಾಣ ಈ ಧ್ವನಿಗಿನ್ನೂ ಸಾಧ್ಯವಾಗಿಲ್ಲ. ಇಡೀ ವ್ಯವಸ್ಥೆಯನ್ನು ಕುಡಿದ ಮತ್ತಿನಲ್ಲಿ ಪ್ರಶ್ನಿಸುವ ಧೈರ್ಯ ಮಾತ್ರ ಸಾಧ್ಯವಾಗಿದೆಯೇ ವಿನಃ ಹೆಜ್ಜೆನದೇನನ್ನೂ ಮಾಡಲು ಸಾಧ್ಯವಾಗದೆ ಘೀಸು ಮತ್ತು ಮಾಧವ ಸೋಲುತ್ತಾರೆ. ಶೋಷಕ ವ್ಯವಸ್ಥೆಗೆ ತಕ್ಕಂತೆ ಕುಣಿದು ಕುಪ್ಪಳಿಸಿ ನೆಲಕ್ಕುರುಳುತ್ತಾರೆ.

ಘೀಸು ಮತ್ತು ಮಾಧವರು ಕೇವಲ ಪಾತ್ರಗಳಾಗಿ ಮಾತ್ರ ನಿಲ್ಲದೆ ನೆಲಕ್ಕುರುಳಲ್ಪಟ್ಟ ಶೋಷಿತ ಸಮುದಾಯದ ದಾರುಣತೆ, ಅಸಹಾಯಕತೆಯನ್ನು ಪ್ರತಿನಿಧಿಸುತ್ತಾರೆ. ಇಡೀ ಕತೆಯ ವಾಚ್ಯ ನೆಲೆ ಘೀಸು ಮತ್ತು ಮಾಧವ ಮೇಲ್ವರ್ಗದ ವ್ಯವಸ್ಥೆ ರೂಪಿಸಿದ ಬಡತನಕ್ಕೆ ಸಿಲುಕಿದ್ದಾರೆ. ಈ ಬಡತನದ ಕಾರಣ ಅವರಲ್ಲಿ ಹಸಿವನ್ನುಂಟು ಮಾಡಿದೆ. ಇವರ ಹಸಿವಿನ ತೀವ್ರತೆ ಪ್ರಸವದಲ್ಲಿ ನರಳಿ ಸತ್ತ ಬುಧಿಯಾಳನ್ನು ನಿರ್ಲಕ್ಷಿಸಿದೆ. ಆಕೆ ಸತ್ತ ದೇಹಕ್ಕೆ ಬಟ್ಟೆ ಕೊಳ್ಳಲು ಸಿಕ್ಕ ಹಣದಿಂದ ಘೀಸು ಮತ್ತು ಮಾಧವ ಹೊಟ್ಟೆ ತುಂಬ ಊಟ ಮಾಡುತ್ತಾರೆ. ಕಿತ್ತು ತಿನ್ನುವ ಹಸಿವಿನ ಆತ್ಯಂತಿಕ ಸ್ಥಿತಿಯನ್ನು ಅನಾವರಣಗೊಳಿಸುತ್ತದೆ ಎನ್ನುವುದು ಮಾತ್ರವಾಗಿದೆ. ಆದರೆ ಇದು ಕತೆಯ ಆಂಶಿಕ ಅರ್ಥ ಸಾಧ್ಯತೆ ಮಾತ್ರ. ಘೀಸು ಮತ್ತು ಮಾಧವರು ತಮ್ಮ ಹಸಿವನ್ನು ನೀಗಿಸಿಕೊಳ್ಳಲು ತಲೆ ಒಡುಕತನದ ಬದುಕನ್ನು ಸಾಗಿಸಿದ ಸತ್ಯ ಕತೆಯ ಧ್ವನ್ಯಾರ್ಥದ ಅವಲೋಕನದಲ್ಲಿ ಮನಸ್ಸನ್ನು ತಟ್ಟುತ್ತದೆ. ಘೀಸು ಮತ್ತು ಮಾಧವರ ಬದುಕಿಗೆ, ಅವರ ಬಡತನಕ್ಕೆ, ಕಿತ್ತು ತಿನ್ನುವ ಹಸಿವಿನ ಅಸಹಾಯಕತೆಗೆ ಮೇಲ್ವರ್ಗವೇ ಕಾರಣವೆಂಬುದು ಕತೆಯಲ್ಲಿ ಸ್ಪಷ್ಟಗೊಂಡ ವಿಚಾರ. ಹಾಗೆಯೇ ಇವರು ಹಸಿವನ್ನು ನೀಗಿಸಿಕೊಳ್ಳಲು ಅನಿವಾರ್ಯವಾಗಿ ಹಿಡಿದ ತಲೆ ಒಡುಕತನದ ದಾರಿ ಹೀನಾಯವಾದುದು. ಮೇಲ್ವರ್ಗದ ಹಿಂಗದ ಕಾಮುಕತನಕ್ಕೆ ಬುಧಿಯಾಳನ್ನು ಬಲಿಕೊಟ್ಟ ಘೀಸು ಮತ್ತು ಮಾಧವ ತಲೆ ಒಡುಕತನದ ಅಪರಾಧಕ್ಕೆ ಗುರಿಯಾದರು. ಆದರೆ ಅವರ ತಲೆಹಿಡುಕತನದ ಪಾಪಕೃತ್ಯಕ್ಕೆ ಅವರನ್ನು ಈ ಸ್ಥಿತಿಗಿಳಿಸಿದ ಮೇಲ್ವರ್ಗ ಕಾರಣವೇ ವಿನಃ ಸ್ವತಃ ಘೀಸು ಮತ್ತು ಮಾಧವ ನೆಪ ಮಾತ್ರ. ಮೇಲ್ವರ್ಗದ ಕ್ರೌರ್ಯವನ್ನು ಹೆಣದ ಬಟ್ಟೆ ಹೊದಿಸುವುದರ ಮೂಲಕ ಮುಚ್ಚಿಡಲು ಘೀಸು ಬಯಸುವುದಿಲ್ಲ. ಹೆಣದ ಬಟ್ಟೆ ಕೊಳ್ಳುವುದನ್ನೇ ಧಿಕ್ಕರಿಸುತ್ತಾನೆ. ಈವರೆಗೆ ಮುಚ್ಚಿಟ್ಟಿದ್ದ ಸತ್ಯವನ್ನು ನಗ್ನವಾಗಿಯೇ ಬಿಟ್ಟು ಮಗನೊಂದಿಗೆ ಪೇಟೆಗೆ ಬರುತ್ತಾನೆ. ಯಾವ ಉದ್ದೇಶಕ್ಕಾಗಿ ಈವರೆಗೂ ಈ ಶೋಷಕ ವ್ಯವಸ್ಥೆಯ ಪಾಪಕೃತ್ಯಕ್ಕೆ ಘೀಸು ಮಣಿದಿದ್ದನೋ ಆ ಉದ್ದೇಶವನ್ನು ಮಾತ್ರ ಮಗನೊಂದಿಗೆ ಈಡೇರಿಸಿಕೊಳ್ಳುತ್ತಾನೆ. ಹೆಣವಾಗಿ ಬಿದ್ದದ್ದು ಸತ್ತ ಬುಧಿಯಾಳ ದೇಹವಲ್ಲ; ಶೋಷಕ ವ್ಯವಸ್ಥೆ ಕೆಳವರ್ಗದ ಮೇಲೆ ಎಸಗಿದ ಅನ್ಯಾಯದ ಸತ್ಯ. ಈ ಅನ್ಯಾಯವನ್ನು ಎಸಗಿದವರು, ಸತ್ಯದ ನಗ್ನತೆಯನ್ನು ಸಹಿಸಲಾಗದವರು ಹೆಣಕ್ಕೆ ಬಟ್ಟೆ ಹೊದಿಸಲೆಂದು ಘೀಸು ತಿಳಿಸುತ್ತಾನೆ. ಹೆಣದ ಬಟ್ಟೆಯನ್ನು ಕೊಳ್ಳಲು, ಹೊದಿಸಲು ನಿರಾಕರಿಸುವ ಕೆಳಸಮುದಾಯದ ಘೀಸುನಂಥವರ ದುಃಖ ಸಂಕಟ ಆಕ್ರೋಶ ಸಿಡಿದೇಳದಂತೆ ನೆಲಕ್ಕುರುಳಿಸಲ್ಪಟ್ಟಿದೆ. 'ಹೆಣದ ಬಟ್ಟೆ' ಕೆಳವರ್ಗದವರು ಶೋಷಕ ವ್ಯವಸ್ಥೆಯನ್ನು ಪ್ರತಿಭಟಿಸಿದ್ದರ ಸಂಕೇತವಾದರೆ, ಮೇಲ್ವರ್ಗದವರ ಒತ್ತಾಯ, ಬಲವಂತಿಕೆಯ ಸಂಕೇತವಾಗಿ ಕಂಡುಬರುತ್ತದೆ. ಹೆಣಕ್ಕೆ ಬಟ್ಟೆ ಹೊದಿಸುವುದನ್ನು ವಿರೋಧಿಸುವುದರ ಹಿನ್ನೆಲೆಯಲ್ಲಿ ಘೀಸು ಮತ್ತು ಮಾಧವ ಶೋಷಕ ವರ್ಗದ ಕಾಮಕ್ರೌರ್ಯದ ಕಟು ಸತ್ಯವನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತಿದ್ದಾರೆ. ಘೀಸು ಮತ್ತು ಮಾಧವರ ಹಸಿವಿನಲ್ಲಿ ಈ ಸತ್ಯದ ಕಹಿಯನ್ನು ಮುಚ್ಚಿಟ್ಟದ್ದೇ ಆದರೆ ಶೋಷಕ ವ್ಯವಸ್ಥೆಯ ಅಪರಾಧವನ್ನು ಮತ್ತೊಮ್ಮೆ ಪೋಷಿಸಿದಂತಾಗುತ್ತದೆ ಎಂಬುದೇ ನನ್ನ ಧೋರಣೆ.

ಸುಮತಿ
ಸಂಶೋಧನ ವಿದ್ಯಾರ್ಥಿನಿ, ಕನ್ನಡ ಸಾಹಿತ್ಯ ವಿಭಾಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

## ಸುದ್ದಿ ಚಿತ್ರ







ತಾ॥ ೧೬-೩-೨೦೦೮ರಂದು ನಡೆದ ಸಮಾರಂಭದಲ್ಲಿ ನವಕರ್ನಾಟಕ ಪ್ರಕಟಿಸಿರುವ ಆರು ಕೃತಿಗಳ ಲೋಕಾರ್ಪಣೆ ನಡೆಯಿತು. ಪ್ರೊ॥ ಎಂ. ಎಚ್. ಕೃಷ್ಣಯ್ಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. 'ಹೊಸತು' ಸಂಪಾದಕರಾದ ಡಾ॥ ಜಿ. ರಾಮಕೃಷ್ಣ ಪುಸ್ತಕ ಅನಾವರಣಗೊಳಿಸಿ, ಪುಸ್ತಕಗಳ ಆಶಯ ಮತ್ತು ಪರಿಚಯ ಮಾಡಿಕೊಟ್ಟರು. ಲೇಖಕರಾದ ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ (ಭೌತವಾದೀಯ ಚಿಂತನೆಗಳು), ಪ್ರೊ॥ ಡಿ. ರಘುನಾಥರಾವ್ (ತತ್ವಪದಕಾರರು ಮತ್ತು ವಸಾಹತುಶಾಹಿ ವ್ಯವಸ್ಥೆ), ಡಾ॥ ಶಾಂತಾರಾಮ ಸೋಮಯಾಜಿ (ದೇವರೆಂಬ ಸುಳ್ಳು – ಧರ್ಮವೆಂಬ ದ್ವೇಷ), ಡಾ॥ ಮೂಡ್ನಾಕೂಡು ಚಿನ್ನಸ್ವಾಮಿ (ಒಂದು ಕೊಡ ಹಾಲಿನ ಸಮರ), ಶ್ರೀ ಕ್ಷೀರಸಾಗರ (ಜೇನು ಆಕಾಶದ ಅರಮನೆಯೋ...) ಮತ್ತು ಡಾ॥ ರಹಮತ್ ತರೀಕೆರೆ (ಧರ್ಮ ಪರೀಕ್ಷೆ) – ತಮ್ಮ ಅನುಭವಗಳನ್ನು ಹಂಚಿಕೊಂಡರು. ಹೆಚ್ಚು ಸಂಖ್ಯೆಯ ಸಾಹಿತ್ಯಾಸಕ್ತರು ಭಾಗವಹಿಸಿದ್ದರು.

# ಅಡ್ಡಪಲ್ಲಕ್ಕಿ ಉತ್ಸವ

● ಡಾ|| ಸಂಗಮೇಶ ಸವದತ್ತಿಮಠ



ಅಡ್ಡಪಲ್ಲಕ್ಕಿ ಮೆರವಣಿಗೆ ಎಂದರೆ ಜನತೆ ತಮ್ಮ ಧರ್ಮಗುರುಗಳಿಗೆ ಗೌರವ ಸಲ್ಲಿಸುವ ರೀತಿ. ಅಧ್ಯಾತ್ಮದ ಶಕ್ತಿಸಂಚಯವೆನಿಸುವ ಸ್ವಾಮಿಗಳ ಮೆರವಣಿಗೆ ಎಂದರೆ ಅದು ವ್ಯಕ್ತಿಯ ಮೆರವಣಿಗೆ ಅಲ್ಲ, ಶಕ್ತಿಯ ಮೆರವಣಿಗೆ. ಅದನ್ನು ರಾಜ ಮಹಾರಾಜರೂ ವೈಭವದಿಂದ ನಡೆಸಿಕೊಡುತ್ತಿದ್ದರು. ರಾಜರುಗಳಿಗೆ ಗುರುಗಳೇ ಮಾರ್ಗದರ್ಶಕರೂ ಆಗಿರುತ್ತಿದ್ದರು. ಅಂತೆಯೇ ರಾಜರಿಗೆ ಸಲ್ಲಬೇಕಾದ ಸಕಲ ಮರ್ಯಾದೆ ಗುರುಗಳಿಗೂ ಸಲ್ಲಬೇಕೆಂಬುದು ರಾಜರ ಇಚ್ಛೆಯಾಗಿರುತ್ತಿತ್ತು. ಪಂಚಾಚಾರ್ಯರಂತೂ ರಾಜಗುರುಗಳೇ ಆಗಿದ್ದವರು. ಕೇದಾರ ಪೀಠದ ಜಗದ್ಗುರುಗಳಿಗೆ ಇಂದಿಗೂ ರಾವಲ್ ಎಂಬ ರಾಜರು ನೀಡಿದ ಉಪಾಧಿ ಇದೆ. ರಾಜರು ಗುರುಗಳಿಗೆ ತಮ್ಮಂತೆಯೇ ಸಿಂಹಾಸನ, ಕಿರೀಟಾದಿಗಳ ವೈಭವವನ್ನು ಒದಗಿಸಿಕೊಟ್ಟು ತಾವು ಪುರಪ್ರವೇಶಮಾಡುವಾಗ ಇರಬೇಕಾದ ವೈಭವ ತಮ್ಮ ಧರ್ಮಗುರುಗಳಿಗೂ ಇರಬೇಕೆಂಬ ನಿಯಮವನ್ನು ಪಾಲಿಸಿಕೊಂಡುಬರುತ್ತಿದ್ದರು.

ಸ್ವಾಮಿಗಳಾದವರಿಗೆ ಬಂಗಾರದ ಕಿರೀಟಾದಿ ಯಾಕೆ ಬೇಕು, ಎಂದು ಕೆಲವರು ಪ್ರಶ್ನಿಸುತ್ತಾರೆ. ವಿರಕ್ತರಿಗೆ ಸಹಜವಾಗಿ ಇವು ಬೇಕಾಗಿಲ್ಲ. ವಿರಕ್ತ ಎಂಬ ಶಬ್ದದಲ್ಲಿಯೆ ಯಾವುದರಲ್ಲೂ ವಿರತಿ ಇಲ್ಲದವ ಎಂಬ ಅರ್ಥವಿದೆ. ಮಠಮಾನ್ಯಗಳೆಂಬ ಸ್ಥಾವರ ಆಸ್ತಿಪಾಸ್ತಿಗಳೂ ಇವರಿಗೆ ಅವಶ್ಯಕವಿಲ್ಲ. ಲೋಕ ಮೆಚ್ಚಲೆಂದು ಅಥವಾ ತನಗೆ ಕೀರ್ತಿ ಲಾಭ ಸಂಪತ್ತು ದೊರೆಯುವುದೆಂಬ ಆಸೆಯಾಗಲಿ, ಉಪಾಧಿಯಾಗಲಿ ಇವರಿಗೆ ಇರುವುದಿಲ್ಲ. ವಿರಕ್ತರು ಹೆಚ್ಚಾಗಿ ದೇಶಸಂಚಾರ ಮಾಡುತ್ತ ಧರ್ಮ ಜಾಗೃತಿಯನ್ನು ಮಾಡುವವರು. ಅಂಥವರು ಮಾತ್ರ ನಿಜವಾದ ಅರ್ಥದಲ್ಲಿ ವಿರಕ್ತರು. ಆದರೆ ಈಗಿನ ವಿರಕ್ತ ಸ್ವಾಮಿಗಳು ಮಠ ಎಂಬ ಸ್ಥಾವರವನ್ನು, ನಗರ ಮತ್ತು ಹಳ್ಳಿಗಳಲ್ಲಿ ಸಂಸಾರಿಗರಂತೆಯೇ ಆಸ್ತಿಪಾಸ್ತಿ ಹೊಂದಿರುವುದಲ್ಲದೆ ಅಡ್ಡಪಲ್ಲಕ್ಕಿ, ತುಲಾಭಾರ, ಕೀರ್ತಿಯ ಆಸೆಯಿಂದ ಚಳುವಳಿಗಳಲ್ಲಿ ಭಾಗವಹಿಸುವುದು, ನಾಟಕ ಆಡಿಸುವುದು ಮುಂತಾದ ತಮ್ಮ ಮೂಲ ಕರ್ತವ್ಯವಾದ ಧರ್ಮ ಚಟುವಟಿಕೆಗಳಿಗೆ ಹೊರತುಪಡಿಸಿದ ಕಾರ್ಯಗಳಲ್ಲಿ ಭಾಗಿಯಾಗುತ್ತಾರೆ. ಒಟ್ಟಿನಲ್ಲಿ ಮೂಲ ವಿರಕ್ತ ಎಂಬ ಅರ್ಥವಂತಿಕೆ ಇಂದಿನ ಕಾಲದಲ್ಲಿ ಉಳಿದಿಲ್ಲ. ಶಿವಶರಣರ ಸಂದೇಶಗಳು ವೇದಿಕೆಯ ಮೇಲಿನ ಭಾಷಣಗಳಿಗೆ, ಸಮಾಜವಿಘಟನೆಯ ಬರಹಗಳಿಗೆ, ಸೀಮಿತವಾಗಿವೆ. ಪಂಚಪೀಠಗಳ ಜಗದ್ಗುರುಗಳು ರಾಜಗುರುಗಳ ವೈಭವ ಪಡೆದವರು. ಆದ್ದರಿಂದ ಅವರಿಗೆ ಸಿಂಹಾಸನ, ಕಿರೀಟ, ಛತ್ರಚಾಮರಾದಿ ಗೌರವಗಳಿವೆ. ಎಲ್ಲಾ ಸಮಯದಲ್ಲೂ ಅವರು ಕಿರೀಟಧಾರಿಗಳಾಗಿಯೇ ಇರುವುದಿಲ್ಲ. ವಿಶಿಷ್ಟ ಸಂದರ್ಭದಲ್ಲಿ ಮಾತ್ರ ಅವುಗಳನ್ನು ಧರಿಸುತ್ತಾರೆ. ಆ ಪದ್ಧತಿ ಅವರಿಗೆ ಪರಂಪರೆಯಿಂದ ಬಂದದ್ದು. (ವಿಶ್ವವಿದ್ಯಾಲಯಗಳಲ್ಲಿ ಪದವಿದಾನ ಸಮಾರಂಭದ ಕಾಲಕ್ಕೆ ಕುಲಾಧಿಪತಿ, ಕುಲಪತಿ ಮುಂತಾದವರು ಹೇಗೆ ವಿಶಿಷ್ಟ ಪೋಷಾಕು ಹಾಕುವರೋ ಹಾಗೆ.)

ಪಂಚಾಚಾರ್ಯರಷ್ಟೇ ಅಲ್ಲದೆ ವೀರಶೈವ ಗುರು - ವಿರಕ್ತಸ್ವಾಮಿಗಳೂ, ಅನ್ಯಧರ್ಮೀಯ ಸ್ವಾಮಿಗಳೂ ಅಡ್ಡಪಲ್ಲಕ್ಕಿಯ ಉತ್ಸವದಲ್ಲಿ ಭಾಗಿಯಾಗುತ್ತಾರೆ. ಕೊಪ್ಪಳ, ಮುಂಡರಗಿ, ಮುರಗೋಡ, ಹುಬ್ಬಳ್ಳಿ ಮುಂತಾದ ಕಡೆಗಳಲ್ಲಿನ ವಿರಕ್ತಮಠಾಧೀಶರ ಅಡ್ಡಪಲ್ಲಕ್ಕಿ ಉತ್ಸವಗಳನ್ನು ನಾನು ನೋಡಿದ್ದೇನೆ. ಹಾವೇರಿ ಹುಕ್ಕೇರಿಮಠದ ಶ್ರೀ ನಿ. ಪ್ರ.ಸ್ವ. ಶಿವಲಿಂಗ ಮಹಾಶಿವಯೋಗಿಗಳವರ ಅಡ್ಡಪಲ್ಲಕ್ಕಿ ಉತ್ಸವ ಹಾವೇರಿ ಮತ್ತು ಮಾದನಹಿಪ್ಪರಿಗೆಯಲ್ಲಿ ಅಭೂತಪೂರ್ವವಾಗಿ ನಡೆದಿವೆ. ಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡಿಸಿಕೊಳ್ಳಲು ತಾವೇ ಸ್ವತಃ ಯಾವ ಸ್ವಾಮಿಗಳೂ ಇಷ್ಟಪಡುವುದಿಲ್ಲ. ಅದೇನಿದ್ದರೂ ಭಕ್ತರೇ ಮಾಡುವ ವ್ಯವಸ್ಥೆ. ಭಕ್ತರು ಅಡ್ಡಪಲ್ಲಕ್ಕಿಯ ಬದಲು ಬೇರೆ ವಾಹನ ವ್ಯವಸ್ಥೆ ಮಾಡಿದರೆ ಅದರಲ್ಲೇ ಕುಳಿತುಕೊಳ್ಳುವುದಕ್ಕೆ ಸ್ವಾಮಿಗಳು ಬೇಡವೆನ್ನುವುದಿಲ್ಲ. ಚೆನ್ನಮ್ಮನ ಕಿತ್ತೂರಿನಲ್ಲಿ ಕ್ರಿ.ಶ. ೨೦೦೪ರಲ್ಲಿ ನಡೆದ ಪಂಚಾಚಾರ್ಯರ ಮೆರವಣಿಗೆಯಲ್ಲಿ ನಾನೂ ಸ್ವತಃ ಭಾಗವಹಿಸಿದ್ದೆ. ಆಗ ಭಕ್ತರು ಒಂದು ದೊಡ್ಡ ಅಲಂಕೃತ ವಾಹನದಲ್ಲಿ ಐವರು ಪಂಚಾಚಾರ್ಯರನ್ನು ಕೂಡ್ರಿಸಿ ವೈಭವಪೂರ್ಣವಾಗಿ ಮೆರವಣಿಗೆ ಮಾಡಿದ್ದರು. ಪಲ್ಲಕ್ಕಿಯನ್ನು ಹೊರುವವರೆ ಇಲ್ಲದಿದ್ದರೆ ಪಲ್ಲಕ್ಕಿಯಲ್ಲಿ ಯಾರು ಕುಳಿತುಕೊಳ್ಳುತ್ತಾರೆ ?

೧೨ನೆಯ ಶತಮಾನದ ಶ್ರೇಷ್ಠ ಶಿವಶರಣ ಅವಿರಳ ಜ್ಞಾನಿ ಚೆನ್ನಬಸವಣ್ಣನವರೇ ಸ್ವತಃ ತಾವು ಪಲ್ಲಕ್ಕಿಯನ್ನೇರುವುದು ಸಿದ್ಧರಾಮನ ಭಕ್ತಿಯ ನಿಮಿತ್ತವಾಗಿ ಎಂದು ಹೇಳಿದ್ದನ್ನು ಗಮನಿಸಬೇಕು. ಆ ವಚನ ಹೀಗಿದೆ :

ಗುರುಶಿಷ್ಯರಲ್ಲಿ ಭೇದವಿಲ್ಲದ ಕಾರಣ ಗಮಿಸುವುದಯ್ಯಾ
ದ್ವಾರದ ಮುಂದಿಪ್ಪ ಪಲ್ಲಕ್ಕಿಯಲ್ಲಿ.
ಮರುಳಶಂಕರನೇರುವ ಗಜಮಹಾಪೀಠವ.
ಕೂಡಲ ಚೆನ್ನಸಂಗನ ಶರಣ ಸಿದ್ಧರಾಮನ
ಭಕ್ತಿ ನಿಮಿತ್ತಕ್ಕೇರುವೆನಾಂದೋಲನವ,
ಮತ್ತೊಂದಕ್ಕಲ್ಲ ಪ್ರಭುವೆ. (ಸಮಗ್ರ ವಚನ ಸಂಪುಟ ೩. ವಚನ ಸಂಖ್ಯೆ ೧೧೯೫)

ಇಂದಿಗೂ ಯಾವುದೇ ಸ್ವಾಮಿಗಳು ಪಲ್ಲಕ್ಕಿಯನ್ನು ಏರುವುದೂ ಭಕ್ತರ ಅಪೇಕ್ಷೆಯಿಂದಾಗಿಯೇ. ಯಾಕೆಂದರೆ ಪಲ್ಲಕ್ಕಿಯಲ್ಲಿ ಗಂಟೆಗಟ್ಟಲೆ ಕುಳಿತು ಉರಿಬಿಸಿಲಿನಲ್ಲಿ ಮೆರವಣಿಗೆ ಮಾಡಿಸಿಕೊಳ್ಳುವುದು

## ಕೆಲವು ಐತಿಹಾಸಿಕ ಸಂಗತಿಗಳು

ನಮ್ಮ ಪ್ರಜಾಪ್ರಭುತ್ವದಲ್ಲಿ ಎಲ್ಲರೂ ಸರಿಸಮಾನರೆಂದು ಹೇಳುತ್ತೇವೆ. ಪ್ರಜಾಪ್ರಭುಗಳನ್ನೇ ಉದಾಹರಿಸಬಹುದಾದರೆ ಮುಖ್ಯಮಂತ್ರಿಗೆ ಒಂದು ದೊಡ್ಡದಾದ ಬಂಗ್ಲೆ, ವಿಶೇಷ ಕಚೇರಿ, ಹಿಂದೆಮುಂದೆ ಹತ್ತಿಪ್ಪತ್ತು ಕಾರುಬಾರು; ಅದೇ ಒಬ್ಬ ಶಾಸಕನಿಗೆ ಜನರಲ್ ವಾರ್ಡನಂಥ ಒಂದು ಕೋಣೆ. ಮುಖ್ಯಮಂತ್ರಿಯ ಜವಾನನೂ ಒಬ್ಬ ಮನುಷ್ಯನೇ. ಆದರೆ ಅವನು ಬಾಗಿಲು ಕಾಯುತ್ತಾ ಹೊರಗೆ ಕೂಡಬೇಕು. ಎಲ್ಲರೂ ಸಮಾನರೆಂದಮೇಲೆ ಜವಾನನೂ, ಕಾರಕೂನನೂ, ಆಫೀಸರನೂ, ಮಂತ್ರಿಯೂ, ಶಾಸಕನೂ, ಗುರುವೂ, ಶಿಷ್ಯನೂ, ಒಡೆಯನೂ, ಸೇವಕನೂ ಎಲ್ಲರೂ ಒಂದೇ ರೀತಿಯ ಸೌಲಭ್ಯಗಳನ್ನು ಹೊಂದಬೇಕು. ನಮ್ಮ ರಾಷ್ಟ್ರದ ಅಧ್ಯಕ್ಷರಿಗೆ ಲಕ್ಷ ರೂಪಾಯಿ ಸಂಬಳ, ಅದಕ್ಕೂ ಹೆಚ್ಚಾಗಿ ಲೆಕ್ಕವಿಲ್ಲದಷ್ಟು ಇತರೆ ಸೌಲಭ್ಯಗಳು. ಅದೇ ಕಚೇರಿಯ ಜವಾನನಿಗೆ ಸಾವಿರಗಳಲ್ಲಿ ಸಂಬಳ. ಆಧುನಿಕ ಸಮಾಜದ ಎಲ್ಲ ಹಂತಗಳಲ್ಲೂ ಅವರವರ ಯೋಗ್ಯತೆ, ಸಾಮರ್ಥ್ಯ, ಸ್ಥಾನದ ಉನ್ನತಿ, ಅಧಿಕಾರ ಮುಂತಾದವುಗಳನ್ನು ಅವಲಂಬಿಸಿ ಹೆಚ್ಚು-ಕಡಿಮೆ ಎಂಬ ತಾರತಮ್ಯ, ಅಸಮಾನತೆ, ಇರುವುದನ್ನು ತೆಪ್ಪಗೆ ಒಪ್ಪಿಕೊಳ್ಳುವವರು ಧರ್ಮಕ್ಷೇತ್ರದ ಉನ್ನತ ಸ್ಥಾನದ ಅಧಿಪತಿಗಳು, ಅಧ್ಯಾತ್ಮದ ಶಕ್ತಿಕೇಂದ್ರವಾದ ಸ್ವಾಮಿಗಳಲ್ಲಿ ಮಾತ್ರ ಸರಿಸಮಾನತೆಯನ್ನು ಅಪೇಕ್ಷಿಸುತ್ತಾರೆ. ಇನ್ನೊಬ್ಬರು ಮೆರೆದರೆ ನಾವು 'ಅಸಹ್ಯ'ಪಟ್ಟುಕೊಳ್ಳದೆ ಸುಮ್ಮನಿರಬೇಕೆಂದೇ ಶರಣರು ಹೇಳಿದ್ದು. ಅಂಥ ಶರಣರ ಆದರ್ಶ ನಮಗಿರಬೇಕು.

ಹೊಸತು

ಸುಖಕರವಾದ ಸಂಗತಿಯಂತೂ ಅಲ್ಲವೇ ಅಲ್ಲ. ಅದರ ಹಿಂಸೆಯನ್ನು ಕುಳಿತವರೇ ಬಲ್ಲರು. ನಾನಿದನ್ನು ಅನೇಕ ಸ್ವಾಮಿಗಳ ಬಾಯಿಯಿಂದಲೇ ಕೇಳಿದ್ದೇನೆ. ಆದರೆ ಭಕ್ತರ ಭಕ್ತಿಯ ಒತ್ತಾಯಕ್ಕೆ ಮಣಿದು ಅವರು ಪಲ್ಲಕ್ಕಿಯಲ್ಲಿ ಕೂಡುತ್ತಾರೆ. ಇದೇ ಸ್ಥಿತಿ ೧೨ನೇ ಶತಮಾನದಲ್ಲೂ ಇದ್ದುದು ಚೆನ್ನಬಸವಣ್ಣನವರ ವಚನದಿಂದ ಸ್ಪಷ್ಟವಾಗುತ್ತದೆ. ಚೆನ್ನಬಸವಣ್ಣನವರು ಇನ್ನೊಂದು ವಚನದಲ್ಲಿ (ಸಂಖ್ಯೆ ೧೩೧೧) 'ನಿಮ್ಮ ಗುರುಗಳು ಪಲ್ಲಕ್ಕಿಯಲ್ಲಿ ವಿರಾಜಿಪ (ಮೆರೆಯುವ) ಪರಿ ನಿನ್ನ ಮನಕ್ಕೆ ವೇದ್ಯವೇ ? ಗುರು ಶಿಷ್ಯರ ಭಾವದ ಗೌರವ ನೀ ಬಲ್ಲೆಯಲ್ಲದೆ ಮತ್ತಾರಯ್ಯ ಕೂಡಲ ಚೆನ್ನಸಂಗಮದೇವಾ' ಎಂದು ಹೇಳುತ್ತಾರೆ. ಅಷ್ಟೇ ಅಲ್ಲ, ಮತ್ತೊಂದು ವಚನದಲ್ಲಿ (ಸಂಖ್ಯೆ ೧೪೯೩.) 'ಪಲ್ಲಕ್ಕಿಯಲ್ಲಿ ಗುರುಗಳ ಮೆರವಣಿಗೆಯೆ ನನ್ನ ಮೆರವಣಿಗೆ, ಅವರ ಆನಂದವೇ ನನ್ನ ಆನಂದ' ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ.

ವೈದಿಕ ಬ್ರಾಹ್ಮಣರು ಬಹು ತೀವ್ರವಾಗಿ ಖಂಡನೆಗೆ ಗುರಿಯಾಗಿದ್ದುದೂ ಶಿವಶರಣರ ಕಾಲದಲ್ಲಿ. ಶಿವ ಪಾರಮ್ಯವನ್ನು ಒಪ್ಪುವ ಶೈವ, ವೀರಶೈವರು ವೈಷ್ಣವ ಪಾರಮ್ಯವನ್ನು ಅಲ್ಲಗಳೆಯುತ್ತಲೇ ಬಂದಿರುವುದು ಸರ್ವವೇದ್ಯ. ಪ್ರಾಯಃ ಇದೇ ವೈಷಮ್ಯ ಆಧುನಿಕ ಕಾಲಕ್ಕೂ ಹರಿದುಬಂದಿತು. ವೀರಶೈವರು ವಿದ್ಯೆ ಕಲಿಯಲು ಅನರ್ಹರು, ವೇದಗಳನ್ನು ಉಚ್ಚವರ್ಗದ ಬ್ರಾಹ್ಮಣರು ಮಾತ್ರ ಅಧ್ಯಯನಮಾಡಬೇಕು, ಬ್ರಾಹ್ಮಣರು ಮಾತ್ರ ಪುರೋಹಿತರಾಗಲು ಸಮರ್ಥರು, ಎಂಬ ಮುಂತಾದ ವಿಷಯಗಳನ್ನು ಮುಂದು ಮಾಡಿಕೊಂಡು ತಲೆತಲಾಂತರದಿಂದ ವೀರಶೈವರನ್ನು ಬ್ರಾಹ್ಮಣರು ಕೀಳಾಗಿ ನಡೆಸಿಕೊಳ್ಳುತ್ತಲೆ ಬಂದಿದ್ದರು. ಪ್ರಾಯಃ ಇದೇ ಕಾರಣಕ್ಕೆ ವೀರಶೈವರು ತಾವೂ ಬ್ರಾಹ್ಮಣರಂತೆ ಮೇಲಾಗಬೇಕೆಂಬ ಚಳುವಳಿಯನ್ನು ಹಮ್ಮಿಕೊಂಡರು. ಬಳ್ಳಾರಿಯಲ್ಲಿ ಸಕ್ರಿಕರಡೆಪ್ಪನವರು, ಮೈಸೂರಿನಲ್ಲಿ ವೈ. ವೀರಸಂಗಪ್ಪನವರು, ಸೊಲ್ಲಾಪುರದಲ್ಲಿ ವಾರದ ಮಲ್ಲಪ್ಪನವರು, ಧಾರವಾಡದಲ್ಲಿ ಹಾಲಭಾವಿ ವೀರಭದ್ರಪ್ಪನವರು, ಅರಟಾಳ ರುದ್ರಗೌಡರು, ಬಿ. ಎಸ್. ಪಾಟೀಲರು, ಸರ್ ಸಿದ್ದಪ್ಪ ಕಂಬಳಿ ಅವರು, ವೇ.ಮೂ. ಶಿವಲಿಂಗಶಾಸ್ತ್ರಿಗಳು, ಬಿ. ಎಲ್. ಪಾಟೀಲರು, ಬೆಳಗಾವಿಯಲ್ಲಿ ಸಿರಸಂಗಿಲಿಂಗರಾಜರು, ರಾಜಾ ಲಖಮನಗೌಡ ವಂಟಮುರಿ ದೇಸಾಯಿಯರು, ಡೆಪುಟಿ ಚೆನ್ನಬಸಪ್ಪನವರು, ಮುಂಡರಗಿಯಲ್ಲಿ ಪುಟ್ಟಣ್ಣಪ್ಪನವರು, ಆಳವಂಡಿ ಬಿ. ಶಿವಮೂರ್ತಿ ಶಾಸ್ತ್ರಿಗಳು, ಇವರಲ್ಲದೆ ಕರ್ನಾಟಕ ಮಹಾರಾಷ್ಟ್ರದಾದ್ಯಂತ ವೀರಶೈವ ಮುಖಂಡರು ಈ ಚಳುವಳಿಗಳ ಮುಖ್ಯವ್ಯಕ್ತಿಗಳಾಗಿದ್ದರು. ನ್ಯಾಯವಾಗಿ ಸಿಗಬೇಕಾದ ಸೌಲಭ್ಯಗಳು ಅಲ್ಲದೆ ಧಾರ್ಮಿಕ ಸಾಮಾಜಿಕ ಸ್ಥಾನಮಾನಗಳು ಬ್ರಾಹ್ಮಣರಿಗೆ ದೊರೆಯುವಂತೆ ವೀರಶೈವರಿಗೂ ದೊರೆಯಬೇಕೆಂದೂ, ವೀರಶೈವರು ಬ್ರಾಹ್ಮಣರಿಗಿಂತ ಯಾವ ವಿಷಯದಲ್ಲೂ ಕೀಳು ಅಲ್ಲವೆಂದೂ ಅವರು ಬಲವಾಗಿ ಪ್ರತಿಪಾದಿಸುತ್ತಿದ್ದರಲ್ಲದೆ ಕೋರ್ಟುಗಳಲ್ಲಿ ಕೇಸು ಹಾಕುವುದರ ಮೂಲಕವಾಗಿ ಮತ್ತು ಸಾಮಾಜಿಕವಾಗಿ, ಧಾರ್ಮಿಕವಾಗಿ ಜನಜಾಗೃತಿ ಮೂಲಕವಾಗಿ ಹೋರಾಟಕ್ಕಿಳಿದರು. ಈ ಕಾರಣಕ್ಕಾಗಿ ವೀರಶೈವರು ಸಂಸ್ಕೃತವನ್ನು ಅಭ್ಯಾಸ ಮಾಡಬೇಕು, ವೇದಾಗಮಗಳನ್ನು ಕಲಿತುಕೊಳ್ಳಬೇಕು, ಬ್ರಾಹ್ಮಣರನ್ನು ಈ ದಿಶೆಯಲ್ಲಿ ಮೀರಿಸಬೇಕು ಎಂದು ಚಳುವಳಿಯ ನೇತಾರರು ವೀರಶೈವ ಜನಜಾಗೃತಿ ಮತ್ತು ಸಂಘಟನೆಯ ಕಾರ್ಯಗಳನ್ನು ತೀವ್ರವಾಗಿಸಿದರು. ಮಠಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು, ಉಚಿತ ಪ್ರಸಾದನಿಲಯಗಳನ್ನು, ಆರಂಭಿಸಿದರು. ವೀರಶೈವರನ್ನು ಲಿಂಗಿ ಬ್ರಾಹ್ಮಣರೆಂದು ಕರೆಯುವುದನ್ನು ತೀವ್ರಗೊಳಿಸಿದರು. ಸೊಲ್ಲಾಪುರದಲ್ಲಿ ವಾರದ ಮಲ್ಲಪ್ಪನವರು 'ವೀರಶೈವ ಲಿಂಗಿ ಬ್ರಾಹ್ಮಣ ಗ್ರಂಥಮಾಲೆ'ಯನ್ನೇ ಆರಂಭಿಸಿದರು. ೧೯-೨೦ನೇ ಶತಮಾನದಲ್ಲಿ ವೀರಶೈವರ ಈ ಚಳುವಳಿ ಜೋರಾಗಿಯೇ ಇತ್ತು. ಅಡ್ಡಪಲ್ಲಕ್ಕಿ ಉತ್ಸವವನ್ನು ಇಂಥ ಜಾಗೃತಿ-ಚಳುವಳಿಗೆ ವೀರಶೈವಭಕ್ತರು ಚೆನ್ನಾಗಿ ಬಳಸಿಕೊಂಡದ್ದು ವಿಶೇಷ.

ಕ್ರಿ.ಶ. ೧೯೦೨ರಲ್ಲಿ ಚಿತ್ರದುರ್ಗದ ಜಯದೇವ ಮುರುಘರಾಜೇಂದ್ರ ಸ್ವಾಮಿಗಳ ಅಡ್ಡಪಲ್ಲಕ್ಕಿ ಮಹೋತ್ಸವವು ಧಾರವಾಡದಲ್ಲಿ ನಡೆಯುವುದಾಗಿ ಘೋಷಿತವಾದಾಗ ಕೂಡಲಿ ಶಂಕರಾಚಾರ್ಯ ಮಠದ ಭಕ್ತರು ಆಕ್ಷೇಪಮಾಡಿದರು. ಆಗ ಹಾಲಭಾವಿ ವೀರಭದ್ರಪ್ಪನವರು ತಮ್ಮ ಅನೇಕ ಲಿಂಗಾಯತ ಸಮಾಜದ ಸಂಗಡಿಗರೊಂದಿಗೆ ತೀವ್ರಹೋರಾಟಕ್ಕೆ ಇಳಿದರು. ತಾವೇ ಸ್ವತಃ ಕಾನೂನು ತಜ್ಞರಾಗಿದ್ದುದರಿಂದ ಧಾರವಾಡ ಕಲೆಕ್ಟರರ ಮುಂದೆ ಅಡ್ಡಪಲ್ಲಕ್ಕಿ ಮೆರವಣಿಗೆಯ ಮಹತ್ವವನ್ನು ಸಾಧಾರಪೂರ್ವಕ ಮನವರಿಕೆಮಾಡಿಕೊಟ್ಟು ಅನುಮತಿಯನ್ನು ತರುವಲ್ಲಿ ಯಶಸ್ವಿಯಾದರು. ಜಯದೇವ ಸ್ವಾಮಿಗಳ ಅಡ್ಡಪಲ್ಲಕ್ಕಿ ಮೆರವಣಿಗೆಗಳು ಸಂಖ್ಯೆಗೆ

## ಅವಳ ಕತೆ

ಹಾಳುಬಿದ್ದ ಗೋಡೆಗಳ ಮೇಲೆ
ಬೆಳೆದಿದ್ದ ಹುಲ್ಲುಗರಿಕೆ
ಬಣ್ಣಗೆಟ್ಟ ಬಾಗಿಲು
ಸರಳ ಚೌಕಟ್ಟು ಕುಸರಿಲ್ಲ
ಕೆತ್ತನೆ ಕಲಾತ್ಮಕತೆಯಿಲ್ಲ
ಬೋಳು ಬೋಳಾದ ಬಾಗಿಲು
ಬಿಸಿಲು, ಮಳೆಗೆ ಕಪ್ಪಿಟ್ಟು ಕದಗಳು
ಬಡಿದಿದ್ದ ಪಟ್ಟಿಗಳು
ಈಗೋ ಆಗೋ ಉದುರುವ
ತುಕ್ಕು ಹಿಡಿದ ಮಳೆಗಳೊಂದಿಗೆ
ನೇತಾಡುತ್ತದೆ ದೊಡ್ಡ ಬೀಗ
ಕೌತುಕದಿಂದ ನಿರೀಕ್ಷಿಸುತ್ತಿದ್ದೆ
ಬಾಗಿಲು ತೆಗೆಯಬಹುದೇನೋ
ಯಾರಾದರೂ ಬರಬಹುದೇನೋ
ಬೀಗ ತೆಗೆಯಬಹುದೇನೋ

ಮುಚ್ಚಿದ ಬಾಗಿಲೊಳಗೆ
ಗೋರಿಗಳ ಬಿಕ್ಕಳಿಕೆ
ರಕ್ತ ಮಾಂಸದ ಹೊದಿಕೆ
ಒಳಗೆ ಮಿಸುಕುವ ಜೀವ
ಬದುಕಿದ್ದಾಳೆ ಒಳಗೆ ಅವಳು
ಬೇಡದ ಮಕ್ಕಳಿಗೆ
ಜನ್ಮ ನೀಡುತ್ತ,
ತವರಿಲ್ಲದ ಅನಾಥೆ
ದಂಗೆಯಲಿ ಮುಚ್ಚಿದ
ಅವಳ ಮನೆ ಬಾಗಿಲಿಗೆ
ಹೊರಗಿನಿಂದ ಬೀಗಮುದ್ರೆ
ಒಳಗಿಂದ ಹರಿದು ಬರುವ
ಬಚ್ಚಲ ನೀರಿನ ಹರಿವು
ಸುಳಿವು ನೀಡುತ್ತದೆ
ಒಳಗೆ ಬದುಕಿರುವ
ಅವಳ ಕಥೆ ಹೇಳುತ್ತದೆ



ಕೆ. ಷರಿಫಾ ಎ.ಪಿ.ಎಂ.ಸಿ.
ಹರಿಹರ

ನಿಲುಕದಷ್ಟಿವೆ. ೧೯೧೧ನೇ ಇಸ್ವಿ ಸೆಪ್ಟೆಂಬರ್ ೧೧ರಂದು ಬಾಗಲಕೋಟೆಯಲ್ಲಿ ಮೆರವಣಿಗೆ ನಡೆಯುವುದಾಗಿ ಘೋಷಣೆಯಾದಾಗಲೂ ಕೆಲ ಬ್ರಾಹ್ಮಣರು ಆಕ್ಷೇಪಿಸಿ ಕೋರ್ಟಿನಿಂದ ತಡೆಯಾಜ್ಞೆಯನ್ನು ತಂದು ಅದನ್ನು ಮಾಮಲೇದಾರರಿಗೆ ಒಪ್ಪಿಸಿ ಮೆರವಣಿಗೆಯನ್ನು ನಿಲ್ಲಿಸಲು ಸಕಲಯತ್ನ ನಡೆಸಿದರು. ಮೆರವಣಿಗೆಯನ್ನು ಮಾಡುತ್ತಿದ್ದ ಭಕ್ತರು ಸಿಟ್ಟಿಗೆದ್ದುದಲ್ಲದೆ ಆಕ್ಷೇಪಿಸಿದವರನ್ನು ಚೆನ್ನಾಗಿ ಥಳಿಸಿ ಮೆರವಣಿಗೆಯನ್ನು ನಡೆಸಿಯೇಬಿಟ್ಟರು. ನಂತರ ಕೋರ್ಟಿನಲ್ಲಿ ಖಟ್ಲೆ ನಡೆದು ತೀರ್ಪು ಲಿಂಗಾಯತರ ಪರವಾಗಿ ಬಂದಿತು. ೧೯೧೯ರ ಜೂನ್ ೮ರಂದು ಬೆಳಗಾವಿ ಜಿಲ್ಲೆಯ ಯಾದವಾಡದಲ್ಲಿಯೂ ಬ್ರಾಹ್ಮಣರ ವಿರೋಧದಲ್ಲಿಯೇ ಅಡ್ಡಪಲ್ಲಕ್ಕಿ ಮೆರವಣಿಗೆ ನಡೆಯಿತು. ಅದೇ ವರ್ಷ ಬೆಂಗಳೂರಿನಲ್ಲೂ (ಜುಲೈ ೧೩, ೧೯೧೯) ಅಡ್ಡಪಲ್ಲಕ್ಕಿ ಮೆರವಣಿಗೆ ನಡೆಯಿತು. ಮೆರವಣಿಗೆಯ ನಂತರ ನಡೆದ ಸಭೆಯಲ್ಲಿ ಮುಸ್ಲಿಮ್ ಬಾಂಧವರು ಸ್ವಾಮಿಗಳಿಗೆ ಮಾನಪತ್ರವನ್ನು ಅರ್ಪಿಸಿದ್ದು ಸ್ಮರಣೀಯ ಅಂಶವೆನಿಸಿದೆ.




ಅಡ್ಡಪಲ್ಲಕ್ಕಿ ಉತ್ಸವವನ್ನು ಸಹಿಸದೆ ಕೆಲವರು ಮಾತ್ರ ಆಗಾಗ ಅಡ್ಡಿಪಡಿಸಿದಂತೆ ತಿಳಿದುಬರುತ್ತದೆ. ಹಾಗೆ ನೋಡಿದರೆ ಬ್ರಾಹ್ಮಣರೆಲ್ಲರೂ ಸಾರಾಸಗಟಾಗಿ ಅಡ್ಡಪಲ್ಲಕ್ಕಿ ಉತ್ಸವವನ್ನು ವಿರೋಧಿಸಿರುವಂತೆ ತೋರುವುದಿಲ್ಲ. ಉದಾಹರಣೆಗೆ, ಜ್ಯೇಷ್ಠ ಶುದ್ಧ ೧, ತಾರೀಖು ೨೬ ಮೇ ೧೯೧೪ರಂದು ಮಂಗಳವಾರ ಬನವಾಸಿಯಲ್ಲಿ ನಡೆದ ಅಡ್ಡಪಲ್ಲಕ್ಕಿ ಉತ್ಸವವು ನಡೆದ ಮರುದಿನ ಅಲ್ಲಿ ಗೋಪಾಳದೇವ ಎಂಬ ಬ್ರಾಹ್ಮಣ ಸ್ವಾಮಿಗಳು ಜಯದೇವ ಸ್ವಾಮಿಗಳನ್ನು ಬಿನ್ನವಿಸಿಕೊಂಡು ತಮ್ಮ ಭವ್ಯವಾದ ಮಠಕ್ಕೆ ಬರಮಾಡಿಕೊಂಡು ಗೌರವಪೂರ್ವಕ ಸತ್ಕಾರವನ್ನು ಮಾಡಿದ್ದು, ರಾಣಿ ಸಾವರಗಾಂವದಲ್ಲಿನ ಬ್ರಾಹ್ಮಣರು ಸ್ವತಃ ಉತ್ಸವದಲ್ಲಿ ಭಾಗಿಯಾಗಿದ್ದುದು ಚಿತ್ರದುರ್ಗ ಮಠದ ಕಾರಭಾರಿ ಚನ್ನಬಸವಯ್ಯ ಹೇಮಗಿರಿಮಠ ಅವರ ದಿನಚರಿಯಲ್ಲಿ ನಮೂದಾಗಿವೆ.

ಅಡ್ಡಪಲ್ಲಕ್ಕಿ ಮೆರವಣಿಗೆಗಳಿಗೆ ಅಪಾರ ಶ್ರದ್ಧಾವಂತ ಜನರು ಸೇರುತ್ತಿದ್ದರು. ಅಷ್ಟೇ ಅಲ್ಲ ಸರಕಾರದವರು ಮೆರವಣಿಗೆಗೆ ರಕ್ಷಣೆಯೊಂದಿಗೆ ಬಿರುದುಬಾವಲಿಗಳನ್ನು ನೀಡುತ್ತಿದ್ದರು. ೧೯೨೮ರ ಅಕ್ಟೋಬರ್ ೨೦ರಂದು ಮೈಸೂರು ರಾಜ್ಯದ ಮುಜರಾಯಿ ಕಮಿಷನರ್ ಅವರು ಹೊರಡಿಸಿದ ಆದೇಶದಲ್ಲಿ ಸರಕಾರವು ಯಾವ ಯಾವ ಬಗೆಯ ವ್ಯವಸ್ಥೆಯನ್ನು ಅಡ್ಡಪಲ್ಲಕ್ಕಿ ಉತ್ಸವಕ್ಕೆ ಒದಗಿಸಬೇಕು ಎಂಬ ಬಗೆಗಿನ ವಿವರಗಳಿವೆ. ಕ್ರಿ.ಶ. ೧೯೧೮ರ ಮಾರ್ಚ್ ೧೦ ರವಿವಾರದಂದು ಕಾಶಿಯಲ್ಲಿ ನಡೆದ ಪಂಚಾಚಾರ್ಯರ ಅಡ್ಡಪಲ್ಲಕ್ಕಿ ಉತ್ಸವಕ್ಕೆ ಭಾರತದಾದ್ಯಂತ ಸಹಸ್ರಾರು ಭಕ್ತರು ಸೇರಿದ್ದರು. ಒಂದು ಮಹಾಯುದ್ಧದಲ್ಲಿ ಮಗ್ನವಾಗಿದ್ದರೂ ಆಗಿನ ಬ್ರಿಟಿಷ್ ಸರಕಾರದವರು ಪಂಚಾಚಾರ್ಯರ ಅಡ್ಡಪಲ್ಲಕ್ಕಿ ಉತ್ಸವಕ್ಕೆ ೭೨ ಬಿರುದು ಬಾವಲಿಗಳನ್ನು ಕಳುಹಿಸಿದ ವಿಷಯವನ್ನು ರಂಭಾಪುರೀ ಜಗದ್ಗುರುಗಳವರು ತಮ್ಮ ಆಶೀರ್ವಚನದಲ್ಲಿ ಪ್ರಸ್ತಾಪಿಸಿದ್ದಾರೆ. ಹಾಗೆಯೇ ಬಿರುದುಬಾವಲಿಗಳನ್ನು ಕಳಿಸಿದ ಮೈಸೂರು ದೊರೆಗಳಾದ ಕೃಷ್ಣರಾಜ ಒಡೆಯರ್ ಅವರಿಗೂ, ವಿಶೇಷವಾಗಿ ಎಂಟು ಆನೆಗಳನ್ನು ಕಳುಹಿಸಿದ್ದ ಕಾಶಿಯ ಮಹಾರಾಜರಿಗೂ ಜಗದ್ಗುರುಗಳು ಆಶೀರ್ವದಿಸಿದ್ದಾರೆ. ಆದ್ದರಿಂದ ಆಗಿನ ಕಾಲದಲ್ಲಿ ಅಡ್ಡಪಲ್ಲಕ್ಕಿ ಉತ್ಸವ ಒಬ್ಬ ಖಾಸಗಿ ಸ್ವಾಮಿಗಳ ಮೆರವಣಿಗೆಯಾಗಿರದೆ ಸರಕಾರಿ ಮರ್ಯಾದೆಯಿಂದ ಕೂಡಿದ ಅಧಿಕೃತ ಮೆರವಣಿಗೆಯಾಗಿರುತ್ತಿತ್ತು.

ಕೆಲವರು ಧರ್ಮದ ಪರಂಪರೆ ಸಂಪ್ರದಾಯಗಳ ಬಗೆಗೆ ಹೇಳಿದಾಕ್ಷಣ ಅಸಂಖ್ಯಾತ ಶ್ರದ್ಧಾವಂತರು ಬದಲಾಗಿಬಿಡುವುದಿಲ್ಲ. ಉರಿಲಿಂಗಪೆದ್ದಿ ಎಂಬ ಶಿವಶರಣ ತನ್ನ ಒಂದು ವಚನದಲ್ಲಿ "ಶಿವಾಚಾರ ಶಿವಕಾರ್ಯಕ್ಕೆ ವಕ್ರವಾದವರ, ಗುರುಲಿಂಗಜಂಗಮವ ನಿಂದಿಸಿ ನುಡಿದವರ, ಬಾಯಸೀಳಿ ನಾಲಗೆಯ ಕಿತ್ತು ಕೊಲುವೆನು" ಎಂದು ಹೇಳಿದರೆ, ಬಸವಣ್ಣ "ಅನ್ಯರಿಗೆ ಅಸಹ್ಯಪಡಬೇಡ", "ಆತ್ಮಸ್ತುತಿ, ಪರನಿಂದೆ, ಅಸಹ್ಯ, ಅನೃತ, ಕುತರ್ಕ ಉಡುಗದನ್ನಕ್ಕರ ಅನುಭಾವವೆಲ್ಲಿಯದೊ" ಎಂದಿದ್ದಾನೆ.

ಆಧುನಿಕ ವಿಚಾರವಾದದ ಪ್ರಭಾವಕ್ಕೆ ಒಳಗಾಗಿ ಒಂದು ಧರ್ಮದ ಪರಂಪರಾಗತ ಸಾಂಪ್ರದಾಯಿಕ ಆಚರಣೆಯನ್ನು ಹೀಗಳೆಯುವಂಥ ಪ್ರವೃತ್ತಿಯು ತತ್ಕಾಲದಲ್ಲಿ ಬಹಳ ಆಕರ್ಷಕವಾಗಿ ಕಾಣಬಹುದು. ಹೀಗೆ ಹೇಳುವುದರಿಂದ ಗೊಡ್ಡು ಸಂಪ್ರದಾಯಗಳನ್ನು ಟೀಕಿಸಲೇಬಾರದು ಎಂದರ್ಥವಲ್ಲ, ಅಥವಾ ಮೂಲಭೂತವಾದವನ್ನು ಸಮರ್ಥಿಸಿದಂತೆ ಎಂಬರ್ಥವೂ ಅಲ್ಲ. ಆಧುನಿಕ ಕಾಲಕ್ಕೆ ತಕ್ಕಂತೆ ಧರ್ಮದ ವಿಶಿಷ್ಟ ಸಂಪ್ರದಾಯಗಳಿಗೆ ಸೂಕ್ತ ಪರ್ಯಾಯಗಳನ್ನೂ ಸೂಚಿಸಿ ಅದರಂತೆ ಆಚರಿಸಿದಲ್ಲಿ, ಸಮಾಜದ ಬಹುಜನ ಸಮುದಾಯ ಅದನ್ನು ಒಪ್ಪಿಕೊಳ್ಳುವಂತೆ ವಿನಯಪೂರ್ವಕವಾಗಿ ಮನವರಿಕೆಮಾಡಿಕೊಟ್ಟಲ್ಲಿ, ನಿಜವಾಗಿಯೂ ಆಧುನಿಕರ ವೈಚಾರಿಕತೆಗೆ ಬೆಲೆ ಬರುತ್ತದೆ. ಪಂಚಪೀಠಾಧಿಪತಿಗಳೂ ಸಮಾಜದ ಹಿತದೃಷ್ಟಿಯಿಂದ ಈ ನಿಟ್ಟಿನಲ್ಲಿ ತಮ್ಮ ಪೂರ್ವಕಾಲೀನ ಸಂಪ್ರದಾಯಗಳನ್ನು ಸಾಕಷ್ಟು ಸರಳಗೊಳಿಸಿಕೊಂಡಿದ್ದಾರೆ. ಆಧುನಿಕತೆಗೆ ತಕ್ಕಂತೆ ಧರ್ಮಾಚರಣೆಗಳಲ್ಲಿ ಬದಲಾವಣೆ ಆಗಬೇಕಾದದ್ದೂ ಒಳಿತೇ. ಬದಲಾವಣೆಯೇ ಬೆಳವಣಿಗೆಯ ಲಕ್ಷಣ. ಆದ್ದರಿಂದ ಇನ್ನು ಮುಂದೆ ಅಡ್ಡಪಲ್ಲಕ್ಕಿ ಉತ್ಸವಗಳು ಚೆನ್ನಮ್ಮನ ಕಿತ್ತೂರಿನ ಭಕ್ತರು ನಡೆಸಿದಂತೆ ದೊಡ್ಡ ವಾಹನಗಳಲ್ಲಿ ನಡೆಯುವಂತೆ ಎಲ್ಲ ಭಕ್ತರೂ ನೋಡಿಕೊಳ್ಳಬೇಕು. ಮೆರವಣಿಗೆಗೆ ಪಲ್ಲಕ್ಕಿಯೇ ಆಗಬೇಕೆಂದು ಅವರು ಪಟ್ಟು ಹಿಡಿಯಬಾರದು. ಅದಕ್ಕೆ ಎಲ್ಲಾ ಧರ್ಮಗಳ ಸ್ವಾಮಿಗಳೂ ಬದ್ಧರಾಗಬೇಕು. ಪಂಚಾಚಾರ್ಯರೇ ಈ ಬದಲಾವಣೆಗೆ ಮೊದಲಿಗರಾದರೆ ಇನ್ನೂ ಉತ್ತಮ. ಆದರೆ ವೈಚಾರಿಕತೆಯ ಹೆಸರಿನಲ್ಲಿ ಅಲ್ಲಸಲ್ಲದ ಮಾತುಗಳಿಂದ ಬರಿ ಕಟುಮಾತಿನಲ್ಲಿ ಅಡ್ಡಪಲ್ಲಕ್ಕಿ ಉತ್ಸವಗಳನ್ನು ಟೀಕಿಸುವುದು ತರವಲ್ಲ.

ಇನ್ನು ಸಮಾನತೆಯ ವಿಚಾರವನ್ನು ಕೆಲವರು ಹೇಳುತ್ತಾರೆ. ನಮ್ಮ ಪ್ರಜಾಪ್ರಭುತ್ವದಲ್ಲಿ ಎಲ್ಲರೂ ಸರಿಸಮಾನರೆಂದು ಹೇಳುತ್ತೇವೆ. ಪ್ರಜಾಪ್ರಭುಗಳನ್ನೇ ಉದಾಹರಿಸಬಹುದಾದರೆ ಮುಖ್ಯಮಂತ್ರಿಗೆ ಒಂದು ದೊಡ್ಡದಾದ ಬಂಗ್ಲೆ, ವಿಶೇಷ ಕಚೇರಿ, ಹಿಂದೆಮುಂದೆ ಹತ್ತಿಪ್ಪತ್ತು ಕಾರುಬಾರು; ಅದೇ ಒಬ್ಬ ಶಾಸಕನಿಗೆ ಜನರಲ್ ವಾರ್ಡನಂಥ ಒಂದು ಕೋಣೆ. ಮುಖ್ಯಮಂತ್ರಿಯ ಜವಾನನೂ ಒಬ್ಬ ಮನುಷ್ಯನೇ. ಆದರೆ ಅವನು ಬಾಗಿಲು ಕಾಯುತ್ತಾ ಹೊರಗೆ ಕೂಡಬೇಕು. ಎಲ್ಲರೂ ಸಮಾನರೆಂದಮೇಲೆ ಜವಾನನೂ, ಕಾರಕೂನನೂ, ಆಫೀಸರನೂ, ಮಂತ್ರಿಯೂ, ಶಾಸಕನೂ, ಗುರುವೂ, ಶಿಷ್ಯನೂ, ಒಡೆಯನೂ, ಸೇವಕನೂ ಎಲ್ಲರೂ ಒಂದೇ ರೀತಿಯ ಸೌಲಭ್ಯಗಳನ್ನು ಹೊಂದಬೇಕು. ನಮ್ಮ ರಾಷ್ಟ್ರದ ಅಧ್ಯಕ್ಷರಿಗೆ ಲಕ್ಷ ರೂಪಾಯಿ ಸಂಬಳ, ಅದಕ್ಕೂ ಹೆಚ್ಚಾಗಿ ಲೆಕ್ಕವಿಲ್ಲದಷ್ಟು ಇತರೆ ಸೌಲಭ್ಯಗಳು. ಅದೇ ಕಚೇರಿಯ ಜವಾನನಿಗೆ ಸಾವಿರಗಳಲ್ಲಿ ಸಂಬಳ. ಆಧುನಿಕ ಸಮಾಜದ ಎಲ್ಲ ಹಂತಗಳಲ್ಲೂ ಅವರವರ ಯೋಗ್ಯತೆ, ಸಾಮರ್ಥ್ಯ, ಸ್ಥಾನದ ಉನ್ನತಿ, ಅಧಿಕಾರ ಮುಂತಾದವುಗಳನ್ನು ಅವಲಂಬಿಸಿ ಹೆಚ್ಚು-ಕಡಿಮೆ ಎಂಬ ತಾರತಮ್ಯ, ಅಸಮಾನತೆ, ಇರುವುದನ್ನು ತೆಪ್ಪಗೆ ಒಪ್ಪಿಕೊಳ್ಳುವವರು ಧರ್ಮಕ್ಷೇತ್ರದ ಉನ್ನತ ಸ್ಥಾನದ ಅಧಿಪತಿಗಳು, ಅಧ್ಯಾತ್ಮದ ಶಕ್ತಿಕೇಂದ್ರವಾದ ಸ್ವಾಮಿಗಳಲ್ಲಿ ಮಾತ್ರ ಸರಿಸಮಾನತೆಯನ್ನು ಅಪೇಕ್ಷಿಸುತ್ತಾರೆ. ಇನ್ನೊಬ್ಬರು ಮೆರೆದರೆ ನಾವು 'ಅಸಹ್ಯ'ಪಟ್ಟುಕೊಳ್ಳದೆ ಸುಮ್ಮನಿರಬೇಕೆಂದೇ ಶರಣರು ಹೇಳಿದ್ದು. ಅಂಥ ಶರಣರ ಆದರ್ಶ ನಮಗಿರಬೇಕು.

ಡಾ|| ಸಂಗಮೇಶ ಸವದತ್ತಿಮಠ
'ಸನ್ನಿಧಿ', ೧೭೧, ಕುಮಾರೇಶ್ವರ ನಗರ, ಬೆಳಗಾವಿ ರಸ್ತೆ, ಧಾರವಾಡ - ೫೮೦ [illegible]

# ದಾವಣಗೆರೆ ಜಿಲ್ಲೆಯ ಸ್ವದೇಶಿ ಚಳವಳಿ

## ಸ್ವಾತಂತ್ರ್ಯ ಹೋರಾಟದ ಸಂದರ್ಭ



*ದಾವಣಗೆರೆ ಜಿಲ್ಲೆಯಲ್ಲಿ ಬ್ರಿಟಿಷ್ ಆಳ್ವಿಕೆಯ ವಿರುದ್ಧ ನಿರಂತರ ಹೋರಾಟಗಳು ನಡೆದವು. ಇದರಲ್ಲಿ ಸಮಾಜದ ಎಲ್ಲ ವರ್ಗದ ಜನರೂ ಭಾಗವಹಿಸಿದರು. ರೈತರು, ಕುಶಲಕರ್ಮಿಗಳು, ಕೈಗಾರಿಕಾ ಕಾರ್ಮಿಕರು ಹಾಗೂ ಮಹಿಳೆಯರು ಬ್ರಿಟಿಷ್ ಆಳ್ವಿಕೆಯ ವಿರುದ್ಧ ಧ್ವನಿ ಎತ್ತಿದರು. ಇವರೆಲ್ಲರೂ ಕೆಲವು ಸ್ವದೇಶಿ ಚಳವಳಿಯ ಮುಖಂಡರ ನಾಯಕತ್ವದಲ್ಲಿ ಹೋರಾಟ ನಡೆಸಿದರು. ಈ ರೀತಿಯಾಗಿ ಹೋರಾಟವು ಭಿನ್ನ ಭಿನ್ನ ಸ್ವರೂಪಗಳನ್ನು ಪಡೆದುಕೊಂಡು ನಡೆಯಿತು. ಸ್ವದೇಶಿ ಚಳವಳಿಯು ಮುಂದಿನ ಎಲ್ಲ ಹೋರಾಟಗಳಿಗೆ ಪ್ರೇರಕ ಶಕ್ತಿಯಾಗಿ ಕಂಡುಬಂತು. ಸ್ವದೇಶಿ ಚಳವಳಿಯು ಯಾವುದೋ ಒಂದು ಸಂದರ್ಭದಲ್ಲಿ ಒಂದು ಘಟನೆಯ ವಿರುದ್ಧ ಹುಟ್ಟಿಕೊಂಡದ್ದಾದರೂ ನಂತರ ನಡೆದ ಎಲ್ಲ ಹೋರಾಟಗಳ ಸಂದರ್ಭಗಳಲ್ಲೂ ಸ್ವದೇಶಿ ಪ್ರಜ್ಞೆ ಬಲವಾಗಿ ಕೆಲಸ ಮಾಡಿತು.*

**ಹಿರೇಬಿದ್ರಿ ಹೊಳಿಬಸಪ್ಪ**

**ಸ್ವಾ**ತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ಭಾಗವಾಗಿದ್ದ ದಾವಣಗೆರೆಯಲ್ಲಿ ನಡೆದ ಸ್ವದೇಶಿ ಚಳವಳಿ ಅಲ್ಲಿನ ಹತ್ತಿ ಉತ್ಪಾದನೆಯಿಂದಾಗಿ ಕರ್ನಾಟಕದಲ್ಲಿಯೇ ಅತ್ಯಂತ ಮಹತ್ವದ್ದಾಗಿ ಕಂಡುಬಂತು. ದಾವಣಗೆರೆಯನ್ನು ಕರ್ನಾಟಕದ 'ಮ್ಯಾಂಚೆಸ್ಟರ್' ನಗರವೆಂಬುದಾಗಿ ಕರೆಯಲಾಗುತ್ತಿತ್ತು. ದಾವಣಗೆರೆಯೂ ಹತ್ತಿ ಉತ್ಪಾದನೆಗೆ ಪ್ರಸಿದ್ಧಿಯಾಗಿತ್ತು. ಅಲ್ಲಿ ಆರಂಭಗೊಂಡ ಹತ್ತಿಗಿರಣಿಗಳು ಹೊಸ ಕೈಗಾರಿಕಾ ವಾತಾವರಣವೊಂದನ್ನು ಹುಟ್ಟುಹಾಕಿದವು. ಸ್ವದೇಶಿ ಚಳವಳಿಯಲ್ಲಿ ಹತ್ತಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿತ್ತು. ಹತ್ತಿ ಬೆಳೆಯುವ ಪ್ರದೇಶಗಳಲ್ಲೆಲ್ಲ ಸ್ವದೇಶಿ ಚಳವಳಿ ಅತ್ಯಂತ ಚುರುಕಿನಿಂದ ಕೂಡಿತ್ತು. ಖಾದಿ ಉದ್ಯಮವು ಬ್ರಿಟಿಷ್ ವಸಾಹತು ನೀತಿಗೆ ಒಡ್ಡಿದ ಪ್ರಬಲ ಪ್ರತಿರೋಧವಾಗಿತ್ತು. ದಾವಣಗೆರೆ ಜಿಲ್ಲೆಯಲ್ಲಿ ಈ ರೀತಿಯ ಪ್ರಯತ್ನಗಳು ನಡೆದವು. ಸ್ವದೇಶಿ ಚಳವಳಿಯ ಬಗ್ಗೆ ಹೋರಾಡಿದ ಪ್ರಮುಖ ನಾಯಕರಲ್ಲಿ ಖಾದಿ ಸಿದ್ಧಪ್ಪ, ಕಾಸಲ ಶ್ರೀನಿವಾಸ ಶೆಟ್ಟಿ, ಇಟಗಿ ವೇದಮೂರ್ತಿ, ಕೊಟಿಗೆ ಸಿದ್ಧಲಿಂಗಪ್ಪ, ಇಜಾರಿ ಖಾಸುಪಾಲಪ್ಪ, ಬಳ್ಳಾರಿ ಸಿದ್ದಮ್ಮ, ಹರ್ಡೇಕರ್ ಮಂಜಪ್ಪ, ಶೆಟ್ರಚೂಡಪ್ಪ, ಕೆ. ಎಂ. ಅಣಜಿಮಠ, ಕೆ. ಎಚ್. ಮಹಾದೇವಪ್ಪ ಟಿ. ಎಸ್. ಓಬಳಪ್ಪ ಪಂಡಿತ್, ಕೆ. ಟಿ .ಜಂಬಣ್ಣ ಮೊದಲಾದವರು ಪ್ರಮುಖರು.

ದಾವಣಗೆರೆ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ವಿವಿಧ ಮಜಲುಗಳನ್ನು ಗುರುತಿಸುವಾಗ ಸ್ವದೇಶಿ ಚಳವಳಿ ವ್ಯಾಪಕ ಬೆಂಬಲವನ್ನು ಪಡೆದುಕೊಂಡ ಚಳವಳಿಯಾಗಿ ಕಂಡುಬರುತ್ತದೆ. ಬ್ರಿಟಿಷ್ ಬಂಡವಾಳಶಾಹಿ ಧೋರಣೆಯನ್ನು ತನ್ನ ಕಾರ್ಯಾಚರಣೆಯ ಮೂಲಕ ಇದು ಪ್ರಶ್ನಿಸಿತು. ಹಾಗೂ ಸಾಧ್ಯವಾದಷ್ಟು ಮಟ್ಟಿಗೆ ಬದಲಿ ವ್ಯವಸ್ಥೆಯೊಂದನ್ನು ಹುಟ್ಟುಹಾಕುವತ್ತ ಹೆಜ್ಜೆ ಹಾಕಿತು. ಗಾಂಧೀಜಿ ಭಾರತಕ್ಕೆ ಬರುವ ಪೂರ್ವದಲ್ಲಿಯೇ ಸ್ವದೇಶಿ ಚಳವಳಿ ಆರಂಭವಾಗಿತ್ತು. ಬಂಗಾಳದ ವಿಭಜನೆಯಿಂದ ಬೇಸತ್ತ ರಾಷ್ಟ್ರನಾಯಕರು ವಿದೇಶಿ ಆಳ್ವಿಕೆಯ ವಿರುದ್ಧ ಚಳವಳಿ ಆರಂಭಿಸಿದರು. ತಿಲಕರು ಸ್ವದೇಶಿ ಚಳವಳಿಯನ್ನು ಆರಂಭಿಸಿದರು. ವಿದೇಶಿ ವಸ್ತುಗಳನ್ನು ಬಹಿಷ್ಕರಿಸುವಂತೆ ಕರೆಕೊಟ್ಟರು. ತಿಲಕರ ಸ್ವದೇಶಿ ಚಳವಳಿಗೆ ಕರ್ನಾಟಕದಲ್ಲಿ ಉತ್ತಮ ಪ್ರತಿಕ್ರಿಯೆ ಇತ್ತು. ತಿಲಕರು ಕರ್ನಾಟಕಕ್ಕೆ ಭೇಟಿಕೊಟ್ಟು, ಸ್ವದೇಶಿ ಹಾಗೂ ರಾಷ್ಟ್ರೀಯ ಶಿಕ್ಷಣದ ಪ್ರಾಮುಖ್ಯತೆಯನ್ನು ವಿವರಿಸಿದರು. ದಾವಣಗೆರೆಯಿಂದ ಹರ್ಡೇಕರ ಮಂಜಪ್ಪ 'ಕೇಸರಿ ಎಂಬ ತಿಲಕರ ಮರಾಠಿ' ಪತ್ರಿಕೆಯನ್ನು ಕನ್ನಡಕ್ಕೆ ಅನುವಾದಿಸಿ ಸ್ವದೇಶಿಯ ಬಗ್ಗೆ ಜನರಿಗೆ ತಿಳಿಸಿದರು. ನಂತರ ಗಾಂಧೀಜಿಯವರು ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಬಂದ ಮೇಲೆ ದೇಶದ ತುಂಬ ಪ್ರವಾಸ ಕೈಗೊಂಡರು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ಭಾಗವಾಗಿದ್ದ ದಾವಣಗೆರೆಗೆ ಗಾಂಧೀಜಿಯವರ ಆಗಮನ ಎರಡು ಬಾರಿ ಆಯಿತು. ಮೊದಲನೇ ಹಂತದಲ್ಲಿ ದಾವಣಗೆರೆಗೆ ಬಂದಾಗ ಜನರಲ್ಲಿ ಸ್ವಾತಂತ್ರ್ಯದ ಬಗ್ಗೆ ತಿಳಿಹೇಳಿದರು. ವಿದೇಶಿ ವಸ್ತುಗಳನ್ನು ಬಹಿಷ್ಕರಿಸುವಂತೆ, ಸ್ವದೇಶಿ ವಸ್ತುಗಳನ್ನು ಪುರಸ್ಕರಿಸುವಂತೆ ಮತ್ತು ಖಾದಿ ಉದ್ದಿಮೆಯನ್ನು ಪ್ರೋತ್ಸಾಹಿಸುವಂತೆ ಗುಡಿ ಕೈಗಾರಿಕೆಗಳು, ಗ್ರಾಮೋದ್ಯೋಗದ ಬಗ್ಗೆ ಪ್ರಚಾರ ಮಾಡಿದರು. ಗಾಂಧೀಜಿಯವರ ಸಲಹೆ ಮೇರೆಗೆ ದಾವಣಗೆರೆ ಜಿಲ್ಲೆಯ ನಾಯಕರು ಸ್ವದೇಶಿ ಚಳವಳಿಯಲ್ಲಿ ಭಾಗವಹಿಸಿದರು. ಎರಡನೇ ಬಾರಿ ಗಾಂಧೀಜಿಯವರು ದಾವಣಗೆರೆಗೆ ಬಂದಾಗ ಅವರು ಹರಿಜನರ ಅಭಿವೃದ್ಧಿಯ ಬಗ್ಗೆ ಪ್ರವಾಸಕೈಗೊಂಡರು. ದಾವಣಗೆರೆ ಹರಿಜನರ ಕೇರಿಯಲ್ಲಿ ಸಂಚರಿಸಿದರು, ನಂತರ ಹರಿಜನ ವಿದ್ಯಾರ್ಥಿನಿಲಯಕ್ಕೆ ಶಂಕುಸ್ಥಾಪನೆ ಮಾಡಿದರು. ಈ ಸಂದರ್ಭದಲ್ಲಿ ದಾವಣಗೆರೆಯಲ್ಲಿ ಸ್ವದೇಶಿ ಚಳವಳಿಗಳು ತುಂಬ ಚುರುಕಿನಿಂದ ನಡೆದವು. ಗಾಂಧೀಜಿಯ ಆಗಮನ ಕರ್ನಾಟಕದ, ಅದರಲ್ಲೂ ದಾವಣಗೆರೆಯಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಹೋರಾಟದ ದಿಕ್ಕನ್ನೇ ಬದಲಾಯಿಸಿತು. ಗಾಂಧೀಜಿಯವರ ಆಕರ್ಷಣೆಗೆ ಒಳಗಾದವರನ್ನು ಎರಡು ಗುಂಪುಗಳನ್ನಾಗಿ ಮಾಡಬಹುದು. ಒಂದು ಗುಂಪು ಗಾಂಧೀಜಿಯವರ ಅಹಿಂಸೆ, ಸತ್ಯಾಗ್ರಹ ಮಾದರಿಯ ಚಳವಳಿಯನ್ನು ಒಪ್ಪಿಕೊಂಡವರದು. ಮತ್ತೊಂದು ಗುಂಪಿನಲ್ಲಿ ಗಾಂಧೀಜಿಯವರ ಆಕರ್ಷಣೆಗೆ ಒಳಗಾಗಿಯೂ ತೀವ್ರವಾದಿಗಳನ್ನು ಒಪ್ಪಿಕೊಂಡವರು. ಅಂತಹವರಲ್ಲಿ ಇಟಗಿ ವೇದಮೂರ್ತಿಯವರು ಹಾಗೂ ಮುರಿಗೆಪ್ಪನವರು ಪ್ರಮುಖರು. ಗಾಂಧೀಜಿಯವರನ್ನು ಶ್ರದ್ಧಾಪೂರ್ವಕವಾಗಿ ಒಪ್ಪಿಕೊಂಡವರಲ್ಲಿ ಪ್ರಮುಖರೆಂದರೆ ಎಸ್. ನಿಜಲಿಂಗಪ್ಪ, ಹರಿಹರದ ಗುಂಡೂರಾಯರು, ಬಳ್ಳಾರಿ ಸಿದ್ದಮ್ಮ, ಇಜಾರಿ ವಸುಪಾಲಪ್ಪ, ಕಾಸಲ ಶ್ರೀನಿವಾಸ ಶೆಟ್ಟರು. ಬಳ್ಳಾರಿ ವಾಸುದೇವರಾವ್ ಇನ್ನೂ ಮುಂತಾದವರು. ಹೋರಾಟದ ಮಾದರಿಗಳು ಭಿನ್ನವಾಗಿದ್ದರೂ ಅವರುಗಳು ಅನೇಕ ಬಾರಿ ಒಟ್ಟಾಗಿ ಚಳವಳಿಗೆ ಯುವಕರನ್ನು ಆಕರ್ಷಿಸಿ ಸಂಘಟಿಸಿದ್ದರು. ಇದರ ಫಲವಾಗಿ ಚಿತ್ರದುರ್ಗ ಹಾಗೂ

ದಾವಣಗೆರೆಯ ಯುವಕರಲ್ಲಿ ಸ್ವಾತಂತ್ರ್ಯ ಹೋರಾಟದ ಕಿಡಿ ಹಚ್ಚಿದರು. ಎಲ್ಲೆಲ್ಲೂ ಹೋರಾಟದ ಉತ್ಸಾಹವನ್ನು ತುಂಬಿ ಚಳವಳಿಯನ್ನು ತೀವ್ರಗೊಳ್ಳುವಂತೆ ಮಾಡಿದರು. ಜನರ ಮನಸ್ಸಿನ ಮೇಲೂ ಇದರ ಪ್ರಭಾವವುಂಟಾಗಿ ಚಳವಳಿಗಾರರಿಗೆ ತನು ಮನ ಧನಗಳ ಸಹಾಯ ನೀಡಿ ಪ್ರೋತ್ಸಾಹಿಸಿದರು.

ದಾವಣಗೆರೆ ಸ್ವಾತಂತ್ರ್ಯ ಹೋರಾಟದ ಮುಖ್ಯ ಕೇಂದ್ರಸ್ಥಳಗಳಲ್ಲಿ ಒಂದಾಯಿತು. ಸ್ವದೇಶಿ ಚಳವಳಿ ಮತ್ತು ಕಾನೂನು ಭಂಗ ಚಳವಳಿಯ ಪ್ರಭಾವ ದೇಶದುದ್ದಕ್ಕೂ ಹಬ್ಬಿ ದಾವಣಗೆರೆ ಜಿಲ್ಲೆಯ ಜನತೆಯ ಮೇಲೂ ಪರಿಣಾಮ ಉಂಟುಮಾಡಿತು. ಚಿತ್ರದುರ್ಗ ಹಾಗೂ ದಾವಣಗೆರೆಗಳಲ್ಲಿ ಪ್ರತಿಭಟನೆ, ಹರತಾಳ ವ್ಯಾಪಕವಾಗಿ ಹಬ್ಬಿತು. ಈ ಸಂದರ್ಭದಲ್ಲಿ ಹರ್ಡೇಕರ್ ಮಂಜಪ್ಪನವರು ಈ ಭಾಗಕ್ಕೆ ಭೇಟಿ ನೀಡಿದ ನಂತರ ಜನರು ಮತ್ತಷ್ಟು ಉತ್ಸಾಹಗೊಂಡರು. ಹೋರಾಟ ತೀವ್ರಗೊಂಡಿತು. ವಿದೇಶಿ ವಸ್ತುಗಳನ್ನು ಬಹಿಷ್ಕರಿಸಿ, ಸುಟ್ಟುಹಾಕಲಾಯಿತು. ವಿದೇಶಿ ಬಟ್ಟೆಗಳನ್ನು ಯಾರೂ ಉಪಯೋಗಿಸ ಬಾರದು, ಕೇವಲ ಸ್ವದೇಶಿ ಬಟ್ಟೆಗಳನ್ನು ಮಾತ್ರ ಉಪಯೋಗಿಸಬೇಕೆಂದು ಜನರಲ್ಲಿ ಮನವಿ ಮಾಡಲಾಯಿತು. ದಾವಣಗೆರೆ ಜಿಲ್ಲೆಯಾದ್ಯಂತ ಪ್ರತಿ ಹಳ್ಳಿ-ಹಳ್ಳಿಗೂ ಚಳವಳಿಗಾರರು ಹೋಗಿ ಖಾದಿ ಬಗ್ಗೆ ಪ್ರಚಾರ ಮಾಡಿದರು. ಪ್ರತಿಯೊಬ್ಬರೂ ಖಾದಿ ಬಟ್ಟೆಯನ್ನು ಧರಿಸಬೇಕು, ವಿದೇಶಿ ವಸ್ತುಗಳನ್ನು ತಿರಸ್ಕರಿಸಬೇಕು ಎಂಬುದು ಸ್ವದೇಶಿ ಚಳವಳಿಗಾರರ ಮಂತ್ರವಾಗಿತ್ತು. ಹೋರಾಟದ ವರದಿಯನ್ನು ತರಿಸಿಕೊಂಡ ಗಾಂಧೀಜಿಯವರು ದಾವಣಗೆರೆಗೆ ಭೇಟಿ ನೀಡಲು ನಿರ್ಧರಿಸಿದರು. ಗಾಂಧೀಜಿಯವರು ಮಾರ್ಚ್ ೨, ೧೯೩೪ರಂದು ದಾವಣಗೆರೆಗೆ ಆಗಮಿಸಿ ಜನರನ್ನು ಉದ್ದೇಶಿಸಿ ಮಾತನಾಡಿದರು. ಆ ಸಂದರ್ಭದಲ್ಲಿ ''ದೇಶಕ್ಕೆ ಸ್ವಾತಂತ್ರ್ಯ ದೊರಕುವವರೆಗೆ ಹೋರಾಟ ನಿಲ್ಲಿಸುವುದಿಲ್ಲ'' ಎಂದು ಜನರೆಲ್ಲರೂ ಒಕ್ಕೊರಲಿನಿಂದ ಕೂಗಿ ಗಾಂಧೀಜಿಯವರಿಗೆ ಬೆಂಬಲ ಸೂಚಿಸಿದರು. ಹೀಗೆ ಗಾಂಧೀಜಿಯವರ ಆಗಮನ ಸಾರ್ವಜನಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಹಲವಾರು ಬದಲಾವಣೆಗಳು ಕಾಣಿಸಿಕೊಳ್ಳುವುದಕ್ಕೆ ಕಾರಣ ವಾಯಿತು. ಸ್ವದೇಶಿ ಎನ್ನುವ ಕಲ್ಪನೆಯೇ ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆಗಳನ್ನು ಮೈಗೂಡಿಸಿಕೊಂಡಿರುವಂಥದ್ದು.

ಭಾರತದ ಸ್ವಾತಂತ್ರ್ಯ ಹೋರಾಟದ ಚರಿತ್ರೆಯನ್ನೊಮ್ಮೆ ಅವಲೋಕಿಸಿದಾಗ ಅದರಲ್ಲಿ ಹಲವಾರು ಮಜಲುಗಳು ಕಂಡುಬರುತ್ತವೆ. ಅವುಗಳಲ್ಲಿ ಸ್ವದೇಶಿ ಚಳವಳಿ ಪ್ರಮುಖ ವಾದದ್ದು. ಗ್ರಾಮ ಮತ್ತು ನಗರಗಳೆರಡನ್ನೂ ವ್ಯಾಪಿಸಿದ್ದ ಈ ಚಳವಳಿ ಭಾರತದಾದ್ಯಂತ ಕಂಡುಬಂತು. ಸ್ವದೇಶಿಯ ಮೂಲಕ ಬಂಡವಾಳ ಕೇಂದ್ರಿತ ವಿದೇಶಿ ಆಳ್ವಿಕೆಯನ್ನು ವಿರೋಧಿಸುವ ಹಾಗೂ ಸ್ಥಳೀಯ ಅರ್ಥವ್ಯವಸ್ಥೆಯನ್ನು ಪುನಶ್ಚೇತನಗೊಳಿಸುವ ಉದ್ದೇಶ ಅದರಲ್ಲಿ ಅಡಕವಾಗಿತ್ತು. ಕೈಗಾರಿಕಾ ಬಂಡವಾಳದ ಏಕಸ್ವಾಮ್ಯವನ್ನು ಮುರಿಯುವುದಕ್ಕೆ ಇದು ಪ್ರಬಲ ಅಸ್ತ್ರವಾಗಿ ಬಳಕೆಯಾಯಿತು. ಮೇಲ್ನೋಟಕ್ಕೆ ಇದೊಂದು ರಾಜಕೀಯ ಘಟನೆಯಾಗಿ ಕಂಡುಬಂದರೂ ಬ್ರಿಟಿಷರನ್ನು ಆರ್ಥಿಕವಾಗಿ ಕ್ಷೀಣಿಸುವಂತೆ ಮಾಡುವ ತಂತ್ರ ಇದರಲ್ಲಿತ್ತು. ವಿದೇಶಿ ವಸ್ತುಗಳನ್ನು ಬಹಿಷ್ಕರಿಸುವುದು, ಸುಟ್ಟುಹಾಕುವುದು ಮುಂತಾದ ಘಟನೆಗಳು ಬ್ರಿಟಿಷ್ ಸರ್ಕಾರಕ್ಕೆ ಸ್ವಲ್ಪಮಟ್ಟಿನ ಭಯ, ಆತಂಕಗಳನ್ನು ಸೃಷ್ಟಿಸಿದ್ದೂ ನಿಜ. ತಿಲಕ್, ಗಾಂಧೀಜಿ ಮುಂತಾದ ರಾಷ್ಟ್ರನಾಯಕರ ಮುಂದಾಳತ್ವದಲ್ಲಿ ಸ್ವದೇಶಿ ಚಳವಳಿ ಭಾರತದಾದ್ಯಂತ ತುಂಬ ಬಿರುಸಿನಿಂದ ನಡೆಯಿತು.

ದಾವಣಗೆರೆ ಜಿಲ್ಲೆಯಲ್ಲಿ ಬ್ರಿಟಿಷ್ ಆಳ್ವಿಕೆಯ ವಿರುದ್ಧ ನಿರಂತರ ಹೋರಾಟಗಳು ನಡೆದವು. ಇದರಲ್ಲಿ ಸಮಾಜದ ಎಲ್ಲ ವರ್ಗದ ಜನರೂ ಭಾಗವಹಿಸಿದರು. ರೈತರು, ಕುಶಲಕರ್ಮಿಗಳು, ಕೈಗಾರಿಕಾ ಕಾರ್ಮಿಕರು ಹಾಗೂ ಮಹಿಳೆಯರು ಬ್ರಿಟಿಷ್ ಆಳ್ವಿಕೆಯ ವಿರುದ್ಧ ಧ್ವನಿ ಎತ್ತಿದರು. ಇವರೆಲ್ಲರೂ ಕೆಲವು ಸ್ವದೇಶಿ ಚಳವಳಿಯ ಮುಖಂಡರ ನಾಯಕತ್ವದಲ್ಲಿ ಹೋರಾಟ ನಡೆಸಿದರು. ಈ ರೀತಿಯಾಗಿ ಹೋರಾಟವು ಭಿನ್ನ ಭಿನ್ನ ಸ್ವರೂಪಗಳನ್ನು ಪಡೆದುಕೊಂಡು ನಡೆಯಿತು. ಸ್ವದೇಶಿ ಚಳವಳಿಯು ಮುಂದಿನ ಎಲ್ಲ ಹೋರಾಟಗಳಿಗೆ ಪ್ರೇರಕ ಶಕ್ತಿಯಾಗಿ ಕಂಡುಬಂತು. ಸ್ವದೇಶಿ ಚಳವಳಿಯು ಯಾವುದೋ ಒಂದು ಸಂದರ್ಭದಲ್ಲಿ ಒಂದು ಘಟನೆಯ ವಿರುದ್ಧ ಹುಟ್ಟಿಕೊಂಡದ್ದಾದರೂ ನಂತರ ನಡೆದ ಎಲ್ಲ ಹೋರಾಟಗಳ ಸಂದರ್ಭಗಳಲ್ಲೂ ಸ್ವದೇಶಿ ಪ್ರಜ್ಞೆ ಬಲವಾಗಿ ಕೆಲಸ ಮಾಡಿತು. ಆದರೆ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಕಂಡುಬಂದ ಸ್ವದೇಶಿ ಕಲ್ಪನೆಯು ಭಿನ್ನವಾಗಿತ್ತು. ಇದು ಪಕ್ಷ ರಾಜಕೀಯ ಮತ್ತು ಧಾರ್ಮಿಕ ಹಿತಾಸಕ್ತಿಗಳಿಂದ ಕೂಡಿರುವಂತಹದು. ಇದು ದೇಶದ ಸಮಗ್ರತೆಗೆ ಅಪಾಯಕಾರಿಯಾದ ಬೆಳವಣಿಗೆ. ಹೀಗಾಗಿ ಸ್ವದೇಶಿ ಎಂದ ಮಾತ್ರಕ್ಕೆ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಸಂದರ್ಭಗಳಲ್ಲಿ ನಡೆದಿದ್ದು ಒಂದೇ ಮಾದರಿಯದ್ದು ಎಂಬುದಾಗಿ ಗ್ರಹಿಸುವುದು ತಪ್ಪಾಗುತ್ತದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕಂಡುಬಂದ ಸ್ವದೇಶಿ ಚಳವಳಿ ಬ್ರಿಟಿಷರನ್ನು ಭಾರತದಿಂದ ಹೊಡೆದೋಡಿಸುವ ಹಾಗೂ ಇಲ್ಲಿನ ಸ್ಥಳೀಯ ಕೃಷಿ ಮತ್ತು ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸುವ ಉದ್ದೇಶದಿಂದ ಕೂಡಿತ್ತು. ಇದಕ್ಕೆ ಗಾಂಧೀಜಿಯಂಥವರ ಸಮರ್ಥ ನಾಯಕತ್ವ ದೊರಕಿತು. ಈ ಕಾರಣಗಳಿಂದಾಗಿ ಭಾರತದ ಸ್ವಾತಂತ್ರ್ಯ ಹೋರಾಟದ ಚರಿತ್ರೆಯಲ್ಲಿ ಸ್ವದೇಶಿ ಚಳವಳಿ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿತು.

**ಹಿರೇಬಿದ್ರಿ ಹೊಳಬಸಪ್ಪ**
ಸಂಶೋಧನಾ ವಿದ್ಯಾರ್ಥಿ, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

## ಬಂಡಾಯ ಸಾಹಿತ್ಯ ಬದಲಾದ ಪರಿಸ್ಥಿತಿಯಲ್ಲಿ ತನ್ನ ನೆಲೆಯನ್ನು ಗುರುತಿಸಿಕೊಳ್ಳಬೇಕು. ಬದಲಾದ ಪರಿಸ್ಥಿತಿ ಎಂದರೇನು ?

ನಮ್ಮ ರಾಷ್ಟ್ರದ ಸಾರ್ವಭೌಮತೆಯನ್ನು ಏನೇ ಬೆಲೆ ತೆತ್ತರೂ ಕಾಯ್ದುಕೊಳ್ಳಬೇಕು. ಇದು ನಮ್ಮ ರಾಜ್ಯಾಂಗ ನಮ್ಮ ಪ್ರತಿಯೊಬ್ಬ ಪ್ರಜೆಗೂ ವಿಧಿಸಿರುವ ಕರ್ತವ್ಯ. ಆದರೆ ಇಂದು ಇದೇ ರಾಜ್ಯಾಂಗ ರಕ್ಷಣೆಯ ಪ್ರಮಾಣ ತೊಟ್ಟ ಪ್ರಧಾನಿಯಿಂದ ಪ್ರಾರಂಭಿಸಿ, ನಮ್ಮ ನಾಯಕರುಗಳು ಜಾಗತಿಕ ಬಂಡವಾಳದ ಅದರ ಪ್ರತಿನಿಧಿಗಳಾದ ಅಮೆರಿಕವೇ ಮುಂತಾದ ಪಾಶ್ಚಿಮಾತ್ಯ ಸರ್ಕಾರಗಳ ಅಡಿಯಾಳುಗಳಂತೆ ವರ್ತಿಸುತ್ತಿದ್ದಾರೆ.

ಮಾನವೀಯತೆ ನಮ್ಮ ಸಂಸ್ಕೃತಿಯ ಮೂಲನೆಲೆಯೆಂದು ಹೇಳಲಾಗುತ್ತಿತ್ತು. ಇಂದು ಭಟ್ಟಿ ಇಳಿದ ಮತೀಯತೆ ನಮ್ಮ ಎಲ್ಲ ವ್ಯವಹಾರಗಳನ್ನೂ ನಿರ್ದೇಶಿಸುತ್ತಿದೆ. ಜಾತಿ ವಿನಾಶವನ್ನೂ ಜಾತ್ಯತೀತ ಸಮಾಜವನ್ನೂ ಸ್ಥಾಪಿಸುವುದೆಂದು ನಾವು ಈ ಹಿಂದೆ ಘೋಷಿಸಿ, ಅದಕ್ಕಾಗಿ ಶ್ರಮಿಸುತ್ತಿದ್ದೆವು. ಆದರೆ ಇಂದು ಜಾತಿ ಪ್ರತಿಷ್ಠೆ ನಮ್ಮ ಸಮಾಜದ ಎಲ್ಲ ಪ್ರಕ್ರಿಯೆಗಳನ್ನು ರೂಪಿಸುತ್ತಿದೆ.

ಹೊಸ ಆದರ್ಶಗಳಿಂದ ಪ್ರೇರಿತರಾಗಿ, ಅತೀವ ಆತ್ಮವಿಶ್ವಾಸದಿಂದ ಜಾಗತಿಕವಾಗಿ ನಾವು ವರ್ತಿಸುತ್ತಿದ್ದೆವು. ಇಂದು ಹಲವು ಆತಂಕಗಳನ್ನು ತುಂಬಿಕೊಂಡು, ಅಸಹಾಯಕತೆಯನ್ನು ಮೆರೆಯುತ್ತಿದ್ದೇವೆ. ಸಾಮಾಜಿಕ ವಿವೇಕವನ್ನು ಕೈಬಿಟ್ಟು ಎಲ್ಲದಕ್ಕೂ ಆರ್ಥಿಕವಾಗಿ ಲಾಭದಾಯಕವೇ ಅಲ್ಲವೇ, ಸಮರ್ಥನೀಯವೇ ಅಲ್ಲವೆ ಎಂಬುದಕ್ಕೆ ಪ್ರಥಮ ಆದ್ಯತೆ ನೀಡುತ್ತಿದ್ದೇವೆ. ಇದು ಆರ್ಥಿಕ ವಿವೇಕವೆಂದು ಹೇಳಲಾಗುತ್ತಿದೆ. ಸಾಂಸ್ಕೃತಿಕ ಜವಾಬ್ದಾರಿಯನ್ನು ಕೈಬಿಟ್ಟು ಮಾರುಕಟ್ಟೆಯ, ಮಿಲಿಟರಿಯ ಧರ್ಮಕ್ಕೆ ಶರಣಾಗಿದ್ದೇವೆ.

ಇದು ಬದಲಾದ ಪರಿಸ್ಥಿತಿ. ಬಂಡಾಯ ಇದರ ವಿರುದ್ಧ, ಸಮಾನತೆ ಮಾನವೀಯತೆಯ ಕೇಂದ್ರ. ಇದನ್ನು ಸಾಧಿಸುವುದು ಉದ್ದೇಶ. ಜಾತೀಯತೆ ಮತ್ತು ಕೋಮುವಾದಕ್ಕೆ ರಾಜಿಯಿಲ್ಲದ ವಿರೋಧ ಬೇಕು. ಇವು ದಿನನಿತ್ಯದ ಸಾಮಾಜಿಕ ಕಾಳಜಿಯಾಗಬೇಕು. ಇವನ್ನು ಬಂಡಾಯ ಸಾಹಿತಿ ನಿರಂತರ ಪ್ರತಿಪಾದಿಸಬೇಕು. ಅದನ್ನು ತಾನೇ ಬದುಕಿ ತೋರಿಸುವ ಸವಾಲನ್ನು ಸ್ವೀಕರಿಸಬೇಕು.

– ಬರಗೂರು ರಾಮಚಂದ್ರಪ್ಪ

*(ದಿನಾಂಕ 9-2-2008ರಂದು ಮೊಳಕಾಲ್ಮೂರಿನಲ್ಲಿ ನಡೆದ ಚಿತ್ರದುರ್ಗ ಜಿಲ್ಲೆ ಬಂಡಾಯ ಸಾಹಿತ್ಯ ಸಮಾವೇಶದಲ್ಲಿ ಮಾತನಾಡುತ್ತ ಹೇಳಿದ್ದು. ವರದಿ : ಕೆ. ಎಸ್. ಪಾರ್ಥಸಾರಥಿ)*

# ಇದು ಎಂಥಾ ಧರ್ಮವಯ್ಯಾ – ಒಂದು ಚಿಂತನೆ

ದೇವರ ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಎಲ್ಲ ಕಂದಾಚಾರಗಳನ್ನು ಮೂಢ ನಂಬಿಕೆಗಳನ್ನು ಶರಣರು ಪ್ರಶ್ನಿಸಿದ್ದಾರೆ. ಮನುಷ್ಯನಿಂದ ಸೃಷ್ಟಿಸಲ್ಪಟ್ಟು, ಹೊಗಳಿಸಿಕೊಂಡು, ಪುರೋಹಿತಶಾಹಿಗಳ ಕೈಗೊಂಬೆಯಾಗಿ, ತನಗಿರಲು ವೈಭವದ ದೇವಾಲಯಗಳನ್ನು ನಿರ್ಮಿಸಿಕೊಂಡು ಕಾಣಿಕೆ ಎಂಬ ಲಂಚ ಪಡೆದು, ವರಕೊಡುವ ದೇವರು, ಸರ್ವ ವಿಧದಿಂದಲೂ ಪರಾವಲಂಬಿಯಾಗಿರುವ ಸತ್ಯ ನಮ್ಮ ಮುಂದಿದೆ. ದೇವಾಲಯವೆಂಬ ನಿಜ ಜೈಲಿನಲ್ಲಿ ಬಂಧಿತನಾಗಿ ಪೂಜಾರಿಗಳ ಅಧೀನನಾಗಿ, ಬೆಳಿಗ್ಗೆ ಸ್ನಾನ, ಪೂಜೆ, ನೈವೇದ್ಯ ಸ್ವೀಕರಿಸಿ, ಹಗಲು ಕಲ್ಯಾಣೋತ್ಸವ, ರಾತ್ರಿ ಶಯನೋತ್ಸವ ಮಾಡಿಸಿಕೊಂಡಿರುವ ದೇವರಿಗೆ, ಜನಸಾಮಾನ್ಯರ ಕಷ್ಟಗಳು ಕಾಣಲು ಸಾಧ್ಯವೇ ? ದೇವರ ಅಲಂಕಾರಕ್ಕಾಗಿ ಬೆಳ್ಳಿ, ಬಂಗಾರ ವಜ್ರ ವೈಢೂರ್ಯಗಳು, ಉತ್ಸವಗಳಿಗಾಗಿ ಲಕ್ಷಾಂತರ ಹಣ ಖರ್ಚು ಮಾಡುವ ಶ್ರೀಮಂತರು, ಭ್ರಷ್ಟ ಉದ್ಯೋಗಿಗಳು ತುಂಬಿರುವ ಈ ದೇಶದಲ್ಲಿ, ದೇವರು ಕಣ್ಣು ತೆರೆದು ನೋಡಲೂ ಸಾಧ್ಯವಿಲ್ಲದ ಸ್ಥಿತಿ ನಿರ್ಮಾಣವಾಗಿದೆ. ನಮ್ಮ ಪುರಾಣಗಳಲ್ಲಿ ತುಂಬಿರುವ ದೇವ ದೇವತೆಯರ ಕಥೆಗಳು ನೀತಿಬಾಹಿರ ಪೊಳ್ಳು ಸಂಗತಿಗಳಿಂದ ತುಂಬಿವೆ. ಭೀತಿ ಹುಟ್ಟಿಸುವ ಕಥೆಗಳನ್ನು ಹೇಳುತ್ತಾ, ದೇವರ ಕಲ್ಪನೆ ಬಿತ್ತುವ ತಾಯಂದಿರು, ಪುರೋಹಿತರು, ಪ್ರಶ್ನೆ ಕೇಳಿದರೆ ಬೈಯುವ ತಂದೆ, ಅಣ್ಣ ಅಜ್ಜಂದಿರು, ಏಟು ಕೊಡುವ ಶಿಕ್ಷಕರು. ಕಷ್ಟ ಬಂದಾಗಲೆಲ್ಲ ದೇವರ ಮುಂದೆ ಕೈಜೋಡಿಸುವ, ಪುರೋಹಿತರಿಗೆ ಬಾಬಾಗಳಿಗೆ ಕಾವಿಧಾರಿಗಳ ಕಾಲಿಗೆ ಬೀಳುವ ಹಿರಿಯರು.



ರಾಕೆಟ್ ಹಾರಿಸಲೂ ರಾಹುಕಾಲ ನೋಡುವ ನಮ್ಮ ದೇಶದ ವಿಜ್ಞಾನಿಗಳು, ಭಾವಿ ಜನಾಂಗವನ್ನು ಅಜ್ಞಾನದಲ್ಲಿಯೇ ಬೆಳೆಸಿ, ಮೂಢ ಆಚರಣೆಗಳನ್ನು ಮನದಾಳದಲ್ಲಿ ಬಿತ್ತಿ, ಇದೇ ಜಗತ್ತಿನ ಅತ್ಯಂತ ಶ್ರೇಷ್ಠ ತಿಳುವಳಿಕೆ, ಉನ್ನತ ಮಾರ್ಗ, ಜಗತ್ತಿಗೇ ಆಧ್ಯಾತ್ಮ ಮಾರ್ಗ ತೋರುತ್ತಿರುವವರು ನಾವು ಭಾರತೀಯರು ಎಂದು ಹೆಮ್ಮೆಯಿಂದ ಬೀಗುತ್ತಾರೆ. ವೇದ, ಪುರಾಣಗಳಲ್ಲಿ ಮಹಾಭಾರತ ರಾಮಾಯಣಗಳಲ್ಲಿ ತುಂಬಿರುವ ದೇವರು, ದೇವರ ಅವತಾರಗಳು, ಲಂಪಟದೇವತೆಗಳ ಲೀಲೆಗಳು ಸ್ವರ್ಗ ನರಕ ಲೋಕಗಳ ಕಲ್ಪನೆಗಳು, ಪೂರ್ವ ಜನ್ಮ ಸಿದ್ಧಾಂತಗಳು, ಕರ್ಮ ಸಿದ್ಧಾಂತಗಳು ಜನತೆಯನ್ನು ಕತ್ತಲೆ ಎಂಬ ಅಜ್ಞಾನಕ್ಕೆ ತಳ್ಳಿದೆ. ಯಜ್ಞ, ಯಾಗ, ಬಲಿಗಳಿಂದ ದೇವರನ್ನು ತೃಪ್ತಿ ಪಡಿಸುವ ಪುರೋಹಿತ ಶಾಹಿಗಳು, ಪೂಜಾರಿಗಳು ದೇವರ ಮಧ್ಯವರ್ತಿ ಏಜೆಂಟರಂತೆ ಕೆಲಸ ಮಾಡುತ್ತಿರುವುದು ವಿಪರ್ಯಾಸ. ದೇವರ ದರ್ಶನದಿಂದಲೇ ಮೋಕ್ಷ, ದೇವರ ದರ್ಶನ ಹಣವಿದ್ದವರಿಗೆ ಮಾತ್ರ ಸಾಧ್ಯ. ಸತ್ತ ಮೇಲೆ ಸ್ವರ್ಗದಲ್ಲಿ ಸೀಟು ಬೇಕಾದರೆ ಈಗಲೇ ಹಣಕೊಟ್ಟು ಪುಣ್ಯ ಸಂಪಾದಿಸಿರಿ ಎನ್ನುತ್ತವೆ, ನಮ್ಮ ಪುರಾಣ ಗ್ರಂಥಗಳು. ಪುರೋಹಿತರು, ಜಗದ್ಗುರುಗಳು, ಸ್ವರ್ಗಕ್ಕೆ ದಾರಿ ತೋರುವ, ಟಿಕೆಟ್ ಕೊಡುವ ಏಜಂಟರಾಗಿದ್ದಾರೆ.

ದಂತ ಗೋಪುರದಲ್ಲಿರುವ ಆಚಾರ್ಯ ಪರಂಪರೆಯ ಪೀಠಾಧೀಶ್ವರರು ಪರಂಪರೆಗೆ ಜೋತುಬಿದ್ದು ತಮ್ಮ ಆಡಂಬರದ ಪೂಜೆ ವೈಭವ, ಅಡ್ಡ ಪಲ್ಲಕ್ಕಿ ಉತ್ಸವಗಳನ್ನು ಮುಂದುವರಿಸಿಕೊಂಡೇ ಬಂದಿದ್ದಾರೆ. ಪ್ರಾಚೀನ ಧಾರ್ಮಿಕ ಗ್ರಂಥಗಳಲ್ಲಿ ಉಲ್ಲೇಖವಾದ ಅನೇಕ ಜೀವನತತ್ವಗಳು ಸಂಸ್ಕೃತ ಭಾಷೆಯಲ್ಲಿದ್ದು ಜನಸಾಮಾನ್ಯರನ್ನು ತಲುಪುವುದರಲ್ಲಿ ವಿಫಲವಾಗಿವೆ. ಸಂಸ್ಕೃತ ಪಂಡಿತರು ಈ ಗ್ರಂಥಗಳ ಅಧ್ಯಯನ ಮಾಡಿ ಅವುಗಳಲ್ಲಿರುವ ತತ್ವಗಳನ್ನು ಪ್ರವಚನಗಳ ಮೂಲಕ ಪ್ರಸಾರಕ್ಕೆ ಪ್ರಯತ್ನಿಸಿದರೂ ಕ್ಲಿಷ್ಟವಾದ ಆಚರಣೆಗಳನ್ನು ಜನಸಾಮಾನ್ಯರು ಮಾಡಲು ಆರ್ಥಿಕವಾಗಿ ಶಕ್ತರಾಗಿರಲಿಲ್ಲವಾದ್ದರಿಂದ ಅವು ಕೆಲವೇ ಶ್ರೀಮಂತರ ಸ್ವತ್ತಾಗಿ ಉಳಿದಿವೆ. ಸಂಸ್ಕೃತ ಪಂಡಿತರ ಉಪನ್ಯಾಸಗಳೂ, ಸಾಮಾನ್ಯವಾಗಿ, ವೇದ ಆಗಮ ಉಪನಿಷತ್ತುಗಳನ್ನು ಆಧರಿಸಿ, ಭಗವದ್ಗೀತೆ, ಮಹಾಭಾರತ, ರಾಮಾಯಣಗಳ ಉಲ್ಲೇಖಗಳಿಂದ ಕೂಡಿದ್ದು, ಜನಸಾಮಾನ್ಯರಿಗೆ ಹಿಡಿಸದಂತಾಗಿವೆ. ವರ್ಗಭೇದ, ವರ್ಣಭೇದ, ಅಸ್ಪೃಶ್ಯತೆ, ಮೂರ್ತಿ ಪೂಜೆಗಳ ವಿರುದ್ಧ, ಧಾರ್ಮಿಕವಾಗಿ ಸ್ವಾತಂತ್ರ್ಯ ಪಡೆದ ಬಡವರು ಹಿಂದುಳಿದವರು ಇಂದಿಗೂ ಆಚಾರ್ಯ ಪರಂಪರೆಯ ಮಠಗಳಿಂದ ದೂರವೇ ಇದ್ದಾರೆನ್ನುವುದು ಮಾತ್ರ ಸತ್ಯ.

ಪುರೋಹಿತಶಾಹಿಯ ಭಾರತೀಯರ ಕಲ್ಪನೆಯ ಭಗವಂತ, ಸನಾತನ ದೇವರು ಆದಿ ಮಧ್ಯಾಂತರಹಿತ, ಸರ್ವವ್ಯಾಪಿ, ಸ್ವಯಂ ಪ್ರಕಾಶ, ಸೃಷ್ಟಿ, ಸ್ಥಿತಿ, ಲಯಕರ್ತ, ಸ್ವಯಂ ಚೈತನ್ಯ, ಸ್ವಯಂ ಭೂ, ನಿರ್ಗುಣ, ನಿರಾಕಾರ ಸರ್ವಾಂತರ್ಯಾಮಿ, ಸರ್ವಜ್ಞ , ಸರ್ವಶಕ್ತ, ದಯಾಮಯ ಮುಂತಾಗಿ ಪದ ಪುಂಜಗಳಿಂದ ಮೂಢನಂಬಿಕೆಗಳನ್ನು ಜನರಲ್ಲಿ ಬಿತ್ತಿದ್ದಾರೆ. ಆಚಾರ್ಯ ಪರಂಪರೆಯ ಗುರುಗಳು ತಮ್ಮ ಮಠಮಂದಿರಗಳಿಂದ ಹೊರಬಂದು ಒಟ್ಟು ಸಮಾಜದ ಹಿತಚಿಂತನೆಯನ್ನಾಗಲಿ, ಹಿಂದುಳಿದವರ ಬಡವರ ಉದ್ಧಾರಕ್ಕೆ ವಿದ್ಯಾಮಂದಿರಗಳನ್ನು ಪ್ರಸಾದ ನಿಲಯಗಳನ್ನು ಸ್ಥಾಪಿಸುವುದಕ್ಕಾಗಲೀ ಆದ್ಯತೆ ನೀಡದೆ, ತಮ್ಮ ಮಠಗಳಿಗೆ ಸೀಮಿತರಾಗಿ, ಶ್ರೀಮಂತ ಭಕ್ತರ ಮನೆಗಳಲ್ಲಿ ವೈಭವ ಪೂಜೆ, ಕಾಣಿಕೆ ಸ್ವೀಕಾರ ಮತ್ತು ಆಡಂಬರದ ಅಡ್ಡಪಲ್ಲಕ್ಕಿ ಉತ್ಸವಗಳಲ್ಲಿ ನಿರತರಾಗಿದ್ದಾರೆ. ಜನಸಾಮಾನ್ಯರಿಗಾಗಿ ಕನ್ನಡ ಶಾಲೆಗಳನ್ನು ತೆರೆಯದೆ, ಆಚಾರ್ಯ ಪರಂಪರೆಯ ಸಂಸ್ಕಾರ ವಿಧಿಗಳನ್ನು ಬೋಧಿಸಲು ಸಂಸ್ಕೃತ ಶಾಲೆಗಳನ್ನು ತೆರೆದರು. ಯಜ್ಞ , ಯಾಗ, ನವಗ್ರಹ ಪೂಜೆ ಮುಂತಾದ ಆಚರಣೆಗಳು ಮುಂದುವರಿಯಲು ಕಾರಣರಾಗಿದ್ದಾರೆ. ಸಂಸ್ಕೃತದ ಮಂತ್ರಗಳನ್ನು ಬಳಸುತ್ತಾ ಜನಸಾಮಾನ್ಯರಿಂದ ದೂರವೇ ಉಳಿದರು.

ಪೀಠ ಪರಂಪರೆ ಹೆಸರಿನಲ್ಲಿ ಎತ್ತರದ ಪೀಠ, ಬಂಗಾರದ ಕಿರೀಟ, ಬೆಳ್ಳಿ ಪಲ್ಲಕ್ಕಿ, ಬೆಳ್ಳಿ ತೇರು, ಮೂರ್ತಿ ಪೂಜೆಗಳಲ್ಲಿ ಮುಳುಗಿದರು. ಸಂಸ್ಕೃತ ಭಾಷೆಯಲ್ಲಿದ್ದ ಪ್ರಾಚೀನ ಗ್ರಂಥಗಳನ್ನು ಆಧ್ಯಾತ್ಮ ತತ್ವಗಳನ್ನು ತಮ್ಮಲ್ಲಿಯೇ ಪೋಷಿಸಿಕೊಂಡು ಬಂದರು. ತಾವು ಯಾವ ಪೀಠಕ್ಕೆ ಅಧಿಪತಿಗಳಾಗಿದ್ದರೋ ಆ ಪೀಠದ ಪರಂಪರೆಯ ಶ್ರೀಮಂತ ಭಕ್ತರಿಗೆ ಮಾತ್ರ ಗುರುಗಳಾಗಿ ದಂತ ಗೋಪುರದಲ್ಲಿಯೇ ಉಳಿದುಬಿಟ್ಟರು. ಸಂನ್ಯಾಸಿಗಳಾದರೂ, ವೈರಾಗ್ಯ ಜೀವನ ನಡೆಸದೆ, ಆಡಂಬರದ ವೈಭವದ ಜೀವನಕ್ಕೆ ಮರುಳಾದರು. ಹತ್ತು ಬೆರಳಿಗೆ ಇಪ್ಪತ್ತು ವಜ್ರ ಖಚಿತ ಉಂಗುರಗಳು ಬಂಗಾರದ ರುದ್ರಾಕ್ಷಿ ಹಾರಗಳು. ಚಿನ್ನದ ಕಿರೀಟಗಳು, ರೇಷ್ಮೆ ವಸ್ತ್ರಗಳು ಇವರ ನಿತ್ಯದ ಪೂಜಾಕಾಲದ ಆಭರಣಗಳು ಪೂಜಾ ಸಾಮಗ್ರಿಗಳು, ಊಟದ ತಟ್ಟೆಗಳೂ, ಸಿಂಹಾಸನ, ಪೂರ್ಣ ಬೆಳ್ಳಿಯಿಂದ ಕೂಡಿದ್ದು, ಪೂಜಾ ವೈಭವದಿಂದ ಶ್ರೀಮಂತರನ್ನು ಮಾತ್ರ ಆಶೀರ್ವದಿಸುತ್ತಾ ಬಂದರು. ಮೂಲ ಆಚಾರ್ಯರಾಗಲಿ, ಅನುಭಾವಿಗಳಾಗಲಿ ಹೇಳಿದ ಜೀವನ ತತ್ವಗಳನ್ನು ತಾವೂ ಅನುಸರಿಸದೆ, ಇತರರಿಗೂ ಬೋಧಿಸದೆ ದಂತಗೋಪುರದಲ್ಲೇ ಉಳಿದದ್ದು ವಿಪರ್ಯಾಸ. ಧರ್ಮ ಸಭೆಗಳಲ್ಲಿ ಆಶೀರ್ವಚನ ನೀಡುತ್ತಾ ಪೀಠವು ಅಪ್ಪಣೆ ಕೊಡಿಸುವುದೇನೆಂದರೆ ಅಣಿ ಮುತ್ತುಗಳನ್ನು ಶ್ರೀಮಂತ ಭಕ್ತರಿಗೆ ಭ್ರಷ್ಟ ಅಧಿಕಾರಿಗಳಿಗೆ ವಿಶೇಷವಾಗಿ ಆಶೀರ್ವದಿಸುತ್ತಾ ತಮ್ಮದೇ ಸೀಮಿತ ಜಗತ್ತಿನ ಜಗದ್ಗುರುಗಳೆನಿಸಿದರು.

ಕಳೆದ ಶತಮಾನದ ಆರಂಭದಲ್ಲಿ ಕೆಲವು ಮಠಗಳು ಮುಖ್ಯವಾಗಿ ವಿರಕ್ತ ಪರಂಪರೆಯ ಮಠಗಳು, ಜನರಿಗೆ, ಬಡವರಿಗೆ, ಹಳ್ಳಿಗರಿಗೆ ಜಾತಿ ಭೇದ ಮಾಡದೆ ವಿದ್ಯೆ ಪಡೆಯುವಂತೆ ಪ್ರೇರೇಪಿಸಿ ಉಚಿತ ಪ್ರಸಾದ ನಿಲಯಗಳನ್ನು ಸ್ಥಾಪಿಸಿದರು. ಇದರಿಂದಾಗಿ ವಿದ್ಯೆಯಿಂದ, ಅಕ್ಷರಜ್ಞಾನದಿಂದ ವಂಚಿತರಾಗಿದ್ದ ಬಹುಪಾಲು ಹಿಂದುಳಿದ ಜನರು ವಿದ್ಯೆಯನ್ನು ಪಡೆದು, ಉದ್ಯೋಗ ಪಡೆಯುವಂತಾಗಿದ್ದು ಬಹುದೊಡ್ಡ ಸಾಧನೆ ಎನ್ನಬಹುದು. ಹೀಗೆ ವಿದ್ಯೆ ಪಡೆದ ಜನ ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿಸಿದರು. ವೈದ್ಯರಾಗಿ, ಎಂಜಿನೀಯರುಗಳಾಗಿ, ವಿಜ್ಞಾನಿಗಳಾಗಿ, ವಕೀಲರಾಗಿ ಸಾವಿರಾರು ಹಳ್ಳಿಗರು, ಹಿಂದುಳಿದವರು ಬಡವರು ಸೇವೆ ಸಲ್ಲಿಸತೊಡಗಿದ್ದವರಲ್ಲಿ ವಿರಕ್ತ ಮಠಗಳ ಪಾತ್ರ ಮಹತ್ವದ್ದು. ವಿದ್ಯಾವಂತರಾದ ಜನಸಾಮಾನ್ಯರು ಸರಳವಾದ ಕನ್ನಡ ಭಾಷೆಯಲ್ಲಿ ಆಧ್ಯಾತ್ಮ ಬೋಧಿಸುವ ವಚನ ಸಾಹಿತ್ಯದತ್ತ ಆಕರ್ಷಿತರಾದರು. ವಚನ ಸಾಹಿತ್ಯ ಪರಿಷ್ಕರಣೆ, ಪ್ರಕಟಣೆ, ಪ್ರಸಾರವನ್ನು ವಿರಕ್ತಮಠಗಳು ಪ್ರಧಾನವಾಗಿ ಕೈಗೆತ್ತಿಕೊಂಡವು. ವಿಶ್ವವಿದ್ಯಾನಿಲಯಗಳು, ಸರ್ಕಾರ ಸಹ ಜೀವಪರ ಕಾಳಜಿಯ ವಚನಸಾಹಿತ್ಯ ಪ್ರಕಟಣೆಗೆ ಆದ್ಯತೆ ನೀಡಿದವು. ಜನಸಾಮಾನ್ಯರು, ಹಿಂದುಳಿದವರು, ಗ್ರಾಮಾಂತರವಾಸಿಗಳು, ವಚನಸಾಹಿತ್ಯದಿಂದ ಪ್ರೇರಿತರಾಗಿ ಸಭೆ ಸಮಾರಂಭಗಳಲ್ಲಿ ಧಾರ್ಮಿಕ ಸಭೆಗಳಲ್ಲಿ ವಚನಗಳ ವಾಚನ, ಮನನ, ಗಾಯನದ ಮೂಲಕ ಪ್ರಸಾರ ಮಾಡಿದರು. ಕೇವಲ ಹುಟ್ಟಿನಿಂದಲೇ ಅಸ್ಪೃಶ್ಯರಾದವರು, ಹಿಂದುಳಿದವರು, ಬಡವರು ಯಾವುದೇ ಭೇದವಿಲ್ಲದೆ ಅನುಭವ ಮಂಟಪದಲ್ಲಿ ಶರಣರಾಗಿ, ಸಮಾನತೆಯನ್ನು ಅನುಭವಿಸಿದ್ದು, ಸ್ತ್ರೀಯರಿಗೂ ಸಮಾನ ಹಕ್ಕು ದೊರಕಿಸಿದ ಶ್ರೇಯಸ್ಸು ೧೨ನೇ ಶತಮಾನದ ಶರಣರಿಗೆ ಸಲ್ಲುತ್ತದೆ.

ಜಯದೇವಪ್ಪ ಜೈನಕೇರಿ
ನಂ. ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ

**HOSATHU** Kannada Monthly /April 2008 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.